# ಮಯೂರ



# ಅರಿಕೆ

"ಮಯೂರ"ವು ಮೊದಲನೆಯ ಸಲ ಕೃಷ್ಣ ಕಂಪೆನಿಯ ಯಜಮಾನರು ಶ್ರೀ॥ ಅಶ್ವತ್ಥನಾರಾಯಣರಾಯರ ವಿಶ್ವಾಸದಿಂದ ಹೊರಬಿದ್ದಿತ್ತು. ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಟೆಕ್ಸ್ಟ್‌ಬುಕ್ ಕಮಿಟಿಯವರು ಇದನ್ನು ನಾಲ್ಕನೆಯ ಫಾರಮ್ಮಿಗೆ ಪಠ್ಯಪುಸ್ತಕವನ್ನಾಗಿ ಆರಿಸಿಕೊಂಡುದರಿಂದ ಎರಡನೆಯ ಸಲ ಹೊರ ಬೀಳಲು ಅವಕಾಶವಾಯಿತು. ಈ ಉಪಕಾರ ಮಾಡಿದ ಮಹನೀಯರೆಲ್ಲರಿಗೂ ಅನಂತಾನಂತ ವಂದನೆಗಳು.

ಮೊದಲನೆಯ ಆವೃತ್ತಿಯಲ್ಲಿದ್ದ ಸಣ್ಣಪುಟ್ಟ ದೋಷಗಳನ್ನು ನಿವಾರಿಸುವ ಯತ್ನದಲ್ಲಿ ಸಹಾಯಮಾಡಿದ ಹಿರಿಯರು ಶ್ರೀ॥ ಬೆಳ್ಳಾವೆ ವೆಂಕಟನಾರಣಪ್ಪನವರಿಗೂ ಮುದ್ರಣಕ್ಕೆ ಮುಂಚೆಯೇ ಈ ಪುಸ್ತಕವನ್ನು ಓದಿ ಉತ್ತೇಜನ ಕೊಟ್ಟ ಶ್ರೀ॥ ಎಸ್. ಜಿ. ಶಾಸ್ತ್ರಿಗಳು, ಸಿ. ಕೆ. ವೆಂಕಟರಾಮಯ್ಯನವರು ಮುಂತಾದ ವಿದ್ವನ್ಮಿತ್ರರಿಗೂ ನಾನು ಕೃತಜ್ಞನಾಗಿದ್ದೇನೆ.

ಮಯೂರದ ಮೊದಲನೆಯ ಭಾಗದ ಮುನ್ನುಡಿಯಲ್ಲಿ "ಮಯೂರವು ಕಥೆ, ಚರಿತ್ರೆಯಲ್ಲ, ಇದರಲ್ಲಿ ದಿಟಕ್ಕಿಂತಲೂ ದಿಟದಂತೆ ತೋರುವ ಸಟೆಯೇ ಹೆಚ್ಚು" ಎಂದು ಅರಿಕೆಮಾಡಿಕೊಂಡಿದ್ದೇನೆ. ಅದನ್ನು ಈಗಲೂ ಬದಲಿಸಬೇಕಾಗಿಲ್ಲ. ಆದರೂ, ಈ ಕಥೆಯಲ್ಲಿ ಬಂದಿರುವ ಒಂದೊಂದು ಅಂಶಕ್ಕೂ ಆಧಾರವಿದೆ. ಈ ಕಥೆಯನ್ನು ಬರೆಯುವುದಕ್ಕೆ ಮೈಸೂರು ಶಾಸನ ಇಲಾಖೆಯ ವರದಿಗಳು, ಕೌಟಿಲ್ಯನ ಅರ್ಥಶಾಸ್ತ್ರ, "Pallavas of Kanchi," "The sketches of Ancient South Indian History," "The Mysore Gazetteer" ಮೊದಲಾದ ಹಲವು ಗ್ರಂಥಗಳಿಂದ ವಿಷಯಗಳನ್ನು ಸಂಗ್ರಹಿಸಿದ್ದೇನೆ.

ಕಥಾಭಾಗದಲ್ಲಿ ಕಾಣುವ ಕೆಲವು ಯಂತ್ರ ವಿಶೇಷಗಳು, ಅಗ್ನಿವರ್ಷಣಾದಿ ಸಾಹಸಗಳು ಓದುಗರಿಗೆ ವಿಸ್ಮಯವನ್ನುಂಟುಮಾಡಿ ಇವು ಆಗಿನ ಕಾಲದಲ್ಲಿ ಎಂದರೆ ಸುಮಾರು ೧೬೦೦ ವರ್ಷಗಳ ಹಿಂದೆ ಇದ್ದುವೇ ಎನ್ನಿಸಬಹುದು. ಅಂತಹವರು ಅರ್ಥಶಾಸ್ತ್ರ, ಲಲಿತಾಸಹಸ್ರನಾಮ ಭಾಷ್ಯ, ಕಥಾಸರಿತ್ಸಾಗರ ಮುಂತಾದವುಗಳನ್ನು ನೋಡಬೇಕಾಗಿ ಪ್ರಾರ್ಥನೆ. ರಾಮಾಯಣದಲ್ಲಿ ತಾನಾಗಿ ಬೇಕಾದೆಡೆಗೆ ಹೋಗಬಲ್ಲ ಪುಷ್ಪಕವಿಮಾನದ ವರ್ಣನೆಯಿದೆ. ಕಥಾಸರಿತ್ಸಾಗರದಲ್ಲಿ ಕೀಲುಕುದುರೆಗಳ ಕಥೆ

ಗಳಿವೆ. ಲಲಿತಾಸಹಸ್ರನಾಮ ಭಾಷ್ಯದಲ್ಲಿ ವಿಷ್ಣುಯಂತ್ರದ ವರ್ಣನೆಯಿದೆ. ಅರ್ಥ ಶಾಸ್ತ್ರ ಶುಕ್ರನೀತಿ ಸಾರಗಳಲ್ಲಿ ಅಗ್ನಿಶರಾದಿಗಳ ವಿವರಣಗಳಿವೆ. ಹಿಂಗಣ್ಣು ಹೊಡೆದು ಸುಮಾರು ೩೦ ಅಡಿಯಿಂದ ಕೆಳಕ್ಕೆ ಇಳಿಯುತ್ತಿದ್ದವರನ್ನು ನೋಡಿದವರು ಅನೇಕರು ಇದ್ದಾರೆ.

ಮಯೂರದಲ್ಲಿ ಕನ್ನಡ ಜನತೆಯ ಸಂಸ್ಕೃತಿಯ ಚಿತ್ರವೊಂದನ್ನು ಮೂಡಿ ಸುವ ಯತ್ನವು ನಡೆದಿದೆ. ಸುಮಾರು ಹತ್ತಾರು ವರ್ಷಗಳು ಕಣ್ಣಿಟ್ಟು ಹುಡುಕಿ ನೋಡಿದುದರ ಫಲವಾಗಿ ಕರ್ಣಾಟಕ ಸಂಸ್ಕೃತಿಯು "ವೈದಿಕ ಸಂಸ್ಕೃತಿಯ ಪ್ರತಿ ಬಿಂಬ"ವೆಂಬುದು ಮನಸ್ಸಿಗೆ ಖಚಿತವಾಗಿದೆ. ಈ ಅಂಶವನ್ನು ಯಥಾಯೋಗ್ಯವಾಗಿ ವಿಲಂಬವಾಗಿ ಬರೆದು ಮಹಾಜನರ ಮುಂದೆ ಗ್ರಂಥರೂಪದಲ್ಲಿಡಲು ಪ್ರಯತ್ನವನ್ನು ಮಾಡುತ್ತಿದ್ದೇನೆ. ಮಯೂರವನ್ನು ಓದಿದ ಕನ್ನಡಿಗನಿಗೆ ಕರ್ಣಾಟಕದ ಅಭಿ ಮಾನವು ಒಂದಿಷ್ಟು ಹೆಚ್ಚಿದರೆ ಸಾಕು. ನಾನು ಈ ಗ್ರಂಥಕ್ಕಾಗಿ ಪಟ್ಟ ಶ್ರಮವು ಸಾರ್ಥಕವಾಗುವುದು.

ಮಯೂರನು ತನ್ನ ಸಿಂಹಾಸನವನ್ನು ಗೆದ್ದುಕೊಂಡಂತೆ ಈಗ ಕರ್ಣಾಟಕರು ತಮ್ಮ ಕರ್ಣಾಟಕತ್ವವನ್ನು ಗೆದ್ದುಕೊಳ್ಳಬೇಕಾಗಿದೆ. ಜೀವನದ ಆಶೋತ್ತರ ರೀತಿ ನೀತಿಗಳಲ್ಲಿ ಭಿನ್ನವಾಗಿ ಸರ್ವಗ್ರಾಹಿಯಾದ ಪರಸಂಸ್ಕೃತಿಯ ದಾಳಿಯಲ್ಲಿ ನಮ್ಮ ಅಸ್ತಿತ್ವ ವ್ಯಕ್ತಿತ್ವಗಳು ಕೊಚ್ಚಿಹೋಗುತ್ತಿವೆ. ಅದಕ್ಕಾಗಿ ಹಿರಿಯರೂ ಕಿರಿಯರೂ ಸರ್ವರೂ ಹೆಣಗಬೇಕಾಗಿದೆ. ಕುಗ್ಗಿ ಬಗ್ಗುತ್ತಿರುವ ನಮ್ಮ ವ್ಯಕ್ತಿತ್ವವನ್ನು ಕಾಪಾಡಿ ಕೊಳ್ಳುವ ಹಿರಿಯಾಸೆಯಿರುವವರಲ್ಲಿ ಒಬ್ಬರಾದ ಶ್ರೀಮಾನ್ ಎನ್. ಎಸ್. ಸುಬ್ಬರಾಯ ರವರಿಗೆ ಈ ಗ್ರಂಥವನ್ನು ಒಪ್ಪಿಸಿದ್ದೇನೆ. ಹತ್ತು ವರ್ಷಗಳ ಹಿಂದೆ ಕಾಲೇಜಿನ ಪ್ರಧಾನೋಪಾಧ್ಯಾಯರಾಗಿದ್ದಾಗ ತಮ್ಮ ಶಿಷ್ಯವರ್ಗವಾದ ನಮಗೆ ಅಕಾಂಡವಾಗಿ ಸಂಭವಿಸಿದ ಆಪತ್ತಿನಿಂದ ತಪ್ಪಿಸಿದಾಗ ಕೃತಜ್ಞತೆಯಿಂದ ಅವರದಾದ ಹೃದಯವು ಈಚೆಗೆ ದೊರೆತ ಸಮೀಪ ಪರಿಚಯದಿಂದ ಅವರ ಉತ್ಕಟ ಕರ್ಣಾಟಕಾಭಿಮಾನ ವನ್ನು ಕಂಡು ಮಾರುಹೋಗಿದೆ. ಆ ಹೃದಯವು ತನ್ನ ಭಕ್ತಿ, ಕೃತಜ್ಞತೆ ಗೌರವ ಗಳನ್ನು-ಅಲ್ಲ, ಪ್ರೀತಿಯನ್ನು-ಈ ರೀತಿಯಾಗಿ ಪ್ರದರ್ಶಿಸಲು ಅವರನ್ನು ಪ್ರಾರ್ಥಿಸಿ ಅವರ ಅಪ್ಪಣೆಯನ್ನು ಪಡೆದು ಈ ಗ್ರಂಥವನ್ನು ಅವರಿಗೆ ಸಮರ್ಪಿಸಿದೆ.

—**ದೇವುಡು.**



ಶ್ರೀಯುತ ಸುಬ್ಬರಾಯರವರ ಸನ್ನಿಧಿಯಲ್ಲಿ

ಶಿಷ್ಯನು ಭಕ್ತಿ ವಿಶ್ವಾಸಗಳಿಂದ

ಒಪ್ಪಿಸಿದ ಕಾಣಿಕೆ.

# ಮಯೂರ

——o——

## ಮೊದಲನೆಯ ಪ್ರಕರಣ

ಗುದ್ದಾಟವು ಬಲು ಸೊಗಸಾಗಿದ್ದಿತು. ಹರೆಯದವರು ಹೊಗಳುವುದಿರಲಿ, ಮೀಸೆಗಳು ಬೆಳ್ಳಗಾದವರೂ "ಭಲೆ" ಎಂದು ತಲೆದೂಗುವಂತಿದ್ದಿತು. ಒಂದೊಂದು ಸಲ ಜಟ್ಟಿಗಳ ಹುಡುಗನು ಗೆಲ್ಲುವಂತೆ ತೋರುವುದು, ಇನ್ನೊಂದು ಸಲ ರೆಪ್ಪೆ ಹೊಯ್ಯುವುದರೊಳಗಾಗಿ ಹಾರುವರ ಹೈದನಿಗೆ ಜಯವು ಲಭಿಸುವುದು ಎನ್ನಿಸುವುದು; ಅಂತೂ ಖಾಡಾಖಾಡಿ ಗುದ್ದಾಟ. ವಯಸ್ಸಿನಿಂದ ನೋಡುವುದಾದರೆ ಜೊತೆಯು ಚಿಕ್ಕದು. ಕೆಲಸ, ಕೈಚಳಕ, ಸಾಹಸ,—ಇವುಗಳಿಂದ ನೋಡುವುದಾದರೆ ಜೊತೆಯನ್ನು ಚಿಕ್ಕದೆನ್ನಲಾಗುವುದಿಲ್ಲ.

ಕೆಮ್ಮಣ್ಣುಮಟ್ಟೆಯಲ್ಲಿದ್ದವರು ಹೋರಾಡುತ್ತಿದ್ದರೆ ನೋಡುವವರು ಸುಮ್ಮನೆ ಕುಳಿತಿರುವುದು ಸಾಧ್ಯವೆ? 'ಚಿಕ್ಕ ಜೊತೆ ಕಣೋ' ಎಂದು ಉದಾಸೀನವಾಗಿ ಕುಳಿತಿದ್ದವರು, ಇತ್ತಕಡೆಗೆ ತಿರುಗಿ, ಮೀಸೆಯನ್ನು ತಿರುವುತ್ತ ಬೆರಗಾಗಿ ನೋಡುತ್ತ ಕುಳಿತರು. ಹೋರಾಡುವವರ ಮೇಲಿನ ಅಭಿಮಾನದಿಂದ ಅತ್ತಕಡೆ ಇತ್ತಕಡೆಯಾಗಿದ್ದವರು, ಏರಿಳಿಯುವ ಸೋಲು ಗೆಲುವುಗಳ ಸಂದರ್ಭಗಳೊಡನೆ ತಾವೂ ಹತ್ತಿಳಿದವರಂತೆ ಹಾರಾಡುತ್ತಿದ್ದರು. ಗರಡಿಯಲ್ಲಿ ಇದ್ದು ಮೊದಲಿನಿಂದ ನೋಡಿದವರು ಇರಲಿ, ಹೊರಗಿನಿಂದ ಬಂದವರೂ ಹಾಗೆಯೇ ದೊಣ್ಣೆಯನ್ನೂರಿಕೊಂಡು ನಿಂತುಬಿಟ್ಟರು. ಕೂಡಿದ್ದವರು ಕಾರಣವಿಲ್ಲದೆ ಬೇರೆ ಬೇರೆ ಪಕ್ಷಗಳನ್ನು ಹಿಡಿದರು. ಒಬ್ಬನು ಒಬ್ಬನನ್ನು, 'ಭಲಾರೆ! ಹೊಡಿಯೋ! ಉರುಳಿಸೋ!' ಎಂದನು. ಇನ್ನೊಬ್ಬನು, 'ಅದೇನು ಅಷ್ಟು ಸುಲಭವಲ್ಲ, ಭಿಕ್ಷಾನ್ನದ ತುತ್ತಲ್ಲ ಗಪ್ಪನೆ ಹೊಡೆದು ಹಾಕೋಕೆ!' ಎಂದನು. ಇನ್ನೊಬ್ಬನು, 'ಲೇ! ಅಲ್ಲ ಕಾಣೋ! ಅವರೆಲ್ಲೋ ಹುಳಿಯನ್ನದ ತೆರಳೆ ಎಂದುಕೊಂಡರೇನೋ ಕಾಣೋ!' 'ಸ್ವಾಮಿಯವರಿಗೆ ಹೇಳು, ಜಟ್ಟಿಗಳ ಮರಿ! ಗೆಲ್ಲುವುದು

ಬಿಟ್ಟೆಯಲ್ಲ' 'ಆಗಲಪ್ಪ ಆಗಲಿ! ಇನ್ನೊಂದು ಗಳಿಗೆಯಾಗಲಿ, ಗೊತ್ತಾಗುತ್ತದೆ' ಎಂಬ ಹಲವು ಬಗೆಯ ಮಾತುಗಳು ಹೆಚ್ಚಿದುವು.

ಮಾತಿಗೆ ಮಾತು ಹುಟ್ಟಿ ನಾಲಗೆಯು ಬೆಳೆದಹಾಗೆಲ್ಲ ಕೈಕೈಗೆ ಮೇಳನವಾಗಬೇಕಷ್ಟೆ! ಹಾಗೆಯೇ, ಎರಡು ಗುಂಪಿನವರಿಗೂ 'ದೊಣ್ಣೆ ತೆಗೆದುಕೊಳ್ಳೋ! ಬುರುಡೆ ಹಾರಿಸಿಬಿಡೋಣ' ಮೊದಲಾದ ಪರುಷ ವಾಕ್ಯಗಳೆಲ್ಲವೂ ಹಾರಾಡಿದುವು. ಅದೇ ಆವೇಶವಿದ್ದಿದ್ದರೆ, ಅಷ್ಟೊ ಆಗಿದ್ದರೆ, ಅದೇನೂ ಅತಿಶಯವಾಗುತ್ತಿರಲಿಲ್ಲ.

ಹಿರಿಯ ಒಟ್ಟೆಯು ಎಲ್ಲಿಯೋ ಇದ್ದವನು ಬಂದುಬಿಟ್ಟನು. ಆತನ ಎತ್ತರವಾದ ಆಕೃತಿಯನ್ನು ಬಾಗಿಲಲ್ಲಿ ಕಾಣುತ್ತಲೇ, ಎಲ್ಲರ ಮಾತುಗಳು ಅವರವರ ಬಾಯಲ್ಲಿಯೇ ನಿಂತುಬಿಟ್ಟುವು. 'ಅಣ್ಣಾವರು ಬಂದರು ಕಾಣೋ' ಎಂದು ಒಬ್ಬನ ಬಾಯಲ್ಲಿ ಬಂದಿತು. ಮತ್ತೊಬ್ಬನು ಬಾಗಿಲ ಕಡೆಗೆ ಹುಬ್ಬು ಹಾರಿಸಿದನು. ಇನ್ನೊಬ್ಬನು ಕಣ್ಣು ಮಿಟುಕಿಸಿ ಸನ್ನೆ ಮಾಡಿದನು. ಅಂತೂ ಎಲ್ಲವೂ, ತೆರೆಗಳ ಅಲ್ಲೋಲಕಲ್ಲೋಲದಿಂದ ಮೊರೆಯುತ್ತಿದ್ದ ಕಡಲು ತಟ್ಟನೆ ಶಾಂತವಾದಂತೆ ಆಗಿಹೋಗಿ, ಎಲ್ಲೆಲ್ಲಿಯೂ ಮೌನದ ನಿಶ್ಶಬ್ದತೆಯು ತಾನೇ ತಾನಾಯಿತು. ಹೋರಾಡುತ್ತಿದ್ದ ಜೋಡಿಯವರೂ ಕುಸ್ತಿಯನ್ನು ಬಿಟ್ಟು ಅತ್ತಿತ್ತ ಸರಿದರು.

'ಅಣ್ಣಾವರು' ಬಾಗಿಲಿಂದ ಇಳಿದು 'ಅದೇನಪ್ಪಾ! ಅಷ್ಟು ಗದ್ದಲವಾಗುತ್ತಿದ್ದುದು ತಟ್ಟನೆ ನಿಂತುಹೋಯಿತು?' ಎಂದು ನುಡಿಯುತ್ತ ಮಟ್ಟಿಯ ಬಳಿಗೆ ಬಂದನು. ಮುನಿಯಾ ಒಟ್ಟೆಯು ನಿಂತಿದ್ದ ಕಡೆಯಿಂದಲೇ 'ಏನೂ ಇಲ್ಲ ಅಣ್ಣಾ! ಈ ಸಣ್ಣ ಜೋಡಿಯ ಗುದ್ದಾಟ ನಡೆಯುತ್ತಿದ್ದಿತು. ಅದನ್ನೆಲ್ಲರೂ ಪಸಂದು ಮಾಡುತ್ತಿದ್ದರು, ಅಷ್ಟೆ!' ಎಂದನು. ಆತನು, 'ಹಾಗಾದರೆ ನಡೆಯಲಿ ಮತ್ತೆ! ನಮ್ಮ ಗರಡಿಯ ಹುಡುಗರು ಹವಣರಿತು ಗುದ್ದಾಡಿದರೆ ನಾನು ನೋಡಬೇಡವೆ?' ಎಂದನು.

ಕೊಂಚ ಉಪಚಾರ; ಇನ್ನು ಕೊಂಚ ಬಲವಂತ; ಅದರ ಮೇಲೆ 'ಅದಕ್ಕೇನು ಬಾ ಅಯ್ಯ ಎಂದರೆ!' ಮೊದಲಾದುವೆಲ್ಲವೂ ಕ್ರಮವಾಗಿ ನಡೆದುವು. ಕೊನೆಗೆ ಇಬ್ಬರೂ ಮತ್ತೆ ಮಟ್ಟಿಗೆ ಇಳಿದರು. ಇನ್ನಷ್ಟು

ಹೊತ್ತಿನೊಳಗಾಗಿ ಒಂದು ಅದ್ಭುತವಾದ ಮಲ್ಲಾಟವು ನಡೆದುಹೋಯಿತು. ಹಿರಿಯ ಜಟ್ಟಿಯು ಬೆರಗಾಗಿ ಹೋದನು. ಕಾದಾಡುತ್ತಿದ್ದವರು ತನ್ನ ಮಗ ಚೆಲುವಾಜಟ್ಟಿ, ಆ ಹೊಸದಾಗಿ ಬಂದ ಹಾರುವರ ಹೈದ.

ಪಟ್ಟುಗಳು, ವರಸೆಗಳು, ನುಗ್ಗುವುದು, ನುಸುಳುವುದು, ಹಿಡಿತ, ಹಾರಿಕೆ-ಇವು ಯಾವುದರಲ್ಲಿಯೂ ಈ ಚಿಕ್ಕಬಂಟರು ಇನ್ನು ಯಾವ ಹೆಸರಾದ ಹಿರಿಯರಿಗೂ ಕಡಿಮೆಯಿರಲಿಲ್ಲ. ಅರಮನೆಯಲ್ಲಿ ಶಾಲುಜೋಡಿ ಹೊದಿಸಿಕೊಂಡು ಬಂದವರಿಗೂ ಅಂದಿನ ಕುಸ್ತಿಯು ಹೆಸರನ್ನು ತರಬಲ್ಲುದೆನ್ನಿಸುವ ಹಾಗಿದ್ದಿತು. ಹಿರಿಯ ಜಟ್ಟಿಯೂ ತೊಟ್ಟಿದ್ದ ಕವಚದ ತೋಳನ್ನು ಸಾವರಿಸಿಕೊಂಡು, ಉಟ್ಟಿದ್ದ ಪಂಚೆಯನ್ನೆತ್ತಿಕಟ್ಟಿ, 'ಹುಂ! ಭಲೆ! ಭಾಪು!' ಎಂದು ಹುಮ್ಮಸ್ಸಿನ ಮಾತನಾಡಿ ಹುರಿದುಂಬಿಸುತ್ತಿದ್ದನು. ಎಲ್ಲರೂ ನಿಶ್ಶಬ್ದರಾಗಿದ್ದರು; ಕಣ್ಣುನೋಟ, ಮೈಯಲಗು, ತುಟಿಯಾಟಗಳಿಂದಲೇ ಉತ್ತೇಜನ ಕೊಟ್ಟರು. ಆಟವು ಅದ್ಭುತವಾಗಿ ನಡೆಯಿತು.

ಬಹಳ ಹೊತ್ತು ನಡೆದು ಕೊನೆಗೆ ಕುಸ್ತಿಯು ಮುಗಿಯಿತು. ಜಟ್ಟಿಯ ಮಗನು ಮೇಲಿದ್ದನು. ಹಾರುವರ ಹೈದನು ಹಣ್ಣಾಗಿ 'ಚಿತ್ತಾ'ದನು. ಎಲ್ಲರಿಗೂ ಹಾರಾಡುವಷ್ಟು ಸಂತೋಷ.

ಹಿರಿಯ ಜಟ್ಟಿಯು ಮಾತ್ರ ಸಂತೋಷಪಡಲಿಲ್ಲ. ನೇರವಾಗಿ ಮಗನ ಬಳಿಗೆ ಹೋಗಿ, 'ನಿನಗೆ ಹೇಳುವುದರಲ್ಲಿ ಅರ್ಧ ಈ ಹುಡುಗನಿಗೆ ಯಾರಾದರೂ ಹೇಳಿದ್ದರೆ, ಈ ವೇಳೆಗೆ ಅವನು ನಿನ್ನನ್ನು ಅರೆದು ಹಾಕಿ ಬಿಡುತ್ತಿದ್ದ. ಹೋಗೋ! ನಿನಗೇಕೋ ಕುಸ್ತಿ?' ಎಂದನು. ಹಾಗೆಯೇ ಹಾರುವರ ಹುಡುಗನನ್ನು ಮೆಚ್ಚುನೋಟದಿಂದ ಹತ್ತಿರ ಕರೆದು, 'ಏನಯ್ಯಾ! ಎಲ್ಲಿ ಕಲಿತೆ ಈ ವರಸೆ ಪಟ್ಟುಗಳನ್ನೆಲ್ಲ?' ಎಂದು ಕೇಳಿದನು. ಹುಡುಗನು ಏನೂ ಹೇಳದೆ ಸುಮ್ಮನೆ ನಿಂತಿದ್ದು, ಮತ್ತೆಯೂ ಆತನು ಅದೇ ಪ್ರಶ್ನೆಯನ್ನು ಕೇಳಲು, 'ನನಗೆ ಯಾರೂ ಹೇಳಿಕೊಡಲಿಲ್ಲ; ಕಪಿಗಳನ್ನು ನೋಡಿ ಕಲಿತೆ' ಎಂದು ಬಹು ವಿನಯದಿಂದ ಹೇಳಿ ಮುಖವನ್ನು ತಗ್ಗಿಸಿಕೊಂಡನು.

ಎಲ್ಲರೂ ಒಂದುಸಲ ನಕ್ಕಂತೆ ಮಾಡಿದರು. ಆದರೆ ನಗುವು ತುಟಿಯನ್ನು ಬಿಟ್ಟು ಹೊರಬೀಳಲೇ ಇಲ್ಲ. ಅಷ್ಟರೊಳಗಾಗಿ ಜಟ್ಟಿಯು, 'ನಿನಗೆ

ಒಳ್ಳೆಯ ಕುಸ್ತಿಗಾರನಾಗುವ ಯೋಗ್ಯತೆ ಇದೆ. ಇನ್ನುಮೇಲೆ ತಪ್ಪದೆ ನಿತ್ಯವೂ ಬಾ; ನಾನೇ ನಿನಗೆ ಕುಸ್ತಿಯನ್ನು ಹೇಳಿಕೊಡುತ್ತೇನೆ' ಎಂದು ಭುಜತಟ್ಟಿ ಹೊರಟನು.

ಇದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು. ಎಂಟು ಹತ್ತು ವರುಷಗಳಿಂದ ಒಂದೇಸಮನಾಗಿ ಗರಡಿಗೆ ಬರುತ್ತಿದ್ದವರುಂಟು; ಜಟ್ಟಿಯನ್ನು ನೆರಳಿನಂತೆ ಅನುಸರಿಸಿ ಆತನ ಅನುಗ್ರಹವನ್ನು ಯಾಚಿಸಿದವರುಂಟು; ಆತನ ಶಿಷ್ಯರೆಂದೆನ್ನಿಸಿಕೊಳ್ಳುವಷ್ಟು ಭಾಗ್ಯಪಡೆಯುವುದಕ್ಕಾಗಿ ಬೇಕಾದುದನ್ನು ಕೊಡಬಲ್ಲವರುಂಟು; ಆದರೆ, 'ಹೇಳಿಕೊಡುತ್ತೇನೆ ಬಾ' ಎಂದು ತಾನಾಗಿ ಕರೆಯುವುದು, ಅಥವಾ ವರಕೊಡುವುದು ಜಟ್ಟಿಗೆ ಇಲ್ಲವೇ ಇಲ್ಲವೆನ್ನಬಹುದು. ಅಂತೂ ಹಾರುವರ ಹುಡುಗನ ಭಾಗ್ಯವೇ ಭಾಗ್ಯ!

ಜಟ್ಟಿಯು ಹತ್ತು ಹೆಜ್ಜೆ ಹೋಗಿ, ತಟ್ಟನೆ ಹಿಂದಿರುಗಿ ಮಗನನ್ನು ಕರೆದು, 'ಓೋ! ನೀನು ಇಂದು ಗೆದ್ದುಬಿಟ್ಟೆ ಎಂದು ಜಂಭ ಮಾಡೀಯೇ. ಇನ್ನುಮೇಲೆ ಅಯ್ಯನವರೇ ನಿನಗೆ ಗುರುಗಳು. ಅವರ ಮೇಲೇನಾದರೂ ಮಚ್ಚರ ಗಿಚ್ಚರ ಇಟ್ಟೀಯೆ ಜೋಕೆ! ಹಾಗೆಂತ ಮುಟ್ಟೀ ಮುಟ್ಟು ಮುಂಚೆ' ಎಂದನು. ಹುಡುಗನೂ ಹಾಗೆಯೇ ಮಾಡಿದನು. ಜಟ್ಟಿಯು ಆ ಹಾರುವನನ್ನು ಕರೆದು, 'ಏನಯ್ಯಾ, 'ತಯಾರಿಗೆ ಏನು ತಿನ್ನುತ್ತೀಯೋ ನೀನು?' ಎಂದನು. ಹುಡುಗನು ಏನು ಹೇಳಬೇಕು? ದಿನವೂ ಭಿಕ್ಷಾನ್ನಕ್ಕಾಗಿ ಹೋಗುವನು; ಬಂದುದನ್ನೆಲ್ಲಾ ತಂದು ಗುರುವಿನ ಮುಂದಿಡುವನು; ಆತನು ತೆಗೆದಿತ್ತಷ್ಟರಲ್ಲಿ ತೃಪ್ತನಾಗುವನು. ಇಂಥವನು ತಯಾರಿ ತಿನ್ನುವುದೇನನ್ನು? ಹುಡುಗನ ಮೌನವು ಜಟ್ಟಿಗೆ ಎಲ್ಲವನ್ನೂ ಹೇಳಿತು. ಆತನೂ ಕೂಡಲೇ, 'ಮೊದಲನ್ನಕ್ಕೆ ನೀರು ಬಿಟ್ಟುಕೊಂಡು ತಿಂದುಬಿಡು. ಅದರ ಮುಂದೆ ಒಂದೂ ಅಲ್ಲ. ನಿಮ್ಮ ಗುರುಗಳಿಗೂ ಹೇಳು ನಾನು ಹೇಳಿದ ಮಾತನ್ನು' ಎಂದು ಹೊರಟುಹೋದನು.

ಗರಡಿಯವರೆಲ್ಲರೂ ಹುಡುಗರನ್ನು ಭುಜಗಳ ಮೇಲೇರಿಸಿಕೊಂಡು ಮೆರೆದುಬಿಟ್ಟರು. 'ಇನ್ನೇನು ಅಯ್ಯನವರೇ! ವಜ್ರಮುಷ್ಟಿಯ ಕಾಳಗಕ್ಕೆ ನಿಲ್ಲುವುದೆಂದಿಗೆ?' ಎಂದು ಎಲ್ಲರೂ ಕೇಳುವವರೇ! 'ಅಯ್ಯನವರ

ಪವಿತ್ರದ ಬೆರಳಿಗೆ ವಜ್ರನಖ ಬಂದಿತು' ಎಂದು ಹಾಸ್ಯಮಾಡಿದರು ಕೆಲವರು. ಒಬ್ಬನು ನಡುಹರೆಯದ ನೆಟ್ಟನೆಯ ಗಟ್ಟಿಯಾಳು, 'ಗರಡಿ ಗೆರಡು ಭುಜ ಹುಟ್ಟಿತು' ಎಂದು ಸಂತೋಷಪಟ್ಟುಕೊಳ್ಳುತ್ತಾ ಹೋದನು.

ಸುಮಾರು ಆರುತಿಂಗಳು ಇರಬಹುದು; ಅಷ್ಟರೊಳಗಾಗಿ ಗರಡಿಯವರಿಗೂ ಹಾರುವರ ಹೈದನಿಗೂ "ಪ್ರಾಣಕ್ಕೆ ಪ್ರಾಣ" ಎನ್ನುವಷ್ಟು ಸ್ನೇಹ ಬೆಳೆಯಿತು.



## ಎರಡನೆಯ ಪ್ರಕರಣ

ಸಂಜೆಯ ಸಮಯ. ಸೂರ್ಯನು ಮುಳುಗುವುದಕ್ಕೆ ಇನ್ನೂ ಸುಮಾರು ಒಂದು ಪ್ರಹರವಿರಬಹುದು, ಕೋಟೆಯ ಹೊರಗಿನ ಕುದುರೆಯ ಬಯಲಿನಲ್ಲಿ ರಾವುತರು ಕುದುರೆಗಳಿಗೆ 'ಕವಾಯಿತು' ಮಾಡಿಸುತ್ತಿದ್ದಾರೆ. ಅತ್ತ ಕಡೆ ಅರಸುಮಕ್ಕಳು ಕುದುರೆಯ ಸವಾರಿಯ ವರಸೆಯನ್ನು ಕಲಿಯುತ್ತಿದ್ದಾರೆ. ಒಬ್ಬರಿಗಿಂತಲೂ ಒಬ್ಬರು ಅತಿಸಾಹಸದ ಕಾರ್ಯಗಳನ್ನು ಮಾಡುತ್ತಿದ್ದಾರೆ. ಅಲ್ಲಿಗೆ ಸಾಮಾನ್ಯರು ಯಾರೂ ಹೋಗುವಹಾಗಿಲ್ಲ; ಸುತ್ತಲೂ ಭಟರ ಕಾವಲು.

ಅರಸು ಮಕ್ಕಳು ಸವಾರಿಯಲ್ಲಿ ಒಬ್ಬರಿಗಿಂತಲೂ ಒಬ್ಬರು ಜಾಣರು. ಸಾಮಾನ್ಯವಾಗಿ ಕುದುರೆಯ ಮೇಲೆ ನಿಂತು ಕತ್ತಿವರಸೆಯನ್ನು ಮಾಡುವುದರಲ್ಲಂತೂ ಆ ಮೂವರಲ್ಲಿ ಒಬ್ಬರನ್ನು ಒಬ್ಬರು ಮೀರಿಸಬೇಕಲ್ಲದೆ ಇನ್ನು ಯಾರೂ ಇವರ ಸರಿದೊರೆಯೂ ಆಗುವಂತಿಲ್ಲ. ಕಾಂಚೀಪುರದ ಅರಸು ಮಕ್ಕಳ ಕತ್ತಿಯ ವರಸೆ, ಕುದುರೆಯ ಸವಾರಿ, ಇವು ದೇಶದ ಮೇಲೆಲ್ಲ ಹೆಸರುವಾಸಿಗೆ ಬಂದವು. ಹೆಸರುಗೊಂಡ ಹಿಂದಿನ ರಾವುತರ ಪಡೆವಳರು ಒಬ್ಬಿಬ್ಬರಲ್ಲದೆ ಇನ್ನು ಯಾರೂ ಅವರನ್ನು ಮೀರಿಸಲಾರರು.

ಇಂದು ಅವರಿಗೆ ಹೊಸಪಾಠವಾಗುತ್ತಿದೆ: ಕುದುರೆಯ ಮೇಲೆ ಕುಳಿತುಕೊಂಡರೆ ಕುದುರೆಯು, ದಾಂಡಿನಿಂದ ಹೊಡೆದ ಚೆಂಡಿನಂತೆ, ಭೂಮಿಯನ್ನು ಮುಟ್ಟದೆ ಓಡಬೇಕು. ಅಂತಹ ಸಾಮರ್ಥ್ಯವನ್ನು ಕುದುರೆಯಲ್ಲಿ ಉಂಟು

ಮಾಡಬೇಕು. ಆ ಪಾಠವನ್ನು ಗುರುವು ಕಲಿಸುತ್ತಿದ್ದಾನೆ. ಅರಸು ಮಕ್ಕಳು ಕಲಿಯುತ್ತಿದ್ದಾರೆ.

ಇದ್ದುದಿದ್ದಹಾಗೆಯೇ ನಡುಕಲನಾದ ಸಿಂಹವರ್ಮನು ಕುದುರೆಯಿಂದ ಕಳಚಿಕೊಂಡನು. ಕುದುರೆಯು ಓಡುತ್ತಿದ್ದುದು ತಟ್ಟನೆ ಹಾಗೆಯೇ ನಿಂತು ಬಿಟ್ಟಿತು. ತಲೆಗೆ ಬಲವಾದ ಪೆಟ್ಟುತಗಲಿ ಆತನು ಮೇಲಕ್ಕೆ ಏಳಲಾರದೆ ಹೋದನು. ಸಮೀಪದಲ್ಲಿ ಭೃತ್ಯರು ಯಾರೂ ಇಲ್ಲ. ರಾಜಕುಮಾರನು ಕೆಳಗೆ ಬಿದ್ದುದನ್ನು ಕಂಡು ಅವರು ಅಲ್ಲಿಂದ ಓಡಿಬರುತ್ತಿದ್ದಾರೆ.

ಆ ಸಮಯಕ್ಕೆ ಸರಿಯಾಗಿ ಒಬ್ಬನು ಮಗ್ಗುಲಲ್ಲಿದ್ದ ಮರದ ಮೇಲಿಂದ ಧೊಪ್ಪನೆ ಕೆಳಕ್ಕೆ ಧುಮುಕಿದನು. ಆ ದಟ್ಟಿಯ ಪಂಚೆ, ಉತ್ತರೀಯ, ನೋಡಿದರೆ ಯಾವುದೋ ಒಂದು ಭಿಕ್ಷಾನ್ನದ ಹುಡುಗನೆಂದು ನಿಸ್ಸಂದೇಹ ವಾಗಿ ಹೇಳಬಹುದು. ಕೈಯಲ್ಲಿ ಒಂದು ಒದ್ದೆಯ ಪಂಚೆ. ನೇರವಾಗಿ ಬಿದ್ದವನ ಬಳಿಗೋಡಿ ಆತನನ್ನೆತ್ತಿ ತನ್ನ ತೊಡೆಯಮೇಲೆ ಮಲಗಿಸಿ ಕೊಂಡು ಒದ್ದೆಯ ಬಟ್ಟೆಯನ್ನು ನೆತ್ತಿ, ಮೊಗ, ಎದೆಗಳ ಮೇಲೆ ಹಾಕಿ ಉಪಚಾರ ಮಾಡುತ್ತಿದ್ದಾನೆ.

ಇನ್ನೊಂದು ಕ್ಷಣವೆನ್ನುವುದರೊಳಗಾಗಿ ಭಟರೂ ಕುದುರೆಗಳೂ ಬಂದುಬಿಟ್ಟುವು. ವೈದ್ಯನು ಬಂದು ರಾಜಕುಮಾರನಿಗೆ ಉಪಚಾರ ಮಾಡ ಲಾರಂಭಿಸಿದನು. ಆತನಿಗೆ ಇನ್ನೂ ಮೈಯರಿವು ಬಂದಿರಲಿಲ್ಲ.

ಎಲ್ಲರೂ ರಾಜಕುಮಾರನ ಕಡೆಗೆ ಲಕ್ಷ್ಯವಿಟ್ಟಿರುವಾಗ ಒಂದು ವಿಚಿತ್ರ ನಡೆಯಿತು. ಅರಸಿನ ಕಿರಿಯ ಮಗ ವಿಷ್ಣುಗೋಪನು ಇತರರಿ ಗಿಂತ ದುಡುಕ, ಬಲುಬೇಗ ರೇಗಿಬಿಡುವನು. ಬಾಯಿ ಬಲು ದುಡುಕು, ನಾಲಗೆಯು ಮಸೆದ ಕತ್ತಿಯ ಬಾಯ ಹಾಗೆ ಅತಿ ತೀವ್ರ, ಮಾತು ಕರುಳು ಕೊಯ್ಯುವ ಹಾಗೆ ಬಹು ಕಠೋರ; ಆತನ ನಚ್ಚಿನ ನೆಂಟರೂ ಮೆಚ್ಚಿನ ಗೆಳೆಯರೂ ಒಮ್ಮೊಮ್ಮೆ ಬೇಸರಪಡುವರು.

ಅರಸಿನ ಕಿರಿಯ ಮಗನು ನೇರವಾಗಿ ಹಾರುವರ ಹೈದನ ಬಳಿಗೆ ಬಂದು, 'ಲೇ! ಭಿಕ್ಷಾನ್ನದ ಪೋರ! ಇಲ್ಲಿಗಾರೋ ನಿನ್ನನ್ನು ಬಿಟ್ಟವರು?' ಎಂದನು. ಪೋರನಿಗೆ ರಾಜಕುಮಾರನ ಉಪಚಾರದ ಕಡೆಗೆ ಲಕ್ಷ್ಯವಿದ್ದಿತು;

ಈತನ ಪ್ರಶ್ನೆಯು ಕೇಳಿಸಲಿಲ್ಲ. ಅರಸು ಮಗನಿಗೆ ತಟ್ಟನೆ ಕೋಪಬಂದಿತು! 'ತಾನು ಮಾತನಾಡಿಸಿದರೂ ಮಾತನಾಡದಷ್ಟು ಜಂಭವೇ ಈ ಮುಕ್ಕನಿಗೆ' ಎಂದು ಕೈಯ್ಯಲ್ಲಿದ್ದ ಸೆಳೆಬೆತ್ತದಿಂದ ಎಳೆದು ಒಂದೇಟುಕೊಟ್ಟನು. ಮೇಲಕ್ಕೆದ್ದ ಬೆತ್ತದೊಡನೆಯೇ ಬಾಸುಂಡೆಯೂ ಎದ್ದಿತು.

ಇದೇನು ಸದ್ದೆಂದು ಅವರಿವರು ಇತ್ತ ಕಡೆಗೆ ತಿರುಗುವುದರೊಳಗಾಗಿ ಭಿಕ್ಷಾನ್ನವು ಮಿಷ್ಟಾನ್ನವನ್ನೆತ್ತಿ ಹಾಕಿಕೊಂಡು ಮೇಲೆ ಕುಳಿತುಕೊಂಡಿದೆ. ರೆಪ್ಪೆ ಮುಚ್ಚಿ ತೆಗೆಯುವುದರೊಳಗಾಗಿ ಮೂರು ನಾಲ್ಕು ಮುಷ್ಟಿಯ ಪೆಟ್ಟುಗಳು ರಾಜಕುಮಾರನಿಗೆ ಬಜೆಬೆಣ್ಣೆಯನ್ನು ತೀರಿಸಿ, ಪ್ರಾಣಗಳನ್ನು ಪರಲೋಕಯಾತ್ರೆಗೆ ತೆರಳಲು ಸಿದ್ಧಮಾಡಿವೆ.

ಅರಸುಮಗನಿಗೆ ಪ್ರಹಾರಗಳು ಬೀಳುತ್ತಿದ್ದರೆ ಭಟರು ಸುಮ್ಮನಿರಲು ಸಾಧ್ಯವೆ? ಅವರಿವರು ಬಂದು ಹುಡುಗನನ್ನು ಹಿಡಿದುಕೊಂಡರು. ಒಂದು ಗಳಿಗೆಯೊಳಗಾಗಿ ಅವನಿಗೆ, 'ತನಗೆ ಏನಾಗಬಹುದು?' ಎಂಬುದು ಹೊಳೆದು ಹೋಯಿತು. ಮಿಂಚಿಗಿಂತಲೂ ವೇಗವಾಗಿ ಮೇಲೆ ಬಿದ್ದು ಇತರರು ತನ್ನನ್ನು ಮುಟ್ಟುವದಕ್ಕಿಂತ ಮುಂಚೆಯೇ, ಮಗ್ಗುಲಲ್ಲಿದ್ದ ಭಟನ ಕೈಯಲಿದ್ದ ಕತ್ತಿಯನ್ನು ಕಿತ್ತುಕೊಂಡು, 'ಬನ್ನಿ, ಧೈರ್ಯವಿರುವವರು' ಎಂದನು. ಎಲ್ಲರೂ ಅವಾಕ್ಕಾಗಿ, ಅಪ್ರತಿಭರಾಗಿ ನಿಂತು ಹೋದರೇ ಹೊರತು ಯಾರೂ ಮುಂಬರಿಯಲಿಲ್ಲ.

ವೈಮರೆತು ಮಲಗಿದ್ದ ಸಿಂಹವರ್ಮನ ಉಪಚಾರದಲ್ಲಿದ್ದ ಕುಮಾರವಿಷ್ಣುವು ತಮ್ಮನನ್ನು ಅತ್ತ ಸರಿಸಿ ತಟ್ಟನೆದ್ದು, 'ಮೋರೆನೋಡುತ್ತ ನಿಂತಿದ್ದಾರೆ, ನುಗ್ಗಿರೋ ಮೇಲೆ!' ಎಂದನು. ಅವರಿವರು ಮೇಲೆಬಿದ್ದರು. ಅವರಿನ್ನೂ ಎರಡುಸಲ ಕತ್ತಿ ತಿರುವುವುದರೊಳಗಾಗಿ ಇಬ್ಬರ ಕೈಗಳು ಕೆಳಗಿಳಿದುವು; ಉಳಿದವರು ಹಿಂದಾದರು. ರಾಜಕುಮಾರನು ತಾನೇ ಕತ್ತಿಯನ್ನು ಹಿಡಿದು ಮುಂದಾದನು.

ರಾಜಕುಮಾರನು ಮುಂಬರಿದ ವೇಳೆಗೂ, ಹುಡುಗನ ಕೈ ಕತ್ತಿಯು ಮುರಿಯುವ ವೇಳೆಗೂ ಸರಿಯಾಯಿತು. ಬೇಕೆಂದಿದ್ದರೆ ಯುವರಾಜನು ಒಂದೇ ಕ್ಷಣದೊಳಗಾಗಿ ಎದುರಾಳಿಯನ್ನು ತೀರಿಸಿಬಿಡಬಹುದಾಗಿದ್ದಿತು.

ಆದರೆ ಯುವರಾಜನು ಅಂತಹವನಲ್ಲ, ನಿರಾಯುಧನ ಮೇಲೆ ಬಿದ್ದು ಗೆಲ್ಲು ವಂತಹ ಹೀನಮನದವನಲ್ಲ ಆತನು. ಅಲ್ಲದೆ, ಎದುರಾಳಿಯ ಕೈಚಳಕ ವನ್ನು, ಅವನ ಕತ್ತಿಯ ತಿರುಹಿನಲ್ಲಿರುವ ಸೊಬಗನ್ನು ನೋಡಿ ಮೆಚ್ಚಿರು ವಾಗ, ಅದೆಂತು ಬರಿಗೈಯವನ ಮೇಲೆ ಬೀಳುವುದು? ತಟ್ಟನೆ, 'ಹಿಡಿ, ಇದೇ ಕತ್ತಿಯನ್ನು ತೆಗೆದುಕೋ' ಎಂದು ತನ್ನ ಕತ್ತಿಯನ್ನೇ ಬಿಸುಟನು. ಹುಡುಗನೂ, ಕಾರ್ಮೋಡದಲ್ಲಿ ಕಾಣಿಸಿಕೊಂಡು ಭೂಮಿಯ ಕಡೆಗೆ ನುಗ್ಗಿ ಬರುವ ಸಿಡಿಲಿನ ಮರಿಯಂತೆ ಹೊಳೆಯುತ್ತಾ ತನ್ನ ಕಡೆಗೆ ಬರುತ್ತಿರುವ ಆ ಖಡ್ಗವನ್ನು ಹೊಳೆಹಿನಿಂದ ಹಿಡಿದು ತಿರುಗಿಸುತ್ತಾ ಮುಂದಾದನು.

ನಿಜವಾದ ಯುದ್ಧವಲ್ಲದೆ ಕೃತ್ರಿಮ ಕದನವಾಗಿದ್ದರೂ ಸರಿ, ಗರಡಿಯ ಮನೆಯಾಗಿದ್ದರೂ ಸರಿ, ಯುವರಾಜನು ಕೈಯಲ್ಲಿದ್ದ ಕತ್ತಿಯನ್ನೆಸೆದು ಆ ಪೋರನನ್ನು ಬಾಚಿ ತಬ್ಬಿಕೊಂಡುಬಿಡುತ್ತಿದ್ದನು. ಆದರೆ ಎದುರಾಳಿಯು ಸೆಳೆ ಮಿಂಚಿನ ವೇಗದಿಂದ ತನ್ನ ಪಟ್ಟಾಕತ್ತಿಯನ್ನು ತಿರುವುತ್ತಾ ಮೇಲ್ವಾಯ್ದು ಬರುತ್ತಿರುವಾಗ ಮನವು ಮೆಚ್ಚಿದೆಯೆಂದು ಸುಮ್ಮನೆ ನಿಲ್ಲುವುದೆಂತು? ಕುಮಾ ರನು ಕತ್ತಿಯೊಂದನ್ನು ಹಿಡಿದು ಎದುರಾದನು. ಇಬ್ಬರಿಗೂ ಹತ್ತಿತು ಕೈಗೆ ಕೈ.

ಆ ಹಾರಾಟ ನೆಗೆದಾಟಗಳು, ಆ ಎಳೆತ ತಿವಿತಗಳು, ಅಡ್ಡವಿಟ್ಟು ನುಗ್ಗುವ ವರಸೆಗಳು, ಎದುರಾಳಿಯ ಏಟನ್ನು ತಪ್ಪಿಸಿಕೊಂಡು ಗುರಿಯಿಟ್ಟು ಜಡಿವ ಏಟುಗಳು ಒಂದಕ್ಕಿಂತಲೂ ಒಂದು ಚಮತ್ಕಾರವಾಗಿವೆ. ಒಬ್ಬರ ನ್ನೊಬ್ಬರು ಮೀರಿಸಬೇಕೆಂಬ ಹುರುಡು ಹಜ್ಜೆಹಜ್ಜೆಗೂ ಪ್ರತಿಯೊಂದು ಕಾರ್ಯದಲ್ಲಿಯೂ ಕಾಣಬರುತ್ತಿದ್ದರೂ, ಒಬ್ಬರನ್ನೊಬ್ಬರು ಘಾತಿಸಬೇಕೆಂಬ ಕ್ರೌರ್ಯವು ಮಾತ್ರ ಯಾರಲ್ಲಿಯೂ ತೋರದು; ಎರಡು ಹುಲಿಮರಿಗಳು ಗುರ್‌ಗುರ್ರೆಂದು ಒಂದರೊಡನೊಂದು ಹೋರಾಡುವಂತೆ ಕಾಣುತ್ತಿದ್ದಿತಲ್ಲದೆ, ಶತ್ರುಗಳಿಬ್ಬರು ಎದುರಾಗಿ ಖಾಡಾಖಾಡಿಯಿಂದ ನಡೆಯಿಸುತ್ತಿರುವ ದುಮ್ಮಾ ನದ ಕಾಳಗದಂತಿರಲಿಲ್ಲ.

ಇಬ್ಬರೂ ಹೀಗೆ ಒಬ್ಬರಿಗೊಬ್ಬರು ಸೋಲದೆ ಹೋರಾಡುತ್ತಿರುವಾಗ, ಏಟುತಿಂದು ಮೈಮರೆತು ಬಿದ್ದಿದ್ದ ಮೂರನೆಯವನಿಗೆ ಶೈತ್ಯೋಪಚಾರದಿಂದ ಅರಿವು ಬಂದಿತು. ಅಪರಿಚಿತನಾದ ಭಿಕ್ಷುಕನ ಮುಷ್ಟಿಪ್ರಹಾರದಿಂದ

ಮೂರ್ಛೆಬಿದ್ದ ಅಪಮಾನವೊಂದು, ಹುಟ್ಟುಗುಣವಾದ ದುಡುಕೊಂದು, ಎರಡೂ ಸೇರಿ, ಆತನು ಹುರಿಗೊಂಡು ತಟ್ಟನೆದ್ದು, 'ಒದೆ ನಾಯಿಯನ್ನು!' ಎಂದು ಮುಂಬರಿದನು.

ಯುವರಾಜನು ತನ್ನ ಎದುರಾಳಿಯನ್ನು ಮತ್ತೊಬ್ಬನು ಬಂದು ಆಕ್ರಮಿಸುವುದನ್ನು ಒಲ್ಲನು; 'ಹಾ!' ಎಂದು ಆತನನ್ನು ನಿರೋಧಿಸುವ ಅವಸರದಲ್ಲಿ ಒಂದು ತಪ್ಪುಹೆಜ್ಜೆಯನ್ನಿಟ್ಟನು; ಕಣ್ಣಿನ ನೋಟದಿಂದ ತಮ್ಮನನ್ನು ನಿಯಮಿಸಬೇಕೆಂದು ಹವಣಿಸುತ್ತ ಎದುರಾಳಿಗೊಂದು ಅವಕಾಶವನ್ನು ಕೊಟ್ಟನು. ಅವನೂ ಉದಾರನೇ! ಕತ್ತಿಯನ್ನು ಪಯೋಗಿಸಲು ಸಿಕ್ಕಿದ ಅವಕಾಶವನ್ನು ಉಪಯೋಗಿಸಿಕೊಳ್ಳದೆ, ಕತ್ತಿಯಿಂದ ಯುವರಾಜನ ಕತ್ತಿಯನ್ನು ಹೊಡೆದು ಹಾರಿಸಿಬಿಟ್ಟು, ಆತನು ಮತ್ತೆ ತನ್ನ ಕಡೆಗೆ ತಿರುಗುವುದರೊಳಗಾಗಿ ಆತನ ಮೇಲೆ ಹಾರಿ, ಆತನನ್ನು ಮಗುವನ್ನೆತ್ತಿ ಕೊಳ್ಳುವಂತೆ ಎತ್ತಿಕೊಂಡು ವಿಷ್ಣುಗೋಪನ ಮೇಲೆ ಎಸೆದುಬಿಟ್ಟನು. ಯುವರಾಜನು ಚೆಂಗನೆ ಹಾರುವುದರೊಳಗಾಗಿ ವಿಷ್ಣುಗೋಪನಿಗೆ ಆತನ ಕಾಲು ತಗಲಿಬಿಟ್ಟಿತು. ವಿಷ್ಣುಗೋಪನು ಬಿದ್ದನು. ಯುವರಾಜನು ನೆಗೆದಿದ್ದ ನೆಗೆತವು ತಪ್ಪಿ ಆತನೂ ಬಿದ್ದುಹೋದನು.

ಆ ವೇಳೆಗೆ ಭಟರೆಲ್ಲರೂ ಸೇರಿಬಿಟ್ಟಿದ್ದರು. ಎಲ್ಲರೂ "ಹಿಡಿ, ಹಿಡಿ" ಎಂದು ಮುಂಬರಿದರು. ಕುದುರೆಯವರು ಹಾಗೆಯೇ ಬಳಸಿಕೊಂಡರು, ಪದಾತಿಗಳು ಹಾಗೆಯೇ ನುಗ್ಗಿದರು. ಆದರೂ ಪ್ರೋರನು ಮಾತ್ರ ಹಿಂಜರಿಯಲಿಲ್ಲ. ರಾವುತರ ಭಲ್ಲೆಗಳು ಮುಂಬರಿದು ತನ್ನ ಕಡೆಗೆ ಹೆಬ್ಬಾವಿನ ನಾಲಗೆಯಂತೆ ನುಗ್ಗುತ್ತಿರುವುದನ್ನು ಕೂಡ ಗಮನಿಸದೆ, ಚೆಂಗನೆ ಹಾರಿ ಎದುರಿದ್ದ ಕುದುರೆಯ ತಲೆಯಮೇಲೆ ಮುಂಗಣ್ಣು ಹೊಡೆದು ಆ ವ್ಯೂಹದಿಂದ ಪಾರಾಗಿ ಹೋದನು. ಮತ್ತೊಂದು ಗಳಿಗೆಯೊಳಗಾಗಿ ವಿಷ್ಣುಗೋಪನ ಕುದುರೆಯು ಅರೆಬೆತ್ತಲೆಯ ಸವಾರನೊಬ್ಬನನ್ನು ಬಿಲ್ಲಿನಿಂದೆಸೆದ ಅಂಬಿನ ವೇಗದಿಂದ ಹೊತ್ತುಕೊಂಡು ಹೊರಟುಹೋಯಿತು. ರಾವುತರೂ ಅವನನ್ನು ಬೆನ್ನಟ್ಟಿ ಹೋಗುವ ಸಾಹಸ ಮಾಡಿದರು. ಆದರೆ ಅವರ ಸಾಹಸಕ್ಕೆ ಫಲವಾಗಲಿಲ್ಲ.

ಇಷ್ಟೆಲ್ಲಾ ಆಗುವುದರೊಳಗಾಗಿ ಸಂಜೆಯಾಗಿ ಹೋಯಿತು. ಇನ್ನು ಕೊಂಚ ಹೊತ್ತಾಗಿ ಕಾವಳವು ಹೆಚ್ಚಾಗಿ ಕವಿಯುವುದರೊಳಗಾಗಿ ಊರಲ್ಲೆಲ್ಲಾ ಯುವರಾಜರ ಕತ್ತಿಯ ಕಾಳಗದ ಸುದ್ದಿಯು ಹಬ್ಬಿತು. ವಿಷ್ಣುಗೋಪನ ಕುದುರೆಯು ಕೋಟೆಯ ಬಡಗಲ ಹೆಬ್ಬಾಗಿಲಿಗೆ ಸ್ವಲ್ಪದೂರದಲ್ಲಿ ಕಟ್ಟಿದ್ದು, ಹಜ್ಜೆಗಳು ಕೋಟೆಯಕಡೆಗೆ ಬಂದಿದ್ದುವಾದುದರಿಂದ ಅಪರಿಚಿತನು ಕೋಟೆಯಲ್ಲಿಯೇ ಇರಬೇಕೆಂದು ಗೊತ್ತಾಯಿತು. ಕೋಟೆಯಿಂದ ಹೊರಗೆ ಯಾರೂ ಹೋಗಕೂಡದೆಂದು ಕೊತ್ತವಾಲನ ಕಟ್ಟಪ್ಪಣೆಯಾಯಿತು. ಕಾವಲು ಬಲಿಯಿತು. ಯಾರಾದರೂ ಹೋಗಲೇ ಬೇಕಾಗಿ ಬಂದರೆ, ಗುರುತುಕಂಡವರಾಗಿದ್ದರೂ ಕಾವಲಿನವರು ಬೆನ್ನು ತೆಗೆಯಿಸಿ, 'ಬೆತ್ತದ ಏಟಿನ ಬಾಸುಂಡೆಯಿದೆಯೇ' ಎಂದು ನೋಡುವರು. ಬಾಸುಂಡೆ ಇರುವುದು ಒಬ್ಬನಿಗೆ; ಕಂಡಕಂಡವರಿಗೆಲ್ಲ ಎಲ್ಲಿಂದ ಬರಬೇಕು?



## ಮೂರನೆಯ ಪ್ರಕರಣ

ಕೊತ್ತವಾಲನು ಮನೆಮನೆಯಲ್ಲಿಯೂ ಹುಡುಕಿರೆಂದು ಕಳ್ಳಭಂಟರನ್ನು ಕಳುಹಿಸಿದನು. ಸುಮಾರು ಒಂದು ಪ್ರಹರವೆನ್ನುವುದರೊಳಗಾಗಿ ಸುದ್ದಿಯು ಬಂದಿತು: 'ತುಂಗಾತೀರದ ಅಗ್ರಹಾರದಿಂದ ಬಂದಿರುವ ಈಶಭಟ್ಟರ ಜೊತೆಯಲ್ಲಿ ಮಯೂರಶರ್ಮ ಎಂಬ ಒಬ್ಬ ಹುಡುಗನು ಬಂದಿದ್ದಾನೆ. ಹರೆಯದವನು. ಅವನಿಗೆ ವೇದದ ಓದಿಗಿಂತಲೂ ಗರಡಿ ಮಾಡುವುದರಲ್ಲಿ ಆಸೆ ಹೆಚ್ಚು. ಅವನು ಹೇಳಿಕೊಟ್ಟವರಿಲ್ಲದೆ ಹಿರಿಯ ಜಟ್ಟಿಯ ಮಗನನ್ನು ಗೆದ್ದನು. ಅವನೀಗ ದೊಡ್ಡಗರಡಿಯವರಿಗೆ ಅಚ್ಚುಮೆಚ್ಚು. ಅವನಿಗೂ ಕತ್ತಿಯಾಟ ಬರುತ್ತದೆ. ಆದರೆ ಯುವರಾಜನನ್ನು ಎದುರಿಸುವ ಧೈರ್ಯವೂ ಇಲ್ಲ, ಶಕ್ತಿಯೂ ಇಲ್ಲ. ಇಂದು ಅವನು ಸಂಜೆಗೆ ಮುಂಚೆ ಬಟ್ಟೆ ಒಗೆಯುವುದಕ್ಕೆ ಕೆರೆಗೆ ಹೋದವನು ಇನ್ನೂ ಮನೆಗೆ ಬಂದಿಲ್ಲ'

ಕೊತ್ತವಾಲನಿಗೆ ಸಂಶಯವು ಹುಟ್ಟಿ, ಭಟ್ಟರ ಮನೆಗೆ ಆಳಿನಮೇಲೆ ಆಳು ನಡೆಯಿತು. ಒಂದು ಪ್ರಹರವಾದರೂ ಶಿಷ್ಯನ ಸುಳಿವಿಲ್ಲ. ಭಟ್ಟರಿಗೆ

ಸಂದೇಹವಾಗಿ, ಆಳೊಬ್ಬನನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು, ಅಡ ಕೆಲೆಯ ಲಂಚಕೊಟ್ಟು, 'ಏನಪ್ಪಾ! ಸಮಾಚಾರ? ಏತಕ್ಕೆ ರಾಜಭಟರು ಅವನನ್ನು ಹುಡುಕಿಕೊಂಡು ಬರುತ್ತಿರುವುದು?' ಎಂದು ಕೇಳಿದರು. ಅವನೂ ಸಣ್ಣಗೆ, ನಡೆದ ಕಥೆಯನ್ನೆಲ್ಲ, ಚಿಟ್ಟದಷ್ಟು ಇದ್ದುದನ್ನು ಹಿಡಿಯಷ್ಟು ಮಾಡಿ, ಹೇಳಿದನು.

ಗುರುಗಳಿಗೆ ಸಂದೇಹ ಬಲವಾಯಿತು. ತಮ್ಮ ಶಿಷ್ಯನ ಯೋಗ್ಯತೆಯನ್ನು ಗುರುಗಳು ಚೆನ್ನಾಗಿಯೂ ಬಲ್ಲರು. ಹಿಂದೆ ಯಾವುದೋ ಮಾತಿಗೆ, ಹೂ! ಹಸುವಿಗೆ ಹುಲ್ಲುತರುವ ಮಾತಿಗೆ ಬಂದು, ಪಳ್ಳಿಯವರು ಸುಮಾರು ಹತ್ತಿಪ್ಪತ್ತು ಜನ ಬಂದು ಮೈಮೇಲೆ ಬಿದ್ದಾಗ ಲಕ್ಷ್ಯವಿಲ್ಲದೆ ಅವರನ್ನೆಲ್ಲ ಸೌದೆಯ ತುಂಡಿನಿಂದ ಹೊಡೆದು ಬಂದಿದ್ದನು. ಆಗ ಅವನನ್ನು ಉಳಿಸಿಕೊಳ್ಳುವುದಕ್ಕೆ ವಿಶ್ವಪ್ರಯತ್ನವಾಯಿತು. ಅವನೇ ಈಗಲೂ........ಇರಬಹುದೇ?............ಆದರೆ ಗುರುಗಳು ತಮ್ಮ ಸಂಶಯವನ್ನು ನಿವಾರಣೆ ಮಾಡಿಕೊಳ್ಳುವ ಬಗೆಹೇಗೆ?

ಕೊತ್ತವಾಲನು ಬಹಳ ಬುದ್ಧಿವಂತ. ಶಿಷ್ಯನು ಗುರುಗಳ ಮನೆಗೆ ಬರಲಿಲ್ಲವೆಂದು ಖಂಡಿತವಾಗುತ್ತಲೇ, ಅವನು ಗರಡಿಯ ಮನೆಯಲ್ಲಿಯೇ ಇರಬೇಕೆಂದು ಗೊತ್ತುಮಾಡಿ, ಕೂಡಲೇ ತನ್ನ ಭಂಟರನ್ನು ಕರೆದುಕೊಂಡು ಅಲ್ಲಿಗೆ ಹೋದನು. ಕೊತ್ತವಾಲನು ಗರಡಿಗೆ ಭಟರನ್ನು ಕಟ್ಟಿಕೊಂಡು ಬರಬೇಕಾದ ಕಾರಣವಿರಲಿಲ್ಲ. ಆದರೆ ಗರಡಿಯವರಿಗೆ ಮಾತ್ರ ಕೊತ್ತವಾಲನು ಬರುವನೆಂದು ತಿಳಿದಿದ್ದಿತೆಂದು ತೋರುತ್ತದೆ. ಹಿರಿಯಜಟ್ಟಿ ಮೊದಲಾಗಿ ಗರಡಿಯವರೆಲ್ಲರೂ ಇದ್ದರು. ಜಟ್ಟಿಯು ಬಂದು ಕುಳಿತುಕೊಂಡು ಲಾವಣಿ ಹೇಳಿಸಿ ಕೇಳುವುದು ಬಹಳ ಅಪೂರ್ವ. ಇಂದು ಎಲ್ಲರೂ ಲಾವಣಿಗಳನ್ನು ಹಾಡಿದುದೇ ಹಾಡಿದುದು. ಆದರೆ ಮನುಷ್ಯರ ಧ್ವನಿಯಿಂದ ಮನೋಭಾವನೆಗಳ ಗುರುತು ಹಿಡಿಯಬಲ್ಲ ಜಾಣನು ಯಾವನಾದರೂ ಇದ್ದರೆ ಅವನು, 'ಆಗುತ್ತಿರುವ ದೊಡ್ಡ ಗದ್ದಲದ ಒಳಗೊಳಗೆ ಒಂದು ಸಣ್ಣ ಟೊಳ್ಳು ಇದೆ. ಏನನ್ನೋ ಮುಚ್ಚಿಡುವುದಕ್ಕೆ ನಡೆಯುತ್ತಿರುವ ಯತ್ನವಿದು' ಎಂಬುದನ್ನು ಚೆನ್ನಾಗಿಯೂ ತಿಳಿಯಬಹುದಾಗಿದ್ದಿತು.

ಲಾವಣಿಯು ಬಲು ಪಸಂದಾಗಿದ್ದಿತು. ಶ್ರೀಶೈಲದ ಜಾತ್ರೆಯ ಲಾವಣಿ. ಒಬ್ಬನು ಲಾವಣಿಯನ್ನು ಏಕನಾದದ ಶ್ರುತಿಗೆ ಸೇರಿಸಿಕೊಂಡು ಹಾಡುತ್ತಿದ್ದಾನೆ. ಎಲ್ಲರೂ ಲಯವನ್ನು ಹಿಡಿದು ತಾಳ ಹಾಕುತ್ತಿದ್ದಾರೆ. ಬಾಗಿಲಲ್ಲಿ ಹಿರಿಯ ಜಟ್ಟಿಯು ತಾನೇ ಕುಳಿತಿದ್ದಾನೆ. ಸುಮಾರು ಒಂದು ಪ್ರಹರವಾಗಿ ಹೋಗಿರಬಹುದು. ಕೊತ್ತವಾಲರು ತಾವೇ ಬಂದಿದ್ದಾರೆ. ಜಟ್ಟಿಯವರಿಗೂ ಕೊತ್ತವಾಲರಿಗೂ ಪರಸ್ಪರ ಕುಶಲಪ್ರಶ್ನೆಗಳಾಗಿ, ಕೊನೆಗೆ ಮಾತುಕಥೆಗಳು ಆ ದಿನದ ಕತ್ತಿಯ ಕಾಳಗದ ಕಡೆಗೆ ತಿರುಗಿದುವು. ಕೊತ್ತವಾಲನೂ ಉಪ್ಪಾಕಾರ ಹೆಚ್ಚಿ ಕಾಳಗದ ಕಥೆಯನ್ನು ಬಿತ್ತರಿಸಿದನು. ಹಾರುವರ ಹೈದನೊಬ್ಬನು, ಅರೆಬತ್ತಲೆ ಮೈಯವನು, ಸ್ವಯಂ ಯುವರಾಜನೊಡನೆ ಕತ್ತಿಯನ್ನು ಹಿಡಿದು ಹೋರಾಡುವುದೆಂದರೆ ಜಟ್ಟಿಯು ಮೊದಮೊದಲು ನಂಬಲಿಲ್ಲ. ಕೊನೆಗೆ ಕೊತ್ತವಾಲನೇ ಹೇಳುತ್ತಿರಲು ನಂಬದಿರಲೆಂತು? ನಂಬಿದನು; ಆದರೆ ಆ ಹೈದನು ತನ್ನ ಶಿಷ್ಯನಾದ ಹಾರುವನೆಂದರೆ, ಜಟ್ಟಿಯು ನಕ್ಕುಬಿಟ್ಟನು. ತಿರಿದನ್ನವುಂಡು ಕಾಲಕಳೆಯುವ ಹಾದಿಯ ಹುಡುಗನೆತ್ತ? ತುಪ್ಪದನ್ನವುಂಡು ರಾಜೋದ್ಯಾನದ ಮಲ್ಲಿಕಾ ಲತೆಯಂತೆ ಬೆಳೆದ ಯುವರಾಜನೆತ್ತ? ಇಬ್ಬರಿಗೂ ಕೈಸೇರುವುದೆಂದರೇನು? ಸೇರಿದರೂ ಹಾದಿಯ ಹುಡುಗನ ಕೈ ಮೀರುವುದೆಂದರೇನು? ಜಟ್ಟಿಯ ಪ್ರಶ್ನಪರಂಪರೆಗೆ—ಸಂದೇಹ ಸಂದೋಹಕ್ಕೆ—ಕೊತ್ತವಾಲನು ಉತ್ತರ ಕೊಡಲಾರದೆ, ಕೊನೆಗೆ ಒಂದೇ ಮಾತಿನಲ್ಲಿ ಮುಗಿಯಿಸಿಬಿಟ್ಟನು. 'ಜಟ್ಟಿಯವರೇ! ಇದು ನಡೆದಿರುವುದನ್ನು ನಾನು ಖಂಡಿತವಾಗಿ ಬಲ್ಲೆ. ಇಲ್ಲವಾದರೆ ನಾನೂ ನಂಬುತ್ತಲೇ ಇರಲಿಲ್ಲ' ಎಂದನು. ಜಟ್ಟಿಯು 'ತಾವು ಹೇಳಿದಮೇಲೆ ಇನ್ನೇನು ಸ್ವಾಮಿ! ಆದರೆ ಮನುಷ್ಯಮಾತ್ರದವರು ನಂಬುವುದು ಕಷ್ಟ! ಅಲ್ಲವೆ ನೀವೇ ಹೇಳಿ' ಎಂದನು.

ಕೊತ್ತವಾಲನು ಆ ಮಾತು ಈ ಮಾತು ಆಡುತ್ತ ಕೊನೆಗೆ 'ಹುಡುಗನು ನಿಮ್ಮ ಗರಡಿಯಲ್ಲಿ ಈಗ ಇದ್ದಾನಂತೆ' ಎಂದನು. ಜಟ್ಟಿಯೂ ಏನೂ ತಿಳಿಯದವನಂತೆ, 'ಬಂದಿದ್ದ ಸ್ವಾಮಿ! ಇದ್ದಾನೋ ಇಲ್ಲವೋ ಅದನ್ನು ಮಾತ್ರ ನಾನು ಕಾಣೆ! ಯಾರನ್ನಾದರೂ ಕಳುಹಿಸಿ ನೋಡಿ. ಒಳಗಿದ್ದಾನೇನೊ? ನಾನು ಈ ಲಾವಣಿಯ ಗದ್ದಲದಲ್ಲಿ ಯಾವುದನ್ನೂ ನೋಡಲಿಲ್ಲ' ಎಂದನು.

ಕೊತ್ತ್ವಾಲನ ಕಡೆಯ ಭಂಟರಿಬ್ಬರು ಒಳಗೆ ಹೋಗಿ ಹುಡುಕಿ ಬಂದರು; ಆ ಹುಡುಗನ ಹೆಸರೇ ಇಲ್ಲ. ಯಾರನ್ನು ಕೇಳಿದರೂ 'ಬಂದಿದ್ದ; ಯಾವಾಗ ಹೋದನೋ ತಿಳಿಯದು' ಅಷ್ಟೇ ಉತ್ತರ. ಕೊತ್ತ್ವಾಲನ ಬುದ್ಧಿವಂತಿಕೆಯಿಂದ ಒಂದು ಗುಟ್ಟು ಹೊರಬಿದ್ದಿತು: 'ಅವನ ಬೆನ್ನಿನ ಒಂದು ಪಕ್ಕದಲ್ಲಿ ಒಂದು ಕಿರುಬೆರಳ ದಪ್ಪದ ಬಾಸುಂಡೆಯೊಂದಿದ್ದಿತು'

ಕೊತ್ತ್ವಾಲನ ಸಂದೇಹವು ನಂಬಿಕೆಯಾಗಿ ಹೋಯಿತು. ಅಪರಾಧಿ ಇಂತಹನೆಂಬುದು ತಿಳಿಯಿತು. ಆದರೆ ಎಲ್ಲಿರುವನೆಂಬುದು ತಿಳಿಯಲಿಲ್ಲ. ಗರಡಿಯಲ್ಲಿರುವನೆಂದು ಖಂಡಿತವಾಗಿ ಹೇಳಲು ಸಾಧ್ಯವಿಲ್ಲ. ಊರಿನಲ್ಲಿ ಇನ್ನೆಲ್ಲಿಯೂ ಇಲ್ಲ. ಕೋಟೆಯಿಂದ ಹೊರಗೆ ಯಾರೂ ತನಗೆ ತಿಳಿಯದೆ ಹೋಗುವುದು ದುಸ್ತರ. ಕೋಟೆಯೊಳಗೆ ಬಂದಿರುವನೆಂಬುವಕ್ಕೆ ಹಜ್ಜೆಗಳ ಗುರುತಿನ ಸಾಕ್ಷ್ಯವಿದೆ. ಕೊತ್ತ್ವಾಲನಿಗೆ ಏನು ಮಾಡುವುದಕ್ಕೂ ತೋರಲಿಲ್ಲ.

ಭಟ್ಟರ ಮನೆಯಿದ್ದ ಬೀದಿಯ ಮೂಲೆಗಿಬ್ಬರು, ಗರಡಿಯ ಮನೆಯ ಬೀದಿಗೆ ಇಬ್ಬರು, ಕಳ್ಳಭಂಟರನ್ನು ಬಿಟ್ಟು ತಾನು ಅರಮನೆಗೆ ಹೋದನು.

ಕೊತ್ತ್ವಾಲನು ಗರಡಿಯನ್ನು ಬಿಟ್ಟುಹೋದ ಅಷ್ಟು ಹೊತ್ತಿನ ಮೇಲೆ ಕೆಮ್ಮಣ್ಣುಮುಟ್ಟೆಯಿಂದ ಒಬ್ಬ ಹರೆಯದವನೆದ್ದನು. ಆಳು ಸುಮಾರು ಎತ್ತರ. ಪ್ರಶಸ್ತವಾದ ಹಣೆ, ದಪ್ಪತಲೆ, ಮೂಗು ದಪ್ಪವೂ ಉದ್ದವೂ ಆಗಿದ್ದು ಆ ಮುಖಕ್ಕೆ ಒಂದು ಅಪೂರ್ವವಾದ ಕಾಂತಿಯನ್ನು ತಂದಿದ್ದಿತು; ಸುನೀಳವಾದ ದೇಹ; ಸ್ಥೂಲವೆನ್ನಿಸಿಕೊಳ್ಳುವಷ್ಟು ಮಾಂಸವಲ್ಲ; ಒಣಕಲೆನ್ನಿಸಿಕೊಳ್ಳುವಷ್ಟು ಬಡವಲ್ಲ. ಕೈಕಾಲುಗಳು ದೊಡ್ಡದೊಡ್ಡವು; ಕತ್ತು ಕೊಂಚ ದಪ್ಪವಾಗಿ ಎತ್ತರವಾಗಿದ್ದು, ಆ ದಪ್ಪತಲೆಯನ್ನು ಅಂದವಾಗಿ ಹೊತ್ತಿರುವುದು. ಒಟ್ಟಿನಲ್ಲಿ ಸುಂದರಪುರುಷನೆನ್ನಲು ಸಂದೇಹವಿಲ್ಲ. ಆದರೆ ಸೌಂದರ್ಯವು ಇನ್ನೂ ಪೂರ್ವಾವಸ್ಥೆಯಲ್ಲಿದ್ದಿತಲ್ಲದೆ, ಬೆಳೆದುಬಂದು ಬಾಯಿಗೂಡಿದ ದೇವತೆಗಳ ದೇಹದ ಸೌಂದರ್ಯವಲ್ಲ. ಎಲ್ಲರೂ ಬಾಗಿಲ ಕಡೆ ನೋಡಿ, ಅವನನ್ನು 'ಬನ್ನಿರಿ' ಎಂದು ಕರೆದು ಸುತ್ತಲೂ ಕುಳಿತುಕೊಂಡರು. ಮೊದಲೇ ಗರಡಿಯ ಮನೆ. ತಟ್ಟನೆ ಹೊರಗಿನಿಂದ ಬಂದರೆ ಕಣ್ಣು ಕಾಣಿಸದೆ ಎಡವಿ ಬೀಳುವಷ್ಟು ಕತ್ತಲು. ಅದರ ಜೊತೆಗೆ, ತಾನಿದ್ದ

ಸ್ಥಳವನ್ನು ಗೊತ್ತು ಮಾಡುವುದಕ್ಕೆ ಮಾತ್ರ ಉಪಯೋಗವಾಗುವ, ಇದ್ದ ಕಣ್ಣನ್ನೂ ಕುರುಡು ಮಾಡುವ ಕುರುಡು ದೀವಿಗೆಯೊಂದು. ಎಲ್ಲರೂ ಛಾಯಾಮಾತ್ರಸ್ವರೂಪಿಗಳಾಗಿ ಕಾಣುವ ಆ ಬೆಳಕಿನಲ್ಲಿ ಒಂದು ಪುಟ್ಟ ಗುಂಪು ಸೇರಿ ಗುಜುಗುಂಪಲಾಯಿತು.

ಬಾಗಿಲಲ್ಲಿದ್ದ ಜಟ್ಟಿಯು ಒಬ್ಬ ನಡುಹರೆಯದವನನ್ನು ಕರೆದು ಏನೋ ಹೇಳಿದನು. ಅವನು ಒಳಗೆ ಹೋಗಿ ಬರುತ್ತಲೇ, ಎಲ್ಲರೂ ಬಂದು ಬಾಗಿಲ ಬಳಿಯೇ ಕುಳಿತುಕೊಂಡರು. ಒಬ್ಬನು ಸಣ್ಣವೂ ಅಲ್ಲ ದಪ್ಪವೂ ಅಲ್ಲದ ದನಿಯಲ್ಲಿ—ಅತ್ತೆಯ ಮನೆಯ ಸೊಸೆಯು ಸಂಗೀತ ಹಾಡಿದ ಹಾಗೆ—ಕಥೆಯನ್ನು ಹೇಳಿದನು. ಕಥೆಯ ಸಾರಾಂಶವಿಷ್ಟೆ: ತಾನು ಕುದುರೆಯ ಸವಾರಿಯನ್ನು ಕಲಿಯಬೇಕೆಂದು ಪ್ರತಿದಿನವೂ ಯಾರೂ ತಿಳಿಯದಂತೆ ಹೋಗಿ ಕುದುರೆಯ ಬಯಲಿನಲ್ಲಿ ಮರದಮೇಲೆ ಕುಳಿತುಕೊಳ್ಳುತ್ತಿದ್ದುದು; ಇಂದು ಅಲ್ಲಿ ರಾಜಕುಮಾರನು ಕುದುರೆಯಿಂದ ಜಾರಿಬಿದ್ದುದು; ತಾನು ಉಪಚಾರಮಾಡಲು ಹೋದುದು; ಅರಸುಮಗನು ತನ್ನನ್ನು ಹೊಡೆದುದು; ತಾನು ಹಿಂದಿರುಗಿ ಅವನನ್ನು ಎತ್ತಿಹಾಕಿ ಎದೆಯಮೇಲೆ ಕುಳಿತು ಹೊಡೆದುದು; ಮೊದಲಾಗಿ ಎಲ್ಲವನ್ನೂ ಇದ್ದುದು ಇದ್ದಂತೆ ಹೇಳಿಬಿಟ್ಟನು. ಜಟ್ಟಿಗೆ ಉಪ್ಪಿಟ್ಟ ಒಡೆಯನ ಮೇಲೆ ಕೈಮಾಡಿದನೆಂದು ಕೋಪ; ಯುವ ರಾಜನಂತಹ ಕತ್ತಿಗಾರನೊಡನೆ ಸೆಣಸಿ ಗೆದ್ದನೆಂದು ಹೆಮ್ಮೆ. ಎರಡರಲ್ಲೂ ಬಗೆಯು ಹೊಯ್ದಾಡಿಹೋಯಿತು.

ಜಟ್ಟಿಯೊಂದುಗಳಿಗೆ ಸುಮ್ಮನಿದ್ದು, 'ಇನ್ನು ಮಾತನಾಡಿ ಫಲವಿಲ್ಲ. ನುಂಗಿದ ತುತ್ತಿನ ರುಚಿ ನೆನೆದುಕೊಂಡರೇನು ಫಲ? ಇನ್ನು ಅರಮನೆ ಯವರು ಬೇರೆ ಎಂದಿದ್ದರೂ ಈ ಅಯ್ಯನನ್ನು ಬಿಡುವುದಿಲ್ಲ. ಅವನ ಜೊತೆ ಯಲ್ಲಿ ಯಾರು ಯಾರು ಈ ಊರು ಬಿಡುವುದಕ್ಕೆ ಸಿದ್ಧವಾಗಿದ್ದೀರೋ ಅವ ರೆಲ್ಲ ಬುತ್ತೀಕಟ್ಟಿ' ಎಂದುಬಿಟ್ಟು 'ನೀನು ಬಾರಯ್ಯ ನನ್ನ ಮಲಗುವ ಮನೆಗೆ' ಎಂದು ಹೊರಟುಹೋದನು.

ಇನ್ನು ಕೊಂಚ ಹೊತ್ತಿನೊಳಗಾಗಿ, ಹಿಂದೆ ಗರಡಿಗೆರಡು ಭುಜವಾಯಿ ತೆಂದು ಹಿಗ್ಗಿದ್ದ ನಡುಹರೆಯದವನೂ ಮಯೂರನೂ ಹಿರಿಯ ಜಟ್ಟಿಯ

ಮಲಗುವ ಮನೆಯಲ್ಲಿ ಆತನ ಕಟ್ಟಪ್ಪಣೆಯ ಕಡುನುಡಿಗಳನ್ನು ಕೇಳಿ, ' ಸರಿಸರಿ ' ಎನ್ನುತ್ತಿದ್ದರು.

*                *                *                *

ಇರುಳು ಮೂರನೆಯ ಜಾವವಿರಬಹುದು. ಕೋಟೆಯ ಗೋಡೆಯ ಮೇಲೆ ಕಾವಲುತಿರುಗುವ ದೀವಟಿಗೆಯ ಭಟರು ಆಗತಾನೇ ತಮ್ಮ ತಿರುಗಾಟವನ್ನು ತೀರಿಸಿ ಮುಂಬರಿದಿದ್ದಾರೆ. ಆಗ, ಕೋಟೆಯ ಬುರುಜಿನ ಆಚೆಗೆ ಪೌಳಿ ಗೋಡೆಯ ಮಗ್ಗುಲಲ್ಲಿ ಅವಿತುಕೊಂಡಿದ್ದ ವ್ಯಕ್ತಿಯು ಈಚೆಗೆ ಮೆಲ್ಲಗೆ ಬಂದಿತು. ಅಲ್ಲಿಂದ ಮುಂದಕ್ಕೆ ಬಂದು ಕೋಟೆಯ ಗೋಡೆಯ ಅಂಚಿನಲ್ಲಿ ಮಲಗಿ, ಕರಿಯ ಬಟ್ಟೆಯೊಂದನ್ನು ಹಿಂದಕ್ಕೂ ಮುಂದಕ್ಕೂ ಆಡಿಸಿತು. ವ್ಯಕ್ತಿಯು ಹಾಕಿಕೊಂಡಿದ್ದ ಬಟ್ಟೆಯು ಕಪ್ಪು; ಮುಖದ ಬಣ್ಣವು ಕಪ್ಪು. ಆ ಕಪ್ಪನೆಯ ರಾತ್ರಿಯಲ್ಲಿ ಕಪ್ಪುಬಣ್ಣದ ಕಪ್ಪುಬಟ್ಟೆಯ ವ್ಯಕ್ತಿಯನ್ನು ಮಗ್ಗುಲಲ್ಲಿದ್ದರೂ ಗುರುತಿಸುವುದು ಕಷ್ಟ.

ಕರಿಯ ಬಟ್ಟೆಯ ಗುರುತು ವ್ಯರ್ಥವಾಗಲಿಲ್ಲ. ಅಂತಹುದೇ ಮತ್ತೊಂದು ವ್ಯಕ್ತಿಯು ಮುಂದೆ ಬಂದು ಒಂದು ಹಗ್ಗವನ್ನು ಮೇಲಕ್ಕೆಸೆದು ಓಡಿಹೋಗಿ, ಅಷ್ಟುದೂರದಲ್ಲಿ ಕೋಟೆಯ ಗೋಡೆಯ ಮೇಲಕ್ಕೆ ಹತ್ತಿತು. ಇನ್ನು ಕೊಂಚಹೊತ್ತಿನೊಳಗಾಗಿ ಈ ಎರಡು ವ್ಯಕ್ತಿಗಳೂ ಸೇರಿ ಒಂದು ಗೇಣಗಲ ಸುಮಾರು ಎರಡು ಬೆರಳು ದಪ್ಪವಿರುವ ಹಲಗೆಯೊಂದನ್ನು ಗೋಡೆಯ ಮೇಲಕ್ಕೆ ಸೇದಿಕೊಂಡುವು. ಮತ್ತೊಂದು ಗಳಿಗೆಯೆನ್ನುವುದರೊಳಗಾಗಿ ಸುಮಾರು ನಾಲ್ಕು ಮಾರುದ್ದದ ಆ ಹಲಗೆಯು ಕೋಟೆಯ ಗೋಡೆಯಮೇಲೆ ಹೊರಕ್ಕೆ ಚಾಚಿಕೊಂಡು ನಿಂತಿತು. ಆಜಾನುಬಾಹುವಾಗಿದ್ದ ಕರಿಯ ಬಟ್ಟೆಯ ವ್ಯಕ್ತಿಯು ಆ ಹಲಗೆಯನ್ನು ಹತ್ತಿ ಹಿಂದಿನಿಂದ ಅಭ್ಯಾಸವಾಗಿರುವವನಂತೆ ನಡೆದು ಮುಂದಕ್ಕೆ ಹೋಗಿ ರೆಪ್ಪೆ ಹೊಯ್ಯುವುದರೊಳಗಾಗಿ ಎರಡು ಸಲ ತೂಗಿ ಮುಂದಕ್ಕೆ ನೆಗೆದುಬಿಟ್ಟಿತು. ಹಲಗೆಯೂ ಮುಂದಕ್ಕೆ ಜಾರಿತು. ಹಲಗೆಯನ್ನು ಹಿಡಿದುಕೊಂಡು ಕೋಟೆಯ ಗೋಡೆಯಮೇಲೆ ಕುಳಿತಿದ್ದ ವ್ಯಕ್ತಿಯು ನಿಟ್ಟುಸಿರನ್ನು ಬಿಟ್ಟು ತಟ್ಟನೆ ಗೋಡೆಯನ್ನಿಳಿದು ಸಂದುಗೊಂದುಗಳನ್ನು ಹೊಕ್ಕು ಅದೃಶ್ಯವಾಯಿತು.

———o———

## ನಾಲ್ಕನೆಯ ಪ್ರಕರಣ

ಮರುದಿನ ಬೆಳಗಾಗುತ್ತಿದ್ದ ಹಾಗೆಯೇ ಅರಮನೆಯಿಂದ ಕೊತ್ತವಾಲರಿಗೆ ಅಪ್ಪಣೆಯಾಯಿತು. ಕೊತ್ತವಾಲರೂ ಹೋಗಿ ದೊರೆಗಳವರ ದರ್ಶನವನ್ನು ತೆಗೆದುಕೊಂಡರು. ಮಂತ್ರಿಗಳೂ ಎದುರಿಗೆ ಇದ್ದರು. ದಳವಾಯಿಗಳೂ ಮೌನಮುದ್ರೆಯಿಂದ ಸಭೆಯನ್ನಲಂಕರಿಸಿದ್ದರು.

ಮಂತ್ರಿಯು ಕೊತ್ತವಾಲನನ್ನು, 'ಅಪರಾಧಿಯು ಸಿಕ್ಕಿದನೋ' ಎಂದು ಕೇಳಿದನು. ಕೊತ್ತವಾಲನಿಂದ ಉತ್ತರ ಬರಲಿಲ್ಲ. ಮತ್ತೆಯೂ ಕೇಳಲಾಯಿತು. ಮತ್ತೆಯೂ ಅದೇ ಮೌನ. ರಾಜರಿಗೆ ಕೋಪ ಬಂದು, 'ನೂರುಗಟ್ಟಲೆ ಸಂಬಳವನ್ನು ತಿನ್ನುವುದಕ್ಕೆ ನಮ್ಮಲ್ಲಿ ಅಧಿಕಾರಿಗಳುಂಟಲ್ಲದೆ, ತಪ್ಪುಗಾರರನ್ನು ಹಿಡಿವುದಕ್ಕೆ ಯಾರೂ ಇಲ್ಲ' ಎಂದರು. ದಳವಾಯಿಯು 'ಮಹಾಸ್ವಾಮಿ! ನನಗೆ ಅಪ್ಪಣೆಯಾಗಲಿ. ಒಂದು ಕ್ಷಣದೊಳಗಾಗಿ, ಎಲ್ಲಿದ್ದರೂ ಆ ಪಾಪಿಯನ್ನು ಹಿಡಿದು ಎಳತಂದು ಮಹಾಪಾದಕ್ಕೆ ಒಪ್ಪಿಸಿ ಬಿಡುತ್ತೇನೆ' ಎಂದನು. ಮಂತ್ರಿಯು 'ಏನು? ಕೊತ್ತವಾಲರೆ! ಸುಮ್ಮನಿದ್ದರೆ, ಕೇಳಿದ ಮಾತಿಗೆ ಉತ್ತರ ಬಂದಹಾಗಾಯಿತೆ?' ಎನ್ನಲು, ಕೊತ್ತವಾಲರ ಬಾಯಿ ಪಿಟ ಪಿಟ ಎಂದಿತು: 'ಮಹಾಸ್ವಾಮಿ! ಮನ್ನಿಸಬೇಕು. ದಳವಾಯಿಯವರು ಹೇಳುವಷ್ಟು ಸುಲಭವಲ್ಲ ಈ ಕೆಲಸ. ನಾನು ಖಂಡಿತವಾಗಿ ಮಾತನಾಡುತ್ತೇನೆಂದು ಕೋಪಿಸಲಾಗದು. ನಿನ್ನೆ ನಡೆದ ಕೆಲಸವು ತಪ್ಪಲ್ಲವೆಂದು ಅನೇಕರ ಭಾವನೆ'

ಅಷ್ಟರಲ್ಲಿ ದಳವಾಯಿಯು ಮಾತನಾಡಲು ಬಾಯಿಹಾಕಿದನು. ಕೊತ್ತವಾಲನು ಕೈಮುಗಿದು, 'ಚಿತ್ತಕ್ಕೆ ಆಯಾಸಬೇಕಿಲ್ಲ. ಕೊನೆಯವರೆಗೂ ಕೇಳೋಣವಾಗಲಿ' ಎಂದು ಮುಂದೆ ಹೇಳಿದನು: 'ತಪ್ಪುಮಾಡಿದುದು ಯಾರು?....ಕುದುರೆಯಿಂದ ಕೆಳಗೆ ಬಿದ್ದ ಪುಟ್ಟಸ್ವಾಮಿಯವರನ್ನು ಉಪಚರಿಸುವುದಕ್ಕೆ ಬಂದುದು ತಪ್ಪಲ್ಲವೆಂದು ಅನೇಕರು ವಾದಿಸುತ್ತಿದ್ದಾರೆ. ಅಲ್ಲದೆ, ಅವನು ಸೇರಿಕೊಂಡಿರುವುದು ದೊಡ್ಡ ಗರಡಿಯಲ್ಲಿ. ಮಹಾಸ್ವಾಮಿಯವರ ಅನುಗ್ರಹಕ್ಕೆ ಪಾತ್ರನಾದ ರಂಗಾಜಟ್ಟಿಯ ಆಶ್ರಯದಲ್ಲಿ. ಆ ಗರಡಿಯನ್ನು ಮುತ್ತಿದರೆ ಊರಿನ ಜನರಲ್ಲಿ ಅರಿವಾಸಿಗಿಂತ ಹೆಚ್ಚಿನವರಲ್ಲಿ

ವಿರೋಧಿಗಳಾಗುವ ಸಂಭವವುಂಟು. ಮಹಾಪಾದದ ಉಪ್ಪು ತಿನ್ನುತ್ತ ನಾವಿರುವುದು ಮಹಾ ಪ್ರಭುಗಳವರ ಕೀರ್ತಿಯನ್ನು ಬೆಳೆಯಿಸುವುದಕ್ಕಲ್ಲದೆ, ಸನ್ನಿಧಾನದ ಹೆಸರಿನಿಂದ ಪ್ರಜಾಕ್ಷೋಭವನ್ನು ಮಾಡುವದಕ್ಕಲ್ಲ; ಅದರಿಂದ ಸುಮ್ಮನಾಗಬೇಕಾಯಿತು ' ಎಂದನು.

' ಅಪರಾಧಿಯಾದರೂ ಇಂತಹವನೆಂದು ನಿಶ್ಚಯವಾಯಿತೋ ? '

'ನಿನ್ನೆಯ ದಿನವೇ ಅರಿಕೆಮಾಡಿದ್ದೇನೆ. ಅವನ ಹೆಸರು ಮಯೂರ ಶರ್ಮ. ಅವನು ತುಂಗಾತೀರದ ಅಗ್ರಹಾರದ ಈಶಭಟ್ಟರಲ್ಲಿ ಅಧ್ಯಯನ ಮಾಡುತ್ತಿದ್ದಾನೆ. ಈ ಊರಿನ ರಂಗಾಜಟ್ಟಿಯ ಬಳಿಯಲ್ಲಿ ಗರಡಿಯ ವಿದ್ಯೆಯನ್ನು ಕಲಿಯುತ್ತಿದ್ದಾನೆ. ಆಳು ನೋಡುವುದಕ್ಕಷ್ಟು ಭಾರಿಯಲ್ಲದಿದ್ದರೂ ಕಟ್ಟಾಳು. ಬಹಳ ಲಕ್ಷಣವಂತ. ನಿನ್ನೆಯದಿನ ಪುಟ್ಟಸ್ವಾಮಿಯವರು ಕೊಟ್ಟ ಬೆತ್ತದೇಟಿನ ಬಾಸುಂಡೆಯೂ ಬೆನ್ನಿನೊಂದು ಪಕ್ಕವನ್ನು ಮುಂಡಿಸಿದೆ. ನಿನ್ನೆಯ ಸಾಯಂಕಾಲ ಅವನು ಗರಡಿಯ ಒಳಕ್ಕೆ ಹೋದುದನ್ನು ಕಂಡವರುಂಟು. ಅವನಿದುವರೆಗೂ ಈಚೆಗೆ ಬಂದಿಲ್ಲ. ಅಲ್ಲಿ ಕಾವಲು ಬಲವಾಗಿದೆ '

ಆ ವೇಳೆಗೆ ಪಡಿವಳನು ಬಂದು, ' ಪುಟ್ಟಬುದ್ಧಿಯವರ ಸವಾರಿಯು ದಯಮಾಡಿಸುತ್ತಿದೆ ' ಎಂದು ಅರಿಕೆಮಾಡಿದನು. ದೊರೆಯು ತಿರುಗಿ ಯಾರು ಎಂದು ಕೇಳುವುದರೊಳಗಾಗಿ ಮೂವರೂ ಅಲ್ಲಿಗೆ ಬಂದುಬಿಟ್ಟರು. ಮಂತ್ರಿಯೂ ದಳವಾಯಿಯೂ ಕೊತ್ತವಾಲನೂ ವಂದಿಸಿದರು. ಅವರೂ ಪ್ರತಿವಂದನೆ ಮಾಡಿ ಕುಳಿತರು.

ಯುವರಾಜನು ಮಾತನಾಡಲು ಪ್ರಾರಂಭಿಸಿ, 'ಅಪ್ಪಾಜಿ! ನಿನ್ನೆಯ ದಿನ ಹೋರಿದವನು ಸಾಮಾನ್ಯನಲ್ಲ. ಆತನನ್ನೇನಾದರೂ ಮಾಡಿ ನಮ್ಮಲ್ಲಿ ಉಳಿಸಿಕೊಳ್ಳಬೇಕು ' ಎಂದನು. ಅಷ್ಟರಲ್ಲಿಯೇ ಕಿರಿಯವನು ಬಾಯಿಹಾಕಿ, ' ಅಪ್ಪಾಜಿ! ಅಣ್ಣಯ್ಯನವರ ಮಾತು ನನಗೊಪ್ಪಲಿಲ್ಲ. ನಾವು ಹಾಗೆ ಮಾಡಿದರೆ ಕಂಡಕಂಡ ತಿರುಕರೆಲ್ಲರೂ ನಮ್ಮ ಮೇಲೆ ಕೈಮಾಡಲು ನಾವೇ ಹೇಳಿ ಕೊಟ್ಟಂತಾಗುವುದು. ಅರಸರು ಅರಮನೆ ಎಂದರೆ ಗೌರವವೇ ಇಲ್ಲವಾಗುವುದು. ಅಷ್ಟಕ್ಕೆ ಅವಕಾಶಕೊಟ್ಟಮೇಲೆ ನಾವು ಇದ್ದರೇನು ? ಹೋದರೇನು ? ' ಎಂದನು.

ದೊರೆಗೆ ಬಹು ಕಷ್ಟವಾಯಿತು. ಯುವರಾಜ ಪಟ್ಟವನ್ನು ಕಟ್ಟಿಸಿಕೊಂಡು ರಾಜ್ಯದಾಡಳಿತಗಳಲ್ಲಿ ಸಮಸಮನಾಗಿ ವ್ಯವಹರಿಸುತ್ತಿರುವ ದೊಡ್ಡಮಗನ ಮಾತನ್ನು ಕೇಳುವುದೇ? ಅಪಮಾನ ಸರ್ಪ ದಷ್ಟನಾಗಿ ಕೋಪವಿಹ್ವಲಚಿತ್ತನಾಗಿ ದುಡುಕುತ್ತಿರುವ ಕೊನೆಯ ಮಗನ ಮಾತನ್ನು ಕೇಳುವುದೇ? ಅಥವಾ ತನ್ನ ಅಧಿಕಾರಿಗಳೆದುರಿಗೆ ಮಕ್ಕಳಿಗೆ ಅಪಮಾನ ಮಾಡುವುದೇ? ಏನೂ ತೋರದಂತಾಗಿ, 'ಇರಲಿ ಈ ದಿನ ಮಧ್ಯಾಹ್ನಕ್ಕೆ ಮತ್ತೆ ಸೇರಿ ಯೋಚಿಸೋಣ. ಆವೇಳೆಗೆ ಈಶಭಟ್ಟರನ್ನೂ ರಂಗಾಜಟ್ಟಿಯನ್ನೂ ಬರಮಾಡಿರಿ' ಎಂದು ಎದ್ದು ಬಿಟ್ಟನು.

ಕಾಲವು ಯಾರಿಚ್ಛೆಗೆ ನಿಲ್ಲುವುದು? ಅಪರಾಧಿಯು ಸಿಕ್ಕಲಿಲ್ಲವೆಂದು ಕೊತ್ತವಾಲನು ಕೂಗಿಕೊಳ್ಳುತ್ತಿರಲಿ; ಮುಂದೇನು ಮಾಡಬೇಕೆಂದು ಅರಸನು ಅರಸುತ್ತಿರಲಿ; ಕಾಲವೇನೋ ಒಂದೇ ಸಮನಾಗಿ ಓಡಿಯೇ ಓಡಬೇಕಷ್ಟೆ! ಮಧ್ಯಾಹ್ನವೂ ಆಯಿತು. ಈಶಭಟ್ಟನೂ ರಂಗಾಜಟ್ಟಿಯೂ ಬಂದು ಕುದುರೆಯ ತೊಟ್ಟಿಯಲ್ಲಿ ಕಾದಿದ್ದಾರೆ.

ಮೂರು ಜಾವವಿರಬಹುದು. ಅರಸನು ಕನ್ನಡಿಯ ತೊಟ್ಟಿಗೆ ಬಂದು ಎಲ್ಲರೂ ಮಾಡಿದ 'ಮುಜುರೆ' ಯನ್ನು ಕೈಗೊಂಡು ಭದ್ರಾಸನದಲ್ಲಿ ದಿಂಬನ್ನು ಒರಗಿ ಕುಳಿತನು. ಕಾದಿದ್ದವರು ಬಂದು ಅರಸನನ್ನು ಕಂಡರು. ಅರಸನು ಆಚಾರ್ಯನೊಡನೆ ಮೊದಲು ಮಾತನಾಡಿದನು: 'ಆಚಾರ್ಯರು ಮನ್ನಿಸಬೇಕು. ಯಾವುದೋ ಕಾರ್ಯಾಂತರವಾಗಿ ಬರಮಾಡಬೇಕಾಯಿತು' ಎಂದನು.

ಆಚಾರ್ಯನೂ ವಿನಯವನ್ನೂ ಗಾಂಭೀರ್ಯವನ್ನೂ ಬಿಡದೆ ಹೇಳಿದನು: 'ಪ್ರಭು! ರಾಜರು ಮಹಾವಿಷ್ಣುವಿನಂಶದಿಂದ ಧರ್ಮಪಾಲನೆಗೆ ನಿಯುಕ್ತರಾಗಿರುವವರು, ಎಂದು ಶಾಸ್ತ್ರ. ಅದರಿಂದ ರಾಜಾಜ್ಞೆಯನ್ನು ಪಾಲಿಸೋಣವು ಸರ್ವಥಾ ಕರ್ತವ್ಯವು. ಅಪ್ಪಣೆಯಾಗಲಿ, ಸಿದ್ಧನಾಗಿದ್ದೇನೆ'

ದೊರೆಯು ಏನು ಹೇಳಬೇಕು? ಅಥವಾ ಹಾಗೇಕೆ ಯೋಚಿಸಬೇಕು? ಅಡಿಗಡಿಗೆ ಒದಗುವ ಅಂತಹ ಸಂದರ್ಭಗಳಲ್ಲಿ ವ್ಯವಹರಿಸಿ ಪಡೆದ ಅನುಭವ, ಎದುರುಗಡೆಯವರು ಒಪ್ಪಿಕೊಂಡಿರುವ ದೊಡ್ಡತನ ಇವೇ ಮಾತನಾಡಿಸಿ

ಬಿಡುತ್ತವೆ. ಒಂದುವೇಳೆ ಮಾತಿನಲ್ಲಿ ಲೋಪವಾದರೂ ಪದವಿಯ ಗೌರವವು ಆ ಲೋಪವನ್ನು ಪೂರ್ಣಮಾಡುತ್ತದೆ. ಅರಸನೂ ವಿನಯದಿಂದ, 'ತಮ್ಮ ಶಿಷ್ಯವರ್ಗದಲ್ಲಿ ಒಬ್ಬನು ಧೂರ್ತನು ಸೇರಿರುವಂತಿದೆ' ಎಂದನು.

ಆಚಾರ್ಯನು ಚಾಟಿಯ ಏಟು ತಿಂದ ಕುದುರೆಯಂತೆ ನಿಡುಕಿ, 'ಇಲ್ಲವಲ್ಲ! ನಮ್ಮಲ್ಲಿ ಧೂರ್ತರಿಗೆ ಸ್ಥಾನವಿಲ್ಲವಲ್ಲ!' ಎಂದನು.

'ನಿನ್ನೆಯ ವರ್ತಮಾನ ಕೇಳಿದಿರಷ್ಟೆ?'

'ಕೇಳಿದೆ'

'ಅದು ಧೂರ್ತತನವಲ್ಲವೆ? ಆಚಾರ್ಯ!'

'ಮಹಾಪ್ರಭು! ಇತರರು ಧೂರ್ತರಾದರೆ ರಾಜಸಸ್ವಭಾವದರು ಆತ್ಮರಕ್ಷಣೆಯಲ್ಲಿ ಪ್ರವೃತ್ತರಾಗುವುದುಂಟು. ಅದು ಧೂರ್ತತನವು ಹೇಗಾದೀತು!'

ಅರಸನು ನಿರುತ್ತರನಾಗಿ ಮಂತ್ರಿಯ ಕಡೆ ನೋಡಿದನು; ಆತನಿಗೆ ಅರ್ಥವಾಯಿತೋ ಏನೋ? ಕಟ್ಟೆಗೆಯವನಿಗೆ ಸನ್ನೆಮಾಡಿದನು. ಅವನು ಕೂಡಲೇ ಸುತ್ತುವೀಳೆಯವನ್ನು ತಂದನು. ಆಚಾರ್ಯನು ಅದನ್ನು ಗ್ರಹಿಸಿ, "ಅಪ್ಪಣೆಯಾದರೆ ಹೋಗಿಬರುವೆನು" ಎಂದು ಬೀಳ್ಕೊಂಡು, 'ಸಮಸ್ತ ಸನ್ಮಂಗಳಾನಿ ಭವಂತು' ಎಂದು ಹರಸಿ ಹೊರಟುಬಂದನು.

ಆಮೇಲೆ ರಂಗಾಜಟ್ಟಿಯ ಪ್ರವೇಶವಾಯಿತು. ಅರಸನ ಮುಖದ ಮೇಲೆ ರಂಗು ಏರಿದ್ದಿತು. ರಂಗಾಜಟ್ಟಿಯು ಒಂದು ದೀರ್ಘ ಪ್ರಣಾಮವನ್ನಾಚರಿಸಿ ಕೈಕಟ್ಟಿಕೊಂಡು ವಿನಯ ನಮ್ರನಾಗಿ ಪ್ರಭುವಿನಪ್ಪಣೆಯನ್ನು ಎದುರುನೋಡುತ್ತ ನಿಂತಿದ್ದಾನೆ.

ಅರಸನು ಮಂತ್ರಿ ದಳವಾಯಿ ಕೊತ್ತವಾಲರಿಗೆ ಸನ್ನೆಮಾಡಿದನು. ಅವರು ಅತ್ತತ್ತ ಸರಿದರು.

ಅರಸನು ಪ್ರಶ್ನೆಮಾಡಿದನು—

'ಏನು ಜಟ್ಟಿಗಳೇ?'

'ನನ್ನೊಡೆಯಾ?'

'ನೀವು ಅರಮನೆಯ ಆಶ್ರಿತರು'

'ಹೌದು, ಪ್ರಭುಗಳ ಪಾದದ ಉಪ್ಪುತಿಂದು ಬೆಳೆದವರು ನಾವು'

'ಅದಕ್ಕಿದೇಯೋ ಪ್ರತ್ಯುಪಕಾರ ?'

'ತಿಂದಮನೆಗೆರಡು ಬಗೆಯುವುದು ನಮ್ಮ ಕುಲಕ್ಕೇ ಬಂದಿಲ್ಲ ಪ್ರಭು!'

'ಹಾಗಾದರೆ ಈಗ ನೀವು ಮಾಡಿರುವುದೇನು ?'

'ನಾನೇನು ಅಂತಹ ದ್ರೋಹ ಮಾಡಿದಹಾಗೆ ತೋರಲಿಲ್ಲ ಪ್ರಭು !'

'ನೀವು ಆ ಹಾರುವರ ಹುಡುಗನನ್ನು ಬಚ್ಚಿಟ್ಟುಕೊಂಡಿಲ್ಲವೇ ?'

'ಹಾರುವರ ಹುಡುಗನೇ! ಅವನನ್ನು ಬಚ್ಚಿಟ್ಟುಕೊಂಡಿರುವುದು ನಾನಲ್ಲ!'

'ಹಾಗಾದರೆ ಇನ್ನು ಯಾರು ?'

'ಭಾಗ್ಯದೇವತೆ !'

'ಹಾಗೆಂದರೆ ?'

'ಹೌದು. ಮಹಾಪಾದದಲ್ಲಿ ಮನ್ನಣೆಯಾಗಬೇಕು. 'ದೇವರು ಅರಿತೋ ಮರೆತೋ ಅವನನ್ನು ಈಸಲ ಹುಟ್ಟಿಸಿದ್ದಾನೆ. ತಿರುಗಿ ಇಂತಹವನನ್ನು ಹುಟ್ಟಿಸುವಂತಿಲ್ಲ' ಎಂದು ಲೋಕಕ್ಕೆ ಕೊಡಲಾರದೆ ಆ ಹುಡುಗನನ್ನು ಭಾಗ್ಯದೇವತೆಯು ಬಚ್ಚಿಟ್ಟುಕೊಂಡಿದ್ದಾಳೆ. ಮಹಾಸ್ವಾಮಿಯವರ ಪಾದದ ಚಾಕರರಲ್ಲಿ ಅವನನ್ನು ಒಬ್ಬನನ್ನು ಮಾಡಬೇಕೆಂದು, ನಾನು ತಿಂದ ನಮ್ಮಪ್ಪನ ಉಪ್ಪಿನ ಹಳೆಯ ಸಾಲವನ್ನು ಚಕ್ರ ಬಡ್ಡಿ ಸಮೇತ ಕೊಟ್ಟು ಬಿಡಬೇಕೆಂದು ನಾನೂ ಅವನನ್ನು ಬೆಳೆಯಿಸಿದೆ. ಆದರೇನು ಮಾಡುವುದು ? ದೈವದ ಚಿತ್ತ ಬೇರೆಯಾಗಿದ್ದಿತು. ಮಹಾಸ್ವಾಮಿಯವರಿಗೆ ಮೀಸಲು ಕಟ್ಟಿದ್ದುದು ಹೋಯಿತು. ಖಂಡುಗ ಹಾಲಿಗೆ ಒಂದು ತೊಟ್ಟು ಹುಳಿ ಬಿದ್ದುಹೋಯಿತು'

ಅರಸನಿಗೆ ಸೈರಣೆಯು ಮೀರುತ್ತ ಬಂದಿತು. ಆದರೂ ನೆಂಟನಿಗಿಂತ ನಚ್ಚಿನವನು, ಮೈಗಾವಲು ಭಂಟರ ಮುಖಂಡನು, ತಲೆತಲಾಂತರದಿಂದ ಹೊಂದಿಬಂದವನು. ಹೇಗೆ ತಟ್ಟನೆ ಏನಾದರೂ ಎನ್ನುವುದು ? ಹಾಗೆಯೇ, ಬಂದ ಕೋಪವನ್ನೆಲ್ಲಾ ನುಂಗಿಕೊಂಡು, 'ಸರಿ, ಮುಂದೆ ?' ಎಂದನು.

ಮುದುಕನು ಹೇಳಿದನು: 'ನಾನೂ ನಡೆದುದನ್ನೆಲ್ಲವನ್ನೂ ಕೇಳಿದೆ. ಕುದುರೆಯ ಬಯಲಿಗೆ ಹೋಗುವುದಕ್ಕೆ ಅಪ್ಪಣೆಯನ್ನು ಕೊಡಿಸಿದ್ದವನೂ

ನಾನೇ! ಪುಟ್ಟಸ್ವಾಮಿಯವರ ದುಡುಕು ಕನ್ನಡಿಯನ್ನು ಒಡೆದುಬಿಟ್ಟಿತು. ಹಕ್ಕಿಯು ಹಾರಿಹೋಯಿತು'

'ಇದು ಮಹಾದ್ರೋಹ. ಪಾತಕಿಯನ್ನು ಬಚ್ಚಿಟ್ಟು ಬಾಯ್ಗೆ ಬಂದಂತೆ ಮಾತನಾಡುತ್ತಿರುವಿರಿ'

ಮುದುಕನು ಹಾಗೆಯೇ ಒಂದು ಗಳಿಗೆ ದುರದುರನೆ ಅರಸನನ್ನು ನೋಡಿ ಹೇಳಿದನು: 'ಒಡೆಯರಿಗೆ ಪುತ್ರಮೋಹವೆಂಬುದನ್ನು ನಾನು ಬಲ್ಲೆ. ಆದರೆ ಒಪ್ಪು ತಪ್ಪುಗಳನ್ನು ನಿರ್ಣಯಿಸುವುದರಲ್ಲಿ ಸ್ವಾಮಿಗಿದ್ದ ಅಪಾರ ಶಕ್ತಿಯನ್ನು ಅದು ನುಂಗುವುದು ಎಂದುಕೊಂಡಿರಲಿಲ್ಲ'

ಅರಸನಿಗೆ ಸಿಟ್ಟು ಮಟ್ಟು ಮೀರುತ್ತ ಹೋಗಿ, 'ಸಾಕು, ಧರ್ಮಾಧರ್ಮ ವಿಚಾರಣೆಗೆ ಪರಿಷತ್ತಿಗೆ ಬನ್ನಿರೆಂದು ನಿಮ್ಮನ್ನು ಕರೆದಿಲ್ಲ. ನಿಮ್ಮನ್ನು ಕರೆದಿರುವುದು ಇಷ್ಟಕ್ಕೆ: ನೀವು ರಾಜದ್ರೋಹಿಗೆ ಮರೆಗೊಟ್ಟಿರುವಿರಿ. ನೀವು ಅವನನ್ನು ಕೊಡುವಿರಾ? ಇಲ್ಲವೆ? ಅಷ್ಟು ಹೇಳಿ' ಎಂದನು.

ಮುದುಕನು ರೇಗಲಿಲ್ಲ; ಇನ್ನೂ ನಗುತ್ತಲೇ ಹೇಳಿದನು, 'ಒಡೆಯಾ! ರಾಜದ್ರೋಹಿಗಳು ಯಾರೂ ಈ ನಾಯಿಯ ಬಳಿಯೂ ಸುಳಿಯಲಾರರು. ಅದು ಸ್ವಾಮಿಗೆ ತಿಳಿಯದ ಸುದ್ದಿಯಲ್ಲ. ಧರ್ಮವನ್ನು ಕಾಯ್ದುಕೊಂಡು ಬಂದವರೆಂಬುದು ಮಹಾಸ್ವಾಮಿಯವರ ಕುಲದ ಬಿರುದು. ಮಕ್ಕಳಿಗಾಗಿ ಧರ್ಮವನ್ನು ಬಿಟ್ಟರೆಂದು ತಮಗೆ ಅಪಖ್ಯಾತಿ ಬರಬಾರದು'

'ಜಟ್ಟಿಯವರೇ! ಹಾಗಾದರೆ ಅವನನ್ನು ನಮಗೊಪ್ಪಿಸುವುದಿಲ್ಲವೋ?'

'ಅದು ಸಾಧ್ಯವಿಲ್ಲ'

'ಹಾಗೆಂದರೇನು?'

'ಅವನು ಈ ಊರನ್ನು ಬಿಟ್ಟು ಹೋಗಿ ಬಹಳ ಹೊತ್ತಾಯಿತು.'

'ಇದು ನಿಜವೆ?'

'ಹೌದು. ಮಹಾಸ್ವಾಮಿಯವರಿಗೆ ಪುತ್ರಮೋಹ, ನನಗೆ ಧರ್ಮಮೋಹ. ನಡೆದುದು ಎಲ್ಲವನ್ನೂ ಕೇಳಿದೆ. ಮಹಾಸ್ವಾಮಿಯವರು ಮುಂದೇನು ಮಾಡುವರೆಂಬುದೂ ತಿಳಿಯಿತು. ನಾನೇ ಅವನಿಗೆ ಸಹಾಯಮಾಡಿ ರಾಜಧಾನಿಯಿಂದ ಹೊರಕ್ಕೆ ಕಳುಹಿಸಿದೆ'

‘ ನೀವು ಮಾಡಿದುದು ತಪ್ಪು ’

‘ ತಮ್ಮ ದೃಷ್ಟಿಯಲ್ಲಿ ತಪ್ಪು ! ’

‘ ಈ ತಪ್ಪಿಗೆ ಶಿಕ್ಷೆಯೇನು ಬಲ್ಲಿರಾ ? ’

‘ ಗೊತ್ತಿದೆ ! ’

‘ ಸಿದ್ಧರಾಗಿ ’

‘ಅಪ್ಪಣೆ ! ಮಹಾಪಾದದ ಉಪ್ಪು ತಿಂದು ಬೆಳೆದ ಮೈ. ಮಹಾಸ್ವಾಮಿಯವರಿಗೆ ಈ ದೇಹದ ಮೇಲೆ ಸರ್ವಾಧಿಕಾರವುಂಟು ’

‘ಸರಿ’ ಎಂದು ಅರಸನೆದ್ದನು. ಕೊತ್ತವಾಲನ ಮುಖವನ್ನು ನೋಡಿ ಮುಂದಕ್ಕೆ ಹಜ್ಜೆಯಿಟ್ಟನು. ಜಟ್ಟಿಯು ತಟ್ಟನೆರೆಡು ಹಜ್ಜೆ ಮುಂದಿಟ್ಟು, ‘ ಮಹಾಸ್ವಾಮಿ ! ನಾನು ಈ ಬಟ್ಟೆಗಳನ್ನು ಧರಿಸಿ ಈ ಕತ್ತಿಯನ್ನು ಕಟ್ಟಿ ಕೊಂಡಿರುವಾಗ ನನ್ನನ್ನು ಯಾರೂ ಹಿಡಿಯಕೂಡದು ಹಾಗೇನಾದರೂ ಯಾರಾದರೂ ಮಿತಿಮೀರಿದರೆ ಅಂಗರಕ್ಷಕ ಭಟರೆಲ್ಲರೂ ಕತ್ತಿಯನ್ನು ಹಿರಿದು ನಿಲ್ಲುವರು. ಇದು ಸಂಪ್ರದಾಯ. ಅದರಿಂದ ಪ್ರಭುಗಳು ನಿಂತು ಇದನ್ನು ಒಪ್ಪಿಸಿಕೊಳ್ಳಿ ’ ಎಂದು, ತನ್ನ ಕಟ್ಟಿದ್ದ ಕತ್ತಿಯನ್ನೂ ನಡುಕಟ್ಟನ್ನೂ ತೆಗೆದು ಮುಂದಿಟ್ಟನು. ಅರಸನಿಗೆ ಆ ಕೋಪದಲ್ಲೂ ಅಭಿಮಾನವು ತಪ್ಪ ಲಿಲ್ಲ; ‘ಇದಿಷ್ಟೂ ಒಬ್ಬ ಭಿಕ್ಷಾನ್ನದ ಹುಡುಗನಿಗೋಸ್ಕರ ? ’ ಎಂದನು.

ಜಟ್ಟಿಯು ‘ಭಿಕ್ಷಾನ್ನದ ಹುಡುಗ ಈಗ ! ಮುಂದೆ ಮಗ್ಗುಲಿಗೊತ್ತುವ ಮುಳ್ಳಾದಾಗ ಮಹಾಸ್ವಾಮಿಯವರಿಗೆ ಮುದುಕನ ಮಾತು ಮನವರಿಕೆ ಯಾಗುವುದು’ ಎಂದು ಹಿಂದಿರುಗಿದನು.

ಅರಸು ತಟ್ಟನೆ ಹಿಂದಿರುಗಿ, ‘ಮುಂದೆ ಹೋಗಕೂಡದು. ನನ್ನಪ್ಪಣೆ! ನಿಲ್ಲಿ. ನಿಮ್ಮ ಕತ್ತಿಯನ್ನು ಕಟ್ಟಲು ನೀವಲ್ಲದೆ ಇನ್ನು ಯಾರೂ ಇಲ್ಲ. ಬನ್ನಿ, ನಿಮ್ಮ ಕತ್ತಿಯನ್ನು ತೆಗೆದುಕೊಳ್ಳಿ ’ ಎಂದನು.

ಜಟ್ಟಿಯು ಹಾಗೆಯೇ ಮುಖ ತಿರುಗಿಸಿಕೊಂಡು ನಿಂತು, ‘ ಹುಟ್ಟಿ ದಂದಿನಿಂದಲೂ ಮುಂದಕ್ಕೆ ಹೋಗುವುದೇ ಧರ್ಮ ಈ ನಾಯಿಗೆ. ಸಾಯುವ ಕಾಲಕ್ಕೆ ಈಗ ಏಕೆ ಮಾತು ನುಂಗುವುದು ? ರಂಗಾಜಟ್ಟಿಗೆ ಅವರಪ್ಪ ಕೊಟ್ಟು ಹೋದ ಆಸ್ತಿ ಮಾನ. ಅವನ ಮಕ್ಕಳಿಗೂ ಅದೇ ಆಸ್ತಿ. ಅದೇ

ಹೋಯಿತು. ಇನ್ನು ಯಾವ ಭಾಗ್ಯಕ್ಕಾಗಿ ಆ ಕತ್ತಿ ನನಗೆ? ದ್ರೋಹಿಗಳಲ್ಲದವರಿಗೆ ಕೊಡಿ ಅದನ್ನು' ಎಂದು ಮುಂದೆ ನಡೆದನು.

ಅರಸನ ಕಣ್ಣುಸನ್ನೆಯಿಂದ ಮಂತ್ರಿ, ದಳವಾಯಿ, ಕೊತ್ತವಾಲರು ಹೋಗಿ ಬಹಳ ಹೇಳಿದರು. ಮುದುಕನೊಪ್ಪಲಿಲ್ಲ. 'ಸಾವಿರ ಚಿತ್ತಾರ ಒಂದು ಮಸಿ ನುಂಗಿತು ಎಂದ ಹಾಗೆ! ಬಸದಿಯಲ್ಲಿ ಕಸಬಳಿದರೆ ಗೇಣು ಹೊಟ್ಟೆ ತುಂಬಲೊಲ್ಲದೆ? ನನ್ನೊಡೆಯರು ಚೆನ್ನಾಗಿದ್ದರೆ ಸಾಕು. ಇನ್ನು ತಮ್ಮ ಕೆಲಸ ತಾವು ಮಾಡಿ ಕೊತ್ತವಾಲರೆ! ಈಗ ರಂಗಾಜಟ್ಟಿಯು ತಮ್ಮ ಸೆರೆಯಾಳು' ಎಂದನು.

ಕೊತ್ತವಾಲನು ಮರುಮಾತನಾಡಲಿಲ್ಲ. ಜಟ್ಟಿಯು ತಾನೇ ಅರಮನೆಯಿಂದ ಹೊರಟು ಕೊತ್ತವಾಲನ ಕಚೇರಿಗೆ ಹೋಗಿ ಅಲ್ಲಿ ಕುಳಿತು ಬಿಟ್ಟನು. ಅಲ್ಲಿಯ ಭಟರು ಜಟ್ಟಿಯು ಬಂದನೆಂದು ಗಾಬರಿ ಬಿದ್ದು ಎದ್ದರು. ಜಟ್ಟಿಯು 'ಇಲ್ಲ, ಇಲ್ಲ, ಕುಳಿತುಕೊಳ್ಳಿ, ಅರಸರ ಅಪ್ಪಣೆಯಾಗಿದೆ. ಕೊತ್ತವಾಲರು ನನ್ನನ್ನು ಕಳುಹಿಸಿದರು. ನಾನು ನಿಮ್ಮ ಸೆರೆಯಾಳು, ಕೈಗೆ ಕೋಳವನ್ನು ಹಾಕಿ' ಎಂದನು.

ಭಟರು ನಂಬಲಿಲ್ಲ.

ಇನ್ನೊಂದು ಗಳಿಗೆಯೊಳಗಾಗಿ ಕಾಂಚೀಪುರದಲ್ಲೆಲ್ಲ ಗದ್ದಲವೋ ಗದ್ದಲವಾಗಿ ಹೋಯಿತು. ಎಲ್ಲರೂ ಕೊತ್ತವಾಲನ ಕಚೇರಿಗೆ ಓಡಿದರು

——o——

## ಐದನೆಯ ಪ್ರಕರಣ

ಐದಾಳುದ್ದದ ಕೋಟೆಯ ಗೋಡೆ. ಐದಾಳುದ್ದದ ಕಂದಕ. ಕೊಂಚ ಪವಣ ತಪ್ಪಿ ಕಂದಕದೊಳಗೆ ಬಿದ್ದರೆ ಒಂದು ಚೂರು ಮೂಳೆಯೂ ಸಿಕ್ಕುವಂತಿಲ್ಲ. ಕಂದಕವು ಅಗಲದಲ್ಲಿಯೂ ಕಿರಿದೇನೂ ಅಲ್ಲ, ಸುಮಾರು ಮೂವತ್ತು ಮೊಳವಿರಬಹುದು ತಲೆಯ ಹತ್ತಿರ ಆ ಕಡೆಯಿಂದ ಈ ಕಡೆಗೆ.

ಮಯೂರನು ಧೈರ್ಯಮಾಡಿ ಕೋಟೆಯ ಗೋಡೆಯ ಮೇಲಿಂದ ಹಾರಿ ಎರಡು ಮುಂಗಣ್ಣು ಹೊಡೆದು ಅಚ್ಚಳಿಯದಂತೆ ನೆಲಕ್ಕಿಳಿದನು.

ದೈವವಶದಿಂದ ಏನೂ ಅಪಾಯವಾಗಲಿಲ್ಲ. ಇನ್ನೊಂದು ಗಳಿಗೆಯೆನ್ನುವುದರೊಳಗಾಗಿ ಹಲಗೆಯೂ ಕಂದಕದೊಳಕ್ಕೆ ಬಿದ್ದು! 'ಠಃ' ಎಂದು ಸದ್ದುಮಾಡಿ ತಾನಿರುವೆಡೆಯನ್ನು ತೋರಿತು. 'ಅದು ಅಲ್ಲಿರುವುದು ಸರಿಯಲ್ಲ' ಎಂದು ಮಯೂರನು ಅದನ್ನು ಎಳೆದುಕೊಂಡನು. 'ಅದನ್ನು ಏನುಮಾಡಬೇಕು?' ಎಂದು ಒಂದು ಗಳಿಗೆ ಯೋಚಿಸಿ ಅದನ್ನು ಹೊತ್ತುಕೊಂಡು ಹೊರಟನು. ಅಲ್ಲಿಂದ ಕೊಂಚದೂರ ಹೋದರೆ ಅಲ್ಲಿಯೇ ಕೆರೆ. ಅದರಂಚಿನಲ್ಲಿ ಕುಳಿತು ಆ ಹಲಗೆಯನ್ನು ಮುರಿದು ಉಗಿನಿಯ ಹಂಬುಗಳಿಂದ ಕಂತೆಕಟ್ಟಿ ಅದನ್ನು ಆಳುದ್ದವ ನೀರಿನಲ್ಲಿ ಬೀಳುವಂತೆ ಎಸೆದುಬಿಟ್ಟನು.

ಆ ವೇಳೆಗೆ ಕೋಳಿಯು ಕೂಗಿತು. 'ಏನು ಮಾಡುವುದು? ಮುಂದೆ ಎಲ್ಲಿ ಹೋಗಬೇಕು?' ಎಂಬುದೊಂದು ಪ್ರಶ್ನೆ. ಅದರ ಜೊತೆಗೆ 'ಕಾರಣವಿಲ್ಲದೆ ಬರಿಬರಿದೆ ಬೆತ್ತದಿಂದ ಹೊಡೆದನಲ್ಲಾ! ಅವನನ್ನು ಸುಮ್ಮನೆ ಬಿಡುವುದೆ?' ಎಂದಿನ್ನೊಂದು ಯೋಚನೆ. ಅಂತೂ ಯುವಕನು ಅಲ್ಲಿ ಬಹಳ ಹೊತ್ತು ಕುಳ್ಳಿರಲಿಲ್ಲ. ಅವನ ಸ್ಥಿತಿಯನ್ನು ಕಂಡವರು ಯಾರಾದರೂ ಇದ್ದರೆ, 'ಕಡಿವಾಣದಲ್ಲಿರುವ ಜೂಜಿನ ಕುದುರೆಯು ಕುಣಿಯದೆ ತಣ್ಣಗೆ ನಿಲ್ಲುವುದುಂಟೆ?' ಎನ್ನುತ್ತಿದ್ದರು.

ಅಂತೂ ಅವನಿಗೆ ಒಂದು ವಿಚಾರ ಮಾತ್ರ ಖಂಡಿತವಾಗಿದ್ದಿತು: 'ಏನಾದರೂ ಆಗಲಿ, ಮತ್ತೆ ಕಂಚಿಯ ರಾಜರ ಕೈಗೆ ಬೀಳಬಾರದು' 'ಹಾಗಾದರೆ ಎತ್ತ ಹೋಗಬೇಕು? ರಾಜಧಾನಿಗೆ ತೆಂಕಣದಿಕ್ಕಿಗೆ ಹೋದರೆ ಸುಮಾರು ಎರಡು ಯೋಜನದ ದೂರದಲ್ಲಿ ಹುಲ್ಲುಗಾವಲಿನ ಆಚೆ ಒಂದು ಕಾಡಿದೆ. ಅಲ್ಲಿ ಇದ್ದುಕೊಂಡು ಊರಿನಲ್ಲಿ ಏನೇನಾಯಿತೋ ತಿಳಿದುಕೊಂಡು ಮುಂದಕ್ಕೆ ಹೋಗಬೇಕು. ಅಲ್ಲದೆ ಕಾಡೂ ಕೂಡ ಇದ್ದುದರಲ್ಲಿ ಗಹನವಾಗಿರುವುದರಿಂದ ತಟ್ಟನೆ ಯಾರ ಕಣ್ಣಿಗೂ ಬೀಳುವ ಹಾಗಿಲ್ಲ' ಎಂದು ಗೊತ್ತುಮಾಡಿಕೊಂಡು ಹೊರಟನು.

ಸೂರ್ಯೋದಯವಾಗಿ ಸುಮಾರು ಅರ್ಧ ಯಾಮವಾಗಿರಬಹುದು ಎನ್ನುವ ವೇಳೆಗೆ ಅಲ್ಲಿಗೆ ಬಂದನು. ಹಿಂದಿನರಾತ್ರಿ ಎರಡೇ ಎರಡು ಹಣ್ಣು ತಿಂದಿದ್ದುದು; ಅಲ್ಲದೆ, ರಾತ್ರಿಯೆಲ್ಲವೂ ನಿದ್ದೆಯಿಲ್ಲದೆ ಅಲೆದಾಡಿದುದು;

ಎಲ್ಲವೂ ಸೇರಿ ಹೊಟ್ಟೆಯ ಹಸಿವು ಬಹಳವಾಗಿದ್ದಿತು. ಆದರೆ ಕಾಡಿನಲ್ಲಿ, ಬಾರೆಂದು ಅಡಿಗೆಮಾಡಿ ಬಡಿಸುವ ಅತ್ತಮ್ಮನವರು ಎಲ್ಲಿಂದ ಬರಬೇಕು ?

ಕಾಡಿನಲ್ಲಿ ಅಲೆಯುತ್ತಿರುವಾಗ ದೈವವಶದಿಂದ ಒಬ್ಬ ಬೈರಾಗಿಯು ಸಿಕ್ಕಿದನು. ಒಳ್ಳೆಯ ಪುಷ್ಟ. ಕೌಪೀನ ಹೊರತು ಮೈಮೇಲೆ ಇನ್ನೇನೂ ಬಟ್ಟೆಯಿಲ್ಲ. ನೋಡಿದರೆ ಬಹು ಸಂತೋಷನಾಗಿರುವವನಂತೆ ಕಾಣುತ್ತಾನೆ. ಆತನ ಮುಖವನ್ನು ಕಂಡರೆ ವಿಶ್ವಾಸವು ಬೇಡಬೇಡವೆಂದರೂ ಹುಟ್ಟುವಂತಿದೆ. ಆ ಗಡ್ಡ ಮೀಸೆಗಳು, ಎಳೆನಗು, ಆ ಅರೆಮುಚ್ಚಿದ ಕಂಗಳು, ಒಟ್ಟಿನಲ್ಲಿ ವಿಚಿತ್ರದ ಬೈರಾಗಿ.

ಮಯೂರನು ನೇರವಾಗಿ ಆತನ ಬಳಿಗೆ ಹೋಗಿ ಸಾಷ್ಟಾಂಗ ಪ್ರಣಾಮ ಮಾಡಿದನು. ಬೈರಾಗಿಯು ಒಂದುಗಳಿಗೆ ಸುಮ್ಮನಿದ್ದು, 'ನೀನಾರು ? ಈಶಭಟ್ಟನ ಶಿಷ್ಯನೋ? ' ಎಂದನು. ಮಯೂರನಿಗೆ ಆಶ್ಚರ್ಯವಾಯಿತು. ಕಾಡಿನ ನಡುವೆಯೂ ಗುರುತರಿತವರೇ! ಮಯೂರನು 'ಹೌದು' ಎಂದನು.

ಬೈರಾಗಿಯು ತಿರುಗಿಯೂ ಕೇಳಿದನು : ' ಹಾಗಾದರೆ ನಿನ್ನೆಯ ದಿನ ಯುದ್ಧದಲ್ಲಿ ಏನಾಯಿತು ? '

ಮಯೂರನು ಬೆರಗಾಗಿಹೋದನು: ಏನು ಹೇಳಬೇಕೋ ತೋರಲಿಲ್ಲ.

ಬೈರಾಗಿಯು ಮತ್ತೆಯೂ ಕೇಳಿದನು.

' ಆಗುವುದೇನು ? ನಾನು ಮನಸ್ಸು ಮಾಡಿದ್ದರೆ, ದೊಡ್ಡ ಪುಟ್ಟಸ್ವಾಮಿಯವರನ್ನು ಕಡಿದು ಹಾಕಬಹುದಾಗಿದ್ದಿತು '

' ಸರಿ ! ಹಾಗಾದರೆ ಏಳು ಹೋಗೋಣ '

ಹುಡುಗನೂ ಮರುಮಾತಾಡದೆ ಎದ್ದು ಆತನ ಹಿಂದೆ ಹೊರಟು ಹೋದನು.

ಬೈರಾಗಿಯು ಅವನನ್ನು ಹತ್ತಿರದಲ್ಲಿದ್ದ ಕೊಳಕ್ಕೆ ಕರೆದುಕೊಂಡು ಹೋಗಿ, 'ಸ್ನಾನಾದಿಗಳನ್ನು ತೀರಿಸಿಕೊ. ನಾನು ಅಷ್ಟರಲ್ಲಿಯೇ ಬರುವೆನು ' ಎಂದು ಹೇಳಿಹೋದನು. ಮಯೂರನು 'ಈತನಾರು ಈ ಆಪದ್ಬಂಧು ? ' ಎಂದು ಆಶ್ಚರ್ಯಪಡುತ್ತ ತನ್ನ ಸ್ನಾನಾದಿಗಳನ್ನು ತೀರಿಸಿದನು.

ಬೈರಾಗಿಯು ಮತ್ತೆ ಬಂದು ಇವನನ್ನು ತನ್ನ ಗವಿಗೆ ಕರೆದುಕೊಂಡು ಹೋದನು. ಗವಿಯು ಹೊರಗಡೆಯಿಂದ ನೋಡುವವರಿಗೆ ಗುರುತು ಸಿಕ್ಕದು. ಒಂದು ಮೆಳೆ. ಅದರ ಮಗ್ಗುಲಲ್ಲಿ ಒಂದು ದಪ್ಪ ಗುಂಡು. ಅದರ ಹಿಂದೆ ಗವಿ. ಗವಿಗೆ ಹೋಗಬೇಕಾದರೆ ಗುಂಡನ್ನು ಬಳಸಿಕೊಂಡು ಹೋಗಬೇಕು.

ಗವಿಯು ಒಳಗಡೆ ಬೇಕಾದಷ್ಟು ದೊಡ್ಡದಾಗಿದ್ದಿತು. ಸುಮಾರು ಎರಡಾಳುದ್ದ ಕೆಳಕ್ಕೆ ಇಳಿದು ಅಲ್ಲಿಂದಾಚೆಗೆ ಸುಮಾರು ಹತ್ತು ಮಾರು ದೂರ ತಲೆಯನ್ನು ತಗ್ಗಿಸಿಕೊಂಡು ಹೋದರೆ ಅಲ್ಲಿ ಸುಮಾರು ಎರಡಾಳು ಎತ್ತರ ವಿರುವ ವಿಶಾಲವಾದ ಗುಹೆ. ಅಲ್ಲಲ್ಲಿ ಪಕ್ಕಗಳಲ್ಲಿ ಕಲ್ಲು ಮಣ್ಣಿನ ಗೋಡೆಯನ್ನು ಹಾಕಿ ಸಣ್ಣಸಣ್ಣ ಕಿರುಮನೆಗಳನ್ನು ಮಾಡಿದ್ದಿತು. ನಡುವೆ ದೊಡ್ಡ ಹಜಾರ, ಧಾರಾಳವಾಗಿ ನೂರು ಜನರು ಊಟಕ್ಕೆ ಕುಳಿತುಕೊಳ್ಳಬಹುದು.

ಬೈರಾಗಿಯು ಮಯೂರನನ್ನು ಕುಳಿತುಕೊಳ್ಳೆಂದು ಹೇಳಿ ಒಂದು ಮರದ ತುಂಡನ್ನು ಕೊಟ್ಟು ಒಳಗೆ ಹೋಗಿ ಕೆಲವು ಗೆಡ್ಡೆಗಳನ್ನೂ ಒಂದು ಚೊಂಬಿನಲ್ಲಿ ಹಾಲನ್ನೂ ತಂದಿಟ್ಟನು.

ಮಯೂರನ ಹಸಿವಡಗಿದ ಮೇಲೆ ಮಾತುಕಥೆಗಳಿಗೆ ಆರಂಭವಾಯಿತು. ಬೈರಾಗಿಯು ಬಹಳ ಮಾತಿನವನಂತೆ ಕಾಣಲಿಲ್ಲ. ಮಯೂರನಿಗೂ ಮಾತನಾಡಲು ಇಷ್ಟವಿರಲಿಲ್ಲ. ಒಟ್ಟಿನಲ್ಲಿ ಇಬ್ಬರ ಮಾತುಗಳಿಂದ ಒಬ್ಬರೊಬ್ಬರಿಗೆ ಗೊತ್ತಾದುದಿಷ್ಟೆ: 'ಮಯೂರನು ಆವೇಳೆಗೆ ಸರಿಯಾಗಿ ಬರುವನೆಂದು ಬೈರಾಗಿಗೆ ಗೊತ್ತು. ಹಾಗೆಯೇ ಮಯೂರನಾರೆಂಬುದನ್ನೂ ಆತನು ಬಲ್ಲನು. ಮುಂದಿನ ಮಹತ್ಕಾರ್ಯಗಳಿಗೆ ಅವನು ನಡುಕಟ್ಟಬೇಕು' ಮಹತ್ಕಾರ್ಯಗಳೇನು ಎಂಬುದನ್ನು ಮಾತ್ರ ಬೈರಾಗಿಯು ಹೇಳಲಿಲ್ಲ.

ಬೈರಾಗಿಯು ಬ್ರಾಹ್ಮಣ. ಶಾಸ್ತ್ರಗಳಲ್ಲಿ ಆಸಕ್ತಿ ಹೆಚ್ಚು. ತಪಸ್ಸು ಮಾಡಿಕೊಂಡು ತನ್ನಪಾಡಿಗೆ ತಾನು ಇರುತ್ತಿದ್ದನು. ಹೆಸರು ಷಡಾನನ. ಪಶ್ಚಿಮ ಘಟ್ಟಗಳ ಕಡೆಯವನು. ಕಾರ್ಯಾಂತರದಿಂದ ಬಂದು ಅಲ್ಲಿ ನೆಲೆಸಿದ್ದನು. ಇನ್ನು ಕೆಲವು ದಿನಗಳೊಳಗಾಗಿ ತನ್ನ ಊರಿಗೆ ಹಿಂತಿರುಗುವನು.

ಮಯೂರನು ಕೊನೆಗೆ 'ತಮ್ಮಲ್ಲಿ ಒಂದು ಯಾಚನೆ ಮಾಡಬೇಕಾಗಿದೆ' ಎಂದನು.

'ನಾನು ಬೈರಾಗಿ. ನನ್ನಲ್ಲಿ ಸಂಕೋಚವೇನು? ಧಾರಾಳವಾಗಿ ಹೇಳು'

'ನಮ್ಮ ಗುರುಗಳ ಪರಿಚಯವು ತಮಗುಂಟೆ ?'

'ಇರಬಹುದು'

'ಜಟ್ಟಿಯವರ ಪರಿಚಯವೂ ಇರಬಹುದು'

'ಇದ್ದೀತು.'

'ಅವರೇನಾಗಿರುವರೋ ಅದನ್ನು ತಿಳಿಯಬೇಕು.'

'ನಾನು ಹೋಗಿ ತಿಳಿದುಕೊಂಡು ಬರಬೇಕೇನು? ಅದು ಸಾಧ್ಯವಿಲ್ಲ. ನಾನು ಒಂದು ಹಟವನ್ನು ತೊಟ್ಟಿದ್ದೇನೆ. ಅದು ನೆರವೇರುವರೆಗೂ ನಾನು ಊರನ್ನು ಸೇರುವುದಿಲ್ಲ. ಬೇಕಾದರೆ ಹುಲ್ಲುಗಾವಲಿಗೆ ಹೋಗಿ ದನಕಾಯುವ ಹುಡುಗರಿಂದ ತಿಳಿದುಕೊಂಡು ಬರುತ್ತೇನೆ'

'ಹೇಗಾದರೂ ಸರಿ'

'ನೀನೇ ಹೋಗಿ ಬರಲು ಹೆದರಿಕೆಯೇನು ?'

ಹುಡುಗನು ವಿಚಿತ್ರವಾದ ನಗುನಕ್ಕು, 'ಏತಕ್ಕೆಂದು ಹೆದರಬೇಕು ?' ಎಂದನು.

'ಹಾಗಾದರೆ ನಿನಗೇನೂ ಆಶೆಯಿಲ್ಲವೇ ?'

'ಇದುವರೆಗೂ ಯಾವ ಆಶೆಯೂ ಅಷ್ಟು ಬಲವಾಗಿರಲಿಲ್ಲ. ಆಗಾಗ ಒಂದೊಂದು ಸಲ ಬೇಸಿಗೆಯ ಮಧ್ಯಾಹ್ನದಲ್ಲಿ ಗಾಳಿಬೀಸುವಂತೆ ಆಶೆಯು ತಲೆದೋರುತ್ತಿದ್ದಿತು, ಆದರೆ ಅದು ಸ್ಥಾಯಿಯಾಗಿರುತ್ತಿರಲಿಲ್ಲ. ನಿನ್ನೆಯ ಸಂಜೆಯಿಂದ ಆಶೆಗೆ ಆಳಾಗುವುದು ಎಂದರೇನು ಎಂಬುದರ ಪರಿಚಯವಾಗುತ್ತಿದೆ'

'ಅಂಥಾ ಪ್ರಬಲವಾದ ಆಶೆಯಾವುದು ?'

'ನಾನು ಆ ಆಶೆಯನ್ನು ಬಾಯಿಯಲ್ಲಿ ಹೇಳಿದರೆ ತಾವು ನಕ್ಕುಬಿಡಬಹುದು. ಆಶೆಯು ಆಕಾಶದಷ್ಟು; ನನಗಿರುವ ಸಾಧನೆಯು ಸಾಸುವೆಯಷ್ಟು'

'ಅದೇನು ಹೇಳು ನೋಡೋಣ. ನನ್ನಿಂದ ಸಾಧ್ಯವಾದರೆ ನಾನೂ ನಿನ್ನ ಜೊತೆ ಸೇರುತ್ತೇನೆ'

'ತಮ್ಮ ಪ್ರತಿಜ್ಞೆ ?'

'ನಿನ್ನ ಆಶೆಯು ಕೈಸೇರುವ ತನಕ ನನ್ನ ಆಶೆಯನ್ನು ಒಂದು ಗೂಟಕ್ಕೆ ನೇತುಹಾಕಿರುವುದು'

'ತಾವು ನನ್ನಲ್ಲಿ ಇಷ್ಟೇಕೆ ಅನುಗ್ರಹ ಮಾಡಿರುವಿರಿ?'

'ಪಾಪ! ಎಲ್ಲಿಯೋ ಯಾರೋ ಹೊಡೆದಿದ್ದಾರೆ. ಏಟು ತಡೆಯದೆ ಓಡಿಬಂದಿದ್ದೀಯೆ. ನಾನೂ ಊರುಬಿಟ್ಟವನು, ನೀನೂ ಊರುಬಿಟ್ಟವನು. ನಾವಿಬ್ಬರೂ ಒಂದೇ ಜಾತಿಯಾದೆವು. ಅದರಿಂದ'

'ನಾನು ತಮ್ಮಹಾಗೆ ಊರಿಗೆ ಹೋಗುವುದಿಲ್ಲನೆಂದು ಪ್ರತಿಜ್ಞೆ ಮಾಡಿಲ್ಲವಲ್ಲ!'

'ನಾನೂ ನನಗಾಗಿ ಊರಿಗೆ ಹೋಗುವುದಿಲ್ಲ, ಅಷ್ಟೆ!'

'ಹಾಗಾದರೆ ಯಾರಿಗೋಸ್ಕರನಾದರೂ ಹೋಗಬೇಕಾಗಿ ಬಂದರೆ ಹೋಗುವಿರಾ?'

'ಅಗತ್ಯವಾಗಿ! ನಿನ್ನಾಶೆಯೇನು ಹೇಳಲಿಲ್ಲವಲ್ಲ?'

'ಆಗಲಿ. ಇನ್ನೊಮ್ಮೆ ಹೇಳುತ್ತೇನೆ'

'ನಾನು ಈಗ ನಿನ್ನ ಜೊತೆಯಲ್ಲಿದ್ದೇನೆ. ಇನ್ನೊಮ್ಮೆಯೆಂದರೆ ಇನ್ನಾವಾಗಲೋ?'

'ಇನ್ನೇನೂ ಇಲ್ಲ. ಪಲ್ಲವರೊಡನೆ ಸಮಸಮವಾಗಿ ನಿಂತು ಹೋರಾಡಬೇಕು; ಅವರನ್ನು ಮುರಿಯಬೇಕು!'

'ಇದು ಬ್ರಾಹ್ಮಣರಿಗೆ ತಕ್ಕುದಲ್ಲ!'

'ಹಾಗೆಂದರೆ?'

'ಹಗೆಗೆ ಹಗೆ ಮಾಡುವುದು ಬ್ರಾಹ್ಮಣರ ಧರ್ಮವಲ್ಲ! ಬಹುಶಃ ನೀನು ಬ್ರಾಹ್ಮಣನಲ್ಲ!'

'ಅದೇನು? ಹಾಗೆ ಹೇಳುವಿರಿ?'

'ಹೇಳುವುದೇನು? ನಿನ್ನ ಮಾತೇ ಹೇಳುತ್ತಿದೆಯಲ್ಲ! ಬ್ರಾಹ್ಮಣ ಪುತ್ರನಾಗಿದ್ದರೆ, ನಿನಗೆ ಶಾಸ್ತ್ರಾಧ್ಯಯನ ತಪಸ್ಸು ವ್ರತಗಳ ಕಡೆಗೆ ಮನಸ್ಸು ಹೋಗಬೇಕಾಗಿದ್ದಿತು. ಅದನ್ನು ಬಿಟ್ಟು, 'ಯುದ್ಧಮಾಡಬೇಕು!

ಮಟ್ಟಹಾಕಬೇಕು' ಎಂಬ ಯೋಚನೆಗಳು ನಿನಗೆ ಹುಟ್ಟಿದರೆ ನೀನು ಕ್ಷತ್ರಿಯನಾಗಿರಬೇಕು. ನೀನು ಯಾರ ಮಗ? ಹೇಳು'

ಹುಡುಗನು ಪೆಚ್ಚಾಗಿ 'ನನಗೆ ಅದು ತಿಳಿಯದು' ಎಂದನು.

ಬೈರಾಗಿಯು ಸಣ್ಣಗೆ ನಕ್ಕು, 'ಹೋಗಲಿ ಬಿಡು' ಎಂದನು.

ಹುಡುಗನು ಒಂದು ಗಳಿಗೆ ಮಾತನಾಡಲಿಲ್ಲ. ಮತ್ತೆ ಕೇಳಿದನು:

'ಸ್ವಾಮಿ! ಈ ಜಾತಿಯನ್ನು ತಿಳಿದುಕೊಳ್ಳುವುದಕ್ಕೆ ಕರ್ಮಗಳಲ್ಲದೆ ಬೇರೆ ಏನಾದರೂ ಉಪಾಯವುಂಟೆ?'

'ಉಂಟು. ರಕ್ತದಿಂದ ತಿಳಿದುಕೊಳ್ಳಬಹುದಂತೆ! ನಿನಗದನ್ನು ತಿಳಿದುಕೊಳ್ಳುವ ಆಶೆಯಿದ್ದರೆ ಬಾ. ನಮ್ಮ ಗುರುಗಳ ಬಳಿಗೆ ಕರೆದು ಕೊಂಡು ಹೋಗುವೆನು'

'ಸರಿ. ಹೋಗೋಣ'

ಇಬ್ಬರೂ ಮಾತುಗಳನ್ನಲ್ಲಿಗೆ ನಿಲ್ಲಿಸಿದರು. ಬೈರಾಗಿಯು, 'ನಿನ್ನೆ ಯಿಂದ ಬಹಳ ದಣಿದಿದ್ದೀಯೆ. ಒಂದು ಗಳಿಗೆ ಹಾಗೆಯೇ ವಿಶ್ರಮಿಸಿಕೊ. ನಾನೂ ಬರುವೆನು' ಎಂದು ಹೇಳಿ ಹೊರಟುಹೋದನು.

ಮಯೂರನು ಆ ಗವಿಯಲ್ಲಿ ತಾಯಿಯ ತೊಡೆಯಲ್ಲಿ ಮಲಗಿದ ಮಗುವಿನಂತೆ ನಿಶ್ಶಂಕೆಯಿಂದ ನಿರಾತಂಕವಾಗಿ ನಿದ್ದೆಹೋದನು.

———o———

## ಆರನೆಯ ಪ್ರಕರಣ

ಮಯೂರನು ಏಳುವ ವೇಳೆಗೆ ಮಧ್ಯಾಹ್ನವಾಗಿ ಹೋಗಿದ್ದಿತು. ಬಿಸಿಲು ತಂಪುತ್ತಾ ಬಂದಿದ್ದಿತೆಂದೂ ಹೇಳಬಹುದು. ಅವನು ಎದ್ದು ಕಣ್ಣು ಬಿಡುವ ವೇಳೆಗೆ ಯಾವನೋ ಗುರುತಿಲ್ಲದವನೊಬ್ಬನು ಎದುರು ಗೋಡೆಯ ಬಳಿ ವೀರಾಸನದಲ್ಲಿ ಕುಳಿತಿದ್ದಾನೆ. ಮುಖವು ಗಂಭೀರ ಮತ್ತು ಗಡುಸು. ಭವ್ಯಾಕೃತಿ. ವಿಶಾಲವಾದ ಎದೆ. ದಪ್ಪದಪ್ಪ ತೋಳುಗಳು. ಮುಂದೊಂದು

ಒರೆಯೊಡನಿರುವ ಹಲಗೆ ಕತ್ತಿ. ನಡುವಿನಲ್ಲಿ ನಡುಗಟ್ಟಿನಂತಿರುವ ಹಿತ್ತಾಳೆಯ ಪಟ್ಟಿ. ತೊಟ್ಟಿರುವ ಕವಚದಿಂದ ಈಚೆಗೆ ಇಣಿಕಿನೋಡುತ್ತಿರುವ ಕಠಾರಿಯ ಹಿಡಿ. ತಲೆಯಮೇಲೆ ಇರಬೇಕಾದ ಪಾಗು ಪಕ್ಕದಲ್ಲಿ ನೆಲದ ಮೇಲೆ ಇದೆ. ತಲೆಯು ಸೊಗಸಾಗಿ ನುಣ್ಣಗೆ ನಯಮಾಡಿಟ್ಟಿರುವ ಗುಂಡು. ಕಡ್ಡಿಯ ಗಾತ್ರದ ಕೂದಲು.

ಮಯೂರನು ಏಳುತ್ತಲೂ ಆಗಂತುಕನೂ ಎದ್ದು ಅವನಿಗೆ ಅಡ್ಡ ಬಿದ್ದನು. ಮಯೂರನಿಗೆ ಆಶ್ಚರ್ಯವಾಗಿ 'ಯಾರಪ್ಪಾ ನೀವು ?' ಎಂದನು. ಆಗಂತುಕನು 'ನಾನು ಕಳ್ಳರ ಗುಂಪಿನ ಯಜಮಾನ. ನನ್ನ ಕೈಕೆಳಗೆ ಐನೂರು ಜನ ಇದ್ದಾರೆ. ಒಬ್ಬರಿಗಿಂತಲೂ ಒಬ್ಬರು ಹೆಚ್ಚಲ್ಲದೆ ಯಾರಿಗೆ ಯಾರೂ ಕಡಮೆಯಿಲ್ಲ. ನಾನು ಪಾದಸೇವೆಗೆ ಬಂದಿದ್ದೇನೆ. ನನ್ನನ್ನು ಹತ್ತಿರ ಇಟ್ಟುಕೊಂಡು ಸೇವೆ ತೆಗೆದುಕೊಳ್ಳಬೇಕು' ಎಂದು ಕೈಮುಗಿದನು.

ಮಯೂರನಿಗೆ ಏನು ಹೇಳುವುದಕ್ಕೂ ತೋಚಲಿಲ್ಲ. ಇವನು ಸುಮ್ಮನಿರುವುದನ್ನು ಕಂಡು ಅವನು, 'ತಮಗೆ ಅನುಮಾನವಿರಬಹುದು ಇವನನ್ನು ಹತ್ತಿರ ಸೇರಿಸಿದರೆ ಹೇಗೆ ಎಂದು. ಪ್ರಭು! ಯಾರೇ ಆಗಲಿ ಸೇರುವುದೂ ಬಿಡುವುದೂ ಮನಸ್ಸಿನಿಂದ. ಒಗ್ಗಿದರೆ ಸೇರುವುದು ರೇಗಿದರೆ ಬಿಡುವುದು ಇದು ಮನಸ್ಸಿನ ಧರ್ಮ. ಮೆಚ್ಚಿದುದನ್ನು ಕಂಡು ಒಪ್ಪಿಕೊಳ್ಳುವುದು ಅದರ ಸ್ವಭಾವ. ಸ್ವಾಮಿ! ನಮ್ಮವರು ನನ್ನನ್ನು ಒಪ್ಪಿಕೊಂಡಿರುವುದೂ ಹೀಗೆಯೇ! ಅವರು ನನ್ನನ್ನು ಅವರಿಗಿಂತ ದೊಡ್ಡವನೆಂದು ಒಪ್ಪಿಕೊಂಡಿರುವರು. ನಾನು ತಮ್ಮನ್ನು ನನಗಿಂತ ದೊಡ್ಡವರೆಂದು ಒಪ್ಪಿಕೊಂಡಿರುವೆನು. ಅದರಿಂದಲೇ ತಮ್ಮ ಬಳಿಗೆ ಬಂದುದು' ಎಂದನು.

'ನಿಮಗಿಂತ ನಾನು ದೊಡ್ಡವನೆಂದು ಯಾವಾಗ ಕಂಡುಕೊಂಡಿರಿ ?'

'ನಿನ್ನೆಯ ದಿನ. ನಾನೂ ಕತ್ತಿಯ ವರಸೆಯಲ್ಲಿ ಹೆಸರು ಪಡೆದಿದ್ದೇನೆ. ಆದರೆ ಯುವರಾಜನ ಮುಂದೆ ನಿಂತು ಅವನಮೇಲೆ ಯುದ್ಧಮಾಡುವುದಕ್ಕೆ ಇನ್ನೂ ಎದೆಗೊಂಡಿರಲಿಲ್ಲ. ತಾವು ಅವನಮೇಲೆ ಯುದ್ಧಮಾಡಿದುದು ಮಾತ್ರವಲ್ಲ, ಸೋಲಿಸಿಯೂ ಬಿಟ್ಟಿದ್ದೀರಿ. ಅದರಿಂದ ತಮ್ಮಲ್ಲಿಗೆ ಬಂದಿದ್ದೇನೆ'

'ಉದ್ದೇಶ ?'

'ನನಗೆ ಕಳ್ಳತನಮಾಡಿ ಹೊಟ್ಟೆಹೊರೆಯುವುದು ಇಷ್ಟವಿಲ್ಲ. ಎಲ್ಲಿಗೆ ಹೋದರೂ ಯಾರೂ ನನ್ನನ್ನು ನಂಬುವುದಿಲ್ಲ. ತಾವು ಮುಂದಕ್ಕೆ ಏನಾಗುವಿರೆಂಬುದನ್ನು ನಾನು ಬಲ್ಲೆ. ಆಗ ತಮ್ಮ ಪಾದದ ಆಸರೆಯಲ್ಲಿ ಸನ್ಮಾರ್ಗದಲ್ಲಿದ್ದುಕೊಂಡು ಇರಬೇಕೆಂದು ಆಶೆ. ಅದಕ್ಕಾಗಿ ಮುಂದೆ ಒಳ್ಳೆಯವನಾಗಿ ಒಳ್ಳೆಯ ಬಾಳು ಬಾಳುವುದಕ್ಕೆ ಈವೊತ್ತೇ ಬೀಜ ನೆಡೋಣವೆಂದು ಬಂದಿದ್ದೇನೆ'

ಮಯೂರನ ಮನದಾಶೆಯು ಅವನರಿಯದಂತೆಯೇ ಮುಂದಕ್ಕೆ ಇನ್ನೊಂದು ಹಜ್ಜೆಯಿಟ್ಟಿತು. ಅವನು ಮತ್ತೆ ಕೇಳಿದನು: 'ಹಾಗಾದರೆ ನಾನೇನಾಗುವೆನು ?'

ಕಳ್ಳರೊಡೆಯನು ಮತ್ತೆ ಅದೇ ಅಕೃತ್ರಿಮದ ಸರಳ ಧ್ವನಿಯಲ್ಲಿ 'ತಾವೂ ಒಂದು ರಾಜ್ಯ ಕಟ್ಟಬೇಕೆಂದಿದ್ದೀರಿ'

ಮಯೂರನು ಅಜಾಗ್ರತವಾಗಿರುವಾಗ ಚಾಟಿಯ ಏಟುಬಿದ್ದ ಕುದುರೆಯಂತೆ ಚಮಕಿತನಾಗಿ, 'ಇದನ್ನು ನಿಮಗಾರು ಹೇಳಿದರು ?' ಎಂದನು.

'ಸ್ವಾಮಿ ! ನಾನು ಕಳ್ಳರ ಗುಂಪಿನ ನಾಯಕ. ನನಗೆ ಇದೆಲ್ಲವನ್ನೂ ಯಾರೂ ಹೇಳುವುದಿಲ್ಲ. ನಾನೇ ಊಹಿಸುತ್ತೇನೆ. ಆಕಾಶದಲ್ಲಿರುವ ಗ್ರಹ ನೋಡಿ ಜೋಯಿಸರು ಗುಣಿಸಿದರೆ ಅದು ನಿಜವೂ ಆಗಬಹುದು ಸುಳ್ಳೂ ಆಗಬಹುದು. ಎದುರಿಗಿರುವ ಮನುಷ್ಯನ ಮುಖದ ಛಾಯೆಯನ್ನು ಹಿಡಿದು ಗುಣಿಸಿದರೆ ಅದು ಸಾಮಾನ್ಯವಾಗಿ ಸುಳ್ಳಾಗುವುದಿಲ್ಲ'

'ಹಾಗಾದರೆ, ಯಾವ ಯಾವ ಕಾರಣಗಳಿಂದ ನೀವು ಹೀಗೆ ಊಹಿಸಿದ್ದೀರಿ ?'

'ತಾವು ಕೋಟೆಯ ಗೋಡೆಯನ್ನು ಹಾರಿಬಂದುದರಿಂದ, ಇನ್ನೂ ಬದುಕಿರುವುದರಿಂದ, ತಮಗಂತಹ ಆಶೆಯು ಇರುವುದೆಂದು ಊಹಿಸಿದ್ದೇನೆ'

'ಅದನ್ನು ದಿಟವೆನ್ನಲು ನನಗೇ ಧೈರ್ಯವಿಲ್ಲ'

'ಸ್ವಾಮಿ! ಆಶೆಮಾಡುವುದು ಹಿಂದಿನದು, ಕೆಲಸಮಾಡುವುದು ಇಂದಿನದು, ಕೈಸೇರುವುದು ಮುಂದಿನದು. ಅಲ್ಲದೆ, ನಮಗೆ ಹುಟ್ಟುವ ಆಶೆಗಳಿಗೆಲ್ಲ ನಾವೇ ಹೊಣೆಯೆ? ಆಶೆ ಹುಟ್ಟಿದ ಮೇಲೆ ಸುಮ್ಮನಿರಲು ನಮ್ಮ ಕೈಲಾದೀತೆ? ಏನಾದರೂ ಒಂದು ಬಗೆಯಾಗಿ ಅದು ಕೈಗೂಡುವುದಕ್ಕೆ ಹಾದಿಯನ್ನು ಹುಡುಕುವುದು ಮನುಷ್ಯನ ಹುಟ್ಟುಗುಣ. ಅದರಿಂದ ತಾವು ನಿಸ್ಸಹಾಯರಾಗಿರುವಿರೆಂದು ಅಧೈರ್ಯಪಡಬೇಡಿ. ಆಶೆಯು ಕೈಸೇರುವ ಕೆಲಸಮಾಡಿ' ಎಂದನು.

ಮಯೂರನಿಗೆ ಕಳ್ಳನ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು. ಅವನು ಮರುಮಾತನ್ನಾಡದೆ, 'ಹೂ! ಆಗಲಿ ನೋಡೋಣ' ಎಂದನು.

ಆ ವೇಳೆಗೆ ಬಾಗಿಲಿಂದ ಯಾರೋ, 'ನೋಡೋಣ ಬಿಡಿ. ಆಗಲಿ ಇಟ್ಟುಕೊಳ್ಳಿ ಕಾರ್ಯಪರನಾದವನು ಕತ್ತೆಯ ಕಾಲನ್ನಾದರೂ ಕಟ್ಟಬೇಕು' ಎಂದರು. ತಿರುಗಿನೋಡಲು ಪೂರ್ವ ಪರಿಚಿತನಾದ ಬೈರಾಗಿ.

ಮಯೂರನಿಗೆ 'ಇದೇನಿದು? ಬೈರಾಗಿಯೂ ಕಳ್ಳನೂ ಸ್ನೇಹಿತರೋ?' ಎನ್ನಿಸಿತು.

ಬೈರಾಗಿಯು ಕೂಡಲೇ ತನ್ನ ಸ್ವಾಭಾವಿಕವಾದ ಮೃದುವಾದ ಸಣ್ಣನಗೆ ನಕ್ಕು, 'ಪ್ರಭುಗಳಿಗೆ ಸಂದೇಹವೇನೋ ಬೈರಾಗಿಯ ಮೇಲೆ? ಸದ್ಯಕ್ಕೆ ಇಷ್ಟು ಮಾತ್ರ ಹೇಳುವೆನು. ಲೋಕದಲ್ಲಿ ವೇಷಗಳೆಲ್ಲಾ ನಿಜವೆಂದು ನಂಬಲಾಗುವುದಿಲ್ಲ. ಬೈರಾಗಿಯಂತೆ ಕಾಣುವ ನಾನು ಒಳಗೆ ಪಕ್ಕ ಕಳ್ಳನಿರಬಹುದು, ಕಳ್ಳನಾದೀತನು ಸಜ್ಜನ ಶಿರೋಮಣಿಯಾಗಿರಬಹುದು. ಆದುದರಿಂದ ಮುಖನೋಡಿ ಮಣೆಹಾಕುವುದಕ್ಕಿಂತ ಮನಗಂಡು ಮೆಚ್ಚುವುದು ಯೋಗ್ಯವಾದುದು. ನಮ್ಮಿಬ್ಬರಿಗೂ ಇಂದಿನ ಸಂಬಂಧವಲ್ಲ. ಈತನೂ ನಾನೂ ಹಿಂದೆ ಬಾಳಿದ ರಾಜಮನೆತನವೊಂದರಲ್ಲಿ ಆಶ್ರಯವನ್ನು ಪಡೆದಿದ್ದೆವು. ಇದು ಅಂದಿನ ಪರಿಚಯ' ಎಂದನು.

ಮಯೂರನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯವೊದಗಿ ಮೊಂಕು ಬಡಿಸಿಬಿಟ್ಟವು. ಅವನು, 'ಒಬ್ಬನಿಗೇ ಉತ್ತರ ಹೇಳುವುದು ಕಷ್ಟವಾಗಿ

ದ್ದಿತು, ಇನ್ನಿಬ್ಬರಾದ ಮೇಲೆ..................' ಎಂದುಕೊಂಡು, 'ಹೊ! ಆಗಲಿ. ಈಗ ನಾನು ನಿಮ್ಮ ಮಾತಿಗೆ ಒಪ್ಪಿಕೊಂಡರೆ ನಾನೇನು ಮಾಡ ಬೇಕು?' ಎಂದನು.

ಕಳ್ಳರಧಿಪತಿಯು ಬೈರಾಗಿಯ ಮುಖನೋಡಿದನು. ಬೈರಾಗಿಯು, 'ಸ್ನೇಹವು ಯಾವಾಗಲೂ ಗುಣಪರಿಚಯದಿಂದ ರೂಢಮೂಲವಾಗುವುದು. ಅದರಿಂದ ನೀವಿಬ್ಬರೂ ಒಬ್ಬರನ್ನೊಬ್ಬರು ಚೆನ್ನಾಗಿ ಅರಿತುಕೊಳ್ಳಬೇಕು. ಅದರಿಂದ ಆತನ ಜೊತೆಯಲ್ಲಿ ಹೋಗಿ ಗುಂಪಿನವರನ್ನೆಲ್ಲಾ ನೋಡಿ ಬರಬೇಕು' ಎಂದನು

ಇನ್ನೊಂದು ಗಳಿಗೆಯೊಳಗಾಗಿ ಮೂವರೂ ಗುಹೆಯಿಂದ ಹೊರಟು ಕಳ್ಳರ ತಾವಿಗೆ ಹೋದರು.

———o———

## ಏಳನೆಯ ಪ್ರಕರಣ.

ಕಳ್ಳರನ್ನೆಲ್ಲಾ ಅಧಿಪತಿಯು ಒಬ್ಬೊಬ್ಬರನ್ನಾಗಿ ತೋರಿಸಿದನು. ಅದು ಸುಮಾರು ಹೊತ್ತು ಹಿಡಿಯಿತು. ಅದೆಲ್ಲವೂ ಮುಗಿದ ಮೇಲೆ ಬೈರಾಗಿಯೂ ಒಡೆಯನೂ ಒಂದು ಗಳಿಗೆ ಅತ್ತಕಡೆಗೆ ಹೋಗಿದ್ದು ಬಂದರು. ಆಮೇಲೆ ಒಡೆಯನು, 'ಒಡಹುಟ್ಟುಗಳೇ! ಒಡನಾಡಿಗಳೇ! ಇವರನ್ನು ನಾವಿನ್ನು ನಮಗೆ ಒಡೆಯರಾಗಿರಿ ಎಂದು ಕೇಳಿಕೊಳ್ಳಬೇಕೆಂದಿದ್ದೇನೆ. ಕಳೆದ ಹದಿನೆಂಟು ವರುಷಗಳಿಂದಲೂ ಹಗಲಿರುಳೆನ್ನದೆ, ಕಾಡುಮೇಡೆನ್ನದೆ, ನನಗಾಗಿ ಮನೆ, ಬಾಗಿಲು, ಮಡದಿ, ಮಕ್ಕಳು ಬಿಟ್ಟು ಪಾಡು ಪಟ್ಟಿರುವಿರಿ. ಅದರಿಂದ ಯಾವ ಕೆಲಸವೇ ಆಗಲಿ, ನೀವೆಲ್ಲರೂ ಒಪ್ಪಿದಲ್ಲದೆ ನಾನು ಮಾಡುವುದಿಲ್ಲ. ಅದರಿಂದ ನಿಮ್ಮ ಸಮ್ಮತಿಯನ್ನು ಕೇಳಲು ಬಂದಿದ್ದೇನೆ' ಎಂದನು.

ಎಲ್ಲರೂ ಒಂದೇ ಗಂಟಲಿನಿಂದ ಕೂಗಿದರು 'ಆಗಬಹುದು; ಆಗ ಬಹುದು. ಅವರೊಪ್ಪಿದರೆ ನಮ್ಮ ಭಾಗ್ಯ'

ಮಯೂರನೇನು ಮಾಡಬೇಕು? ಅವನೂ ಒಪ್ಪಿದನು.

ಬೈರಾಗಿಯು ಎದ್ದು ನಿಂತು ಹೇಳಿದನು: 'ಇದುವರೆಗೂ ನಿಮ್ಮನ್ನು ಸೋದರರೇ ಎನ್ನುತ್ತಿದ್ದೆ. ಈಗಲೂ ಹಾಗೆಯೇ ಕರೆಯಬೇಕೆಂದು ಆಶೆ. ಇನ್ನೇನೆಂದು ಕರೆಯುವುದಕ್ಕೂ ಮನಸ್ಸು ಬಾರದು. ಆದರೆ ನೀವೀಗ ಪ್ರಭುಗಳೆಂದು ಆರಿಸಿಕೊಂಡಿರುವವರು ನನ್ನ ವೇಷಕ್ಕೂ ನಿಮಗೂ ಸಂಬಂಧ ಹೇಗೆಂದು ಕೇಳಿದರೆ ನಾನು ಕಣ್ಣುಕಣ್ಣು ಬಿಡಬೇಕಾಗುವುದು. ಅದಕ್ಕಾಗಿ ನಾನು ಸುಮ್ಮನೆ ಇಷ್ಟು ಮಾತ್ರ ಹೇಳುತ್ತೇನೆ. ಪ್ರಭುಗಳಿಗೆ ಪಟ್ಟ ಕಟ್ಟಿದಾಗ ಕಾಣಿಸಿಕೊಂಡು ಕಾಣಿಕೆ ಕೊಟ್ಟು ಕೈಮುಗಿಯುವ ವಾಡಿಕೆಯು ನೀವು ಅರಿಯದುದೇನೂ ಅಲ್ಲ. ಈಗ ಇವರನ್ನು ಪ್ರಭುಗಳನ್ನಾಗಿ ಆರಿಸಿಕೊಂಡಿರುವಿರಿ. ಅವರಿಗೆ ಏನು ಕಾಣಿಕೆ ಕೊಡುವಿರಿ? ಅದನ್ನು ಮೊದಲು ಗೊತ್ತುಮಾಡಿ'

'ಅಲ್ಲಿಂದಲೇ ಅಪ್ಪಣೆಯಾಗಲಿ'

ಮೂವರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಬೇರೆ ಯತ್ನವಿಲ್ಲದೆ ಮಯೂರನೆದ್ದು ನಿಂತನು. ಆ ನಿಂತ ನಿಲುವಿನ ವೈಖರಿಯು ಎಲ್ಲರಿಗೂ ಮೆಚ್ಚಿತು. ಗುಂಪಿನಲ್ಲಿ ಎಲ್ಲರ ಬಾಯಲ್ಲಿಯೂ 'ಹೌದು, ಹೌದು, ಒಂದು ಕಡೆಯಿಂದ ನೋಡಿದರೆ ತಟ್ಟನೆ ಹಾಗೆಯೇ ಕಾಣುತ್ತದೆ. ಆ ಅಪ್ಪನ ಮಗನೇ! ಸಂದೇಹವಿಲ್ಲ' ಎಂದು ಗುಜಗುಂಪಲಾಯಿತು.

ಮಯೂರನು ಆ ಉತ್ಸಾಹವನ್ನು ಕಂಡು ಮರುಗಿದನು. ತನ್ನಂತಹ ಯಃಕಶ್ಚಿತನಿಗಾಗಿ ಇವರೇಕೆ ಇಷ್ಟು ಸಂಭ್ರಮಪಡುವರೆಂದುಕೊಂಡನು. ಆ ಮರ್ಯಾದೆಗೆ ಭಿಕ್ಷಾನ್ನದ ಹುಡುಗನು ಯೋಗ್ಯನಲ್ಲವಲ್ಲಾ! ಎಂದುಕೊಂಡನು. ಆ ಪಟ್ಟವನ್ನು ಆಳುವ ಅಧಿಕಾರವು ತನಗೆಲ್ಲಿದೆ? ಎಂದು ಶಂಕಿಸಿದನು. ತಾನು ಮಾಡುತ್ತಿರುವುದು ಮೋಸವೆಂದು ತನ್ನನ್ನು ತಾನೇ ನಿಂದಿಸಿಕೊಂಡನು. ಆದರೇನು? 'ಬಾಯಿಂದ ಹೊರಗೆ ಬರುವುದು ಮಾತಲ್ಲ, ಆಣಿಮುತ್ತು ಆರಿಸಿಕೊಳ್ಳಬೇಕು' ಎನ್ನುವಂತಹ ಭಾವದಿಂದ, ಕುತೂಹಲದಿಂದ, ನೂರಾರು ಜನರು ಕೇಳಲು ಸಿದ್ಧರಾಗಿ ಎದುರಿಗೆ ಕುಳಿ

ತಿರುವ ಸಮಯದಲ್ಲಿ ಎಷ್ಟು ಹೊತ್ತು ಯೋಚನೆಮಾಡುತ್ತ ಮರದ ಗೊಂಬೆಯಂತೆ ನಿಂತಿರಲು ಸಾಧ್ಯ? ಮಯೂರನು ಮಾತನಾಡಿದನು.

'ಸೋದರರೇ! ತಾವೆಲ್ಲರೂ ಉದಾರ ಹೃದಯದಲ್ಲಿ ಬೆಳಗುವ ಅಕೃತ್ರಿಮ ಮೈತ್ರಿಯ ದಾನವನ್ನಿತ್ತು ಹುಡಿಗೂಡುವ ಹೂವನ್ನು ಮುಡಿಗೇರಿಸಿಕೊಂಡಿರುವಿರಿ. ಅದಕ್ಕೆ ತಕ್ಕ ಯೋಗ್ಯತೆಯು ನನ್ನಲ್ಲಿದೆಯೆಂದು ನಾನೆಂದುಕೊಂಡಿಲ್ಲ. ಆದರೆ ನಾನದನ್ನು ಸಂಪಾದಿಸಲು ಯತ್ನಮಾಡುವೆನು. ಇಂದಿನ ಆದರವನ್ನೇ ಮುಂದೆಯೂ ತೋರಿಸಿ. ನಾನು ಇನ್ನೂ ಅರಿಯದ ಹಸುಳೆ! ನನ್ನನ್ನು ದೊಡ್ಡವರಿಗೆ ತಕ್ಕೆಡೆಯಲ್ಲಿ ಇಟ್ಟಿರುವಿರಿ. ಇಂದು ಮಾಡಿರುವ ಈ ಕಾರ್ಯಕ್ಕಾಗಿ ಮುಂದೆ ತಾವು ನೊಂದುಕೊಳ್ಳದಂತೆ ನನ್ನಲ್ಲಿ ಈ ಪದವಿಗೆ ಬೇಕಾದ ಯೋಗ್ಯತೆಯನ್ನು ಕಲ್ಪಿಸಿ. ನನ್ನನ್ನು ಮನುಷ್ಯನನ್ನಾಗಿ ಮಾಡಿ ನಿಲ್ಲಿಸಿದ ಕೀರ್ತಿಯು ತಮ್ಮದಾಗಲಿ. ಇಂದು ನಾನು ತಮ್ಮನ್ನು ವರಗಳನ್ನು ಕೇಳಿಕೊಳ್ಳಬೇಕೆಂದು ತಮ್ಮೊಡೆಯರು ಅಪ್ಪಣೆ ಮಾಡಿರುವರು. ನಾನು ನನಗಾಗಿ ಕೇಳಿಕೊಳ್ಳಬೇಕಾದ ವರಗಳು ಎಂದರೆ ಒಂದೇ ಒಂದು! ನಾನು ನನಗೆ ಬುದ್ಧಿ ತಿಳಿದಂದಿನಿಂದಲೂ ಈಶಭಟ್ಟರಲ್ಲಿಯೇ ಇರುವೆನು. ಕಂಚಿಗೆ ಬಂದಾಗಿನಿಂದಲೂ ಹಿರಿಯ ಜಟ್ಟಿಗಳು ನನ್ನಲ್ಲಿ ವಿಶೇಷಾಭಿಮಾನವನ್ನಿಟ್ಟಿರುವರು. ನಿನ್ನೆಯ ದಿನದ ಅತ್ಯಾಚಾರದಿಂದ ಅವರಿಬ್ಬರಿಗೂ ಏನಾದರೂ ಕೇಡಾಗಿರಬಹುದೆಂದು ನನಗೆ ಬಹಳ ಭೀತಿಯಾಗಿದೆ. ಆ ಭೀತಿಯನ್ನು ನಿವಾರಣೆಮಾಡಿ ನಮ್ಮ ಭಟ್ಟರನ್ನು ಕರೆದು ತಂದುಬಿಡಿ. ಅಷ್ಟಾದರೆ ಸಾಕು' ಎಂದನು.

ಎಲ್ಲರಿಗೂ ಪರಮಾಶ್ಚರ್ಯವಾಯಿತು. ಪ್ರಭುವಿಗೆ ಕೊಡುವ ಕಾಣಿಕೆಯು ಅಷ್ಟು ಸುಲಭವಾಗುವುದೆಂದು ಯಾರೂ ತಿಳಿದಿರಲಿಲ್ಲ. ಪ್ರಭುಗಳಿಗೆ ಹಿಡಿಯುವ ದುರಾಶಾಪಿಶಾಚವು ಇವನಿಗೆ ಹಿಡಿದಿಲ್ಲವೆಂಬುದನ್ನು ಕಂಡು ಅವರು ಆನಂದಮುಗ್ನರಾಗಿ ಹೋದರು. ಎಲ್ಲರೂ ಒಡೆಯನಿಗೆ ಮಾತು ಕೊಟ್ಟರು. ಎಲ್ಲರಿಗೂ ವೀಳ್ಯವನ್ನು ಕೊಟ್ಟದಾಯಿತು. ಬೀಳ್ಕೊಂಡರು.

* * * *

ಅಂದಿನ ರಾತ್ರಿ ಸುಮಾರು ಒಂದೂವರೆ ಪ್ರಹರವಿರಬಹುದು. ಬೈರಾಗಿಯ ಗುಹೆಯಲ್ಲಿ ಮೂವರು ಕುಳಿತು ಮಾತನಾಡುತ್ತಿದ್ದಾರೆ. ಇಬ್ಬರು ಮಾತನಾಡುತ್ತಿದ್ದಾರೆ: ಒಬ್ಬನು ಕುಳಿತು ಕೇಳುತ್ತಿದ್ದಾನೆ.

ಇಬ್ಬರೂ ಏನೇನೋ ಹೇಳಿದರು: ಹಾಗೆ ಮಾಡಬೇಕು. ಹೀಗೆ ಮಾಡಬೇಕು. ಎಲ್ಲಕ್ಕೂ ಪಲ್ಲವಿ ಮಾತ್ರ ಒಂದೇ: 'ಮಯೂರನ ಆಶೆಯು ಸಫಲವಾಗಬೇಕು. ಪಲ್ಲವರಿಗೆ ಒಮ್ಮೆಯಾದರೂ ಮಣ್ಣು ಮುಕ್ಕಿಸಬೇಕು.' ಅದು ಆ ಇಬ್ಬರಿಗೂ ಸಮ್ಮತ. ಕಾರಣವನ್ನು ಮಾತ್ರ ಯಾರೂ ಹೇಳರು. ಇವರು ಹೀಗೆ ಮಾತನಾಡಿಕೊಳ್ಳುತ್ತಿರುವಾಗ ಗುಹೆಯಲ್ಲಿ ಯಾರೋ ನಡೆದಾಡುವ ಸದ್ದು ಕೇಳಿಸಿತು. ಆ ನಟ್ಟಿರುಳ ನಿಶ್ಶಬ್ದದಲ್ಲಿ ಹಜ್ಜೆಯ ಸದ್ದು ತಲೆಯಮೇಲೆ ಹೊಡೆದಂತೆ ಕೇಳಿಸಿತು. ಎಲ್ಲರೂ ಅವಾಕ್ಕಾಗಿ ಕೇಳಿದರು. ಒಂದು ಗಳಿಗೆ ಏನೂ ಸದ್ದಿಲ್ಲ. ಮತ್ತೊಮ್ಮೆ ಒಂದು ಸಿಳ್ಳು, ಇನ್ನೊಂದು ಗಳಿಗೆಯೊಳಗಾಗಿ ಒಂದು ಗುಂಪು ಜನಗಳು ಬರುತ್ತಿರುವ ಸದ್ದು. ಜೊತೆಗೆ ಕುದುರೆಗಳ ಕಾಲಿನ ಸದ್ದು ಬೇರೆ. ಬೈರಾಗಿಯು, 'ಕೊತ್ತವಾಲನಿರಬೇಕು. ಸೈನ್ಯವನ್ನು ತಂದು ಮುತ್ತಿರುವಂತಿದೆ' ಎಂದನು. ಉತ್ತರಕ್ಷಣದಲ್ಲಿಯೇ ಇನ್ನೂ ರೆಪ್ಪೆಹೊಯ್ಯುವುದರೊಳಗಾಗಿಯೇ ಕೊತ್ತವಾಲನೇ ಎದುರಿಗೆ ಬಂದು, 'ಹೌದು ಕೊತ್ತವಾಲನೇ! ಬೈರಾಗಿಗಳ ದರ್ಶನ ತೆಗೆದುಕೊಳ್ಳಲು ಬಂದಿದ್ದಾನೆ' ಎಂದನು.

ಮೂವರೂ ಬರಿಗೈಯಲ್ಲಿದ್ದಾರೆ; ಯಾರ ಕೈಯಲ್ಲಿಯೂ ಏನೂ ಇಲ್ಲ. ಕೊತ್ತವಾಲನು ಸುಸಜ್ಜಿತನಾಗಿದ್ದಾನೆ. ಹಾಗೆಯೇ ಒಬ್ಬರನ್ನೊಬ್ಬರು ನೋಡುತ್ತಿದ್ದಾರೆ. ಕೊತ್ತವಾಲನು ವಿಜಯದ ಅಟ್ಟಹಾಸವನ್ನು ಮಂದಸ್ಮಿತದಲ್ಲಿ ಬೀರುತ್ತಾ ವೈಯ್ಯಾರದಲ್ಲಿ ನಿಂತು, 'ಇಬ್ಬರನ್ನು ಬಲ್ಲೆ. ಮೂರನೆಯವರ ಗುರುತು ನೆನಪಿಲ್ಲ' ಎಂದನು.

ಬೈರಾಗಿಯು, 'ಯಾರಿಬ್ಬರ ನೆನೆಪುಂಟು?' ಎಂದನು. ಕೊತ್ತವಾಲನು ಹೇಳಿದನು: 'ತಾವು ವೈಜಯಂತಿಯ ಮಂತ್ರಿಗಳು, ಷಡಾನನ ಶರ್ಮರು. ಇವರು ಸೈನ್ಯಾಧಿಪತಿಗಳು ನರಸಿಂಹದತ್ತರು. ಆದರೆ ಇವರು ಯಾರೋ ನಾನರಿಯೆ!' ಎಂದನು.

ಮಯೂರನು ಕೇಳಿ ಬೆರಗಾದನು.

ಬೈರಾಗಿಯು, 'ಇವರನ್ನೇ ತಾವು ಹುಡುಕುತ್ತಾ ಬಂದಿರುವುದು. ಇವರೇ ತಮ್ಮ ಯುವರಾಜರೊಡನೆ ಹೋರಾಡಿದವರು' ಎಂದನು.

ಇವರಿನ್ನೂ ಹೀಗೆ ಮಾತನಾಡುತ್ತಿರುವಾಗಲೇ ದತ್ತನು ಮಿಂಚಿನ ವೇಗದಿಂದ ದೀಪವನ್ನಾರಿಸಿದನು. ಮಂತ್ರಿ ದಳವಾಯಿಗಳಿಬ್ಬರೂ ಕೊತ್ತ ವಾಲನ ಮೈಮೇಲೆ ಬಿದ್ದು ಅವನನ್ನು ಹಿಡಿದುಬಿಟ್ಟರು. ಅವನಿಗೆ ಕತ್ತಿ ಯನ್ನು ಒರೆಯಿಂದ ಎಳೆಯುವುದಕ್ಕೇ ಅವಕಾಶ ಸಿಕ್ಕಲಿಲ್ಲ. ಆರಿದ ದೀಪದ ಪ್ರಕಾಶವು ಅಳಿದು ಕವಿದ ಕತ್ತಲಿಗೆ ಕಣ್ಣು ಒಗ್ಗುವುದರೊಳಗಾಗಿ ಇಷ್ಟೂ ಮಿಂಚಿನ ವೇಗದಿಂದ ನಡೆದುಹೋಯಿತು.

ಇನ್ನು ಸ್ವಲ್ಪ ಹೊತ್ತಿನೊಳಗಾಗಿ ಕೊತ್ತವಾಲನು ಭೂಗರ್ಭದ ಗುಹೆಗ ಳೊಂದರಲ್ಲಿ ಬಂಧಿತನಾಗಿ ನಿಶ್ಚೇಷ್ಟಿತನಾಗಿ ಭೂಶಾಯಿಯಾಗಿ ಬಿದ್ದಿದ್ದನು.

ಕೊತ್ತವಾಲನ ಸನ್ನೆಯನ್ನು ಎದುರುನೋಡುತ್ತಾ ಹೊರಗೆ ನಿಂತಿದ್ದ ಸೈನ್ಯವು ಹೊರಗೇ ಉಳಿಯಿತು. ಅಷ್ಟು ಹೊತ್ತಾಯಿತು, ಇನ್ನಷ್ಟು ಹೊತ್ತಾಯಿತು, ಇನ್ನೂ ಅಷ್ಟು ಹೊತ್ತಾಯಿತು, ನಿಂತು ನಿಂತು ಅಭ್ಯಾಸ ವಾಗಿದ್ದ ಪದಾತಿಗಳಿಗೂ ಬೇಸರವಾಗುವಷ್ಟು ಹೊತ್ತು ನಿಂತಾಯಿತು. ಇನ್ನೂ ಕೊತ್ತವಾಲರ ಸುಳಿವಿಲ್ಲ.

ಬೆಳಗಿನ ಝಾವವಾಗುತ್ತ ಬಂದಿತು. ಆ ರಾತ್ರಿಯಲ್ಲಿ ಸುರಿವ ಮಂಜಿ ನಲ್ಲಿ ನೆನೆದು ಕುದುರೆಗಳೂ ಮನುಷ್ಯರೂ ಕಂಗೆಟ್ಟಿರುವ ಸಮಯದಲ್ಲಿ ಗುಹೆಯ ಮಗ್ಗುಲಿಂದ ಕವಣೆಕಲ್ಲಿನ ಮಳೆಗಾರಂಭವಾಯಿತು. ರಾಜಸೈನ್ಯ ವಿರುವುದು ಐದು ಕುದುರೆಗಳು ಹತ್ತು ಜನ ಪದಾತಿಗಳು. ನಾಲ್ಕುಕಡೆಯೂ ಕಲ್ಲು ಬೀಳುತ್ತ ಬೀಳುತ್ತ ಕುದುರೆಗಳು ರಾವುತರ ಅಂಕೆಯನ್ನು ಮೀರಿದುವು. ನಾಲ್ಕು ಕಡೆಯಿಂದಲೂ ಬೀಳುತ್ತಿರುವ ಕಲ್ಲುಗಳಲ್ಲಿ ಸೇನೆಯವರು ಎತ್ತಕಡೆ ಯೆಂದು ಯಾರೆಂದು ಎದುರಿಸಬೇಕು?

ಮೇಲಿಂದ ಮೇಲೆ ಬಿದ್ದ ಕಲ್ಲಿನೇಟುಗಳಿಂದ ಮೈಯೆಲ್ಲವೂ ತತಾ ತೂತಾಗಿ ಸೈನ್ಯವು ಕಂಗೆಟ್ಟಿರಲು ಹಠಾತ್ತಾಗಿ ಶತ್ರುಗಳು ಮಗ್ಗುಲಲ್ಲಿಯೇ

ಕಾಣಿಸಿಕೊಂಡರು. ನೀರಿನ ಆಕ್ರಮಣದಿಂದ ಇದ್ದಲ್ಲಿಯೇ ಕರಗಿಹೋಗುವ ಮಣ್ಣಿನ ಹೆಂಟೆಯಂತೆ ರಾಜಸೈನ್ಯವು ನಾಮಾವಶೇಷವಾಗಿ ಹೋಯಿತು. ರಾಜಧಾನಿಗೆ ಎರಡು ಯೋಜನ ದೂರದಲ್ಲಿ ರಾಜನ ಸೈನ್ಯವು ಸೋಲಿನ ಸುದ್ದಿಯನ್ನು ತಿಳಿಸುವುದಕ್ಕೂ ಒಬ್ಬರಿಲ್ಲದಂತೆ ನಿರ್ನಾಮವಾಗಿ ಹೋಯಿತು.

* * * * *

ಮರುದಿನ ಬೆಳಗಾಗ ಈಶಭಟ್ಟರು ಆಹ್ನಿಕಗಳನ್ನು ತೀರಿಸಿಕೊಂಡು ಈಚೆಗೆ ಬಂದಾಗ ಪಲ್ಲವ ರಾಜಭಟರಂತೆಯೇ ಉಡುಪನ್ನು ಧರಿಸಿದ್ದವನು ಒಬ್ಬನು ಬಂದು ಒಂದು ಪತ್ರವನ್ನೂ ಐವತ್ತು ಸ್ವರ್ಣಮುದ್ರಿಕೆಗಳನ್ನೂ ಕೊಟ್ಟು ಹೊರಟುಹೋದನು.

ಪತ್ರದಲ್ಲಿ ಏನೂ ಹೆಚ್ಚಿಗೆಯಿರಲಿಲ್ಲ : 'ಗುರುದರ್ಶನದಿಂದ ಕೃತಾರ್ಥರಾಗಿ' ಅಷ್ಟೆ !

ಪತ್ರವನ್ನು ನೋಡಿ ಭಟ್ಟರು ಹಿಗ್ಗಿಹೋದರು.

ಅಂದಿನ ಸಾಯಂಕಾಲ ಸಂಧ್ಯಾವಂದನೆಗೆಂದು ಕೆರೆಯ ಕಡೆ ಹೋದ ಭಟ್ಟರು ಹಿಂದಿರುಗಿ ಬರಲಿಲ್ಲ.

ಸಂಜೆಯಾದ ಅಷ್ಟು ಹೊತ್ತಿಗೆ ಜಟ್ಟಿಯ ಸುದ್ದಿಯೂ ಬಂದಿತು. ಅರಸನ ಅಪ್ಪಣೆಯಿಂದ ಸೆರೆಯಿಂದ ಬಿಡುಗಡೆಯಾಯಿತು. ಆತನು ಅರಮನೆಗೆ ಹೋಗಲಿಲ್ಲ, ತನ್ನ ಮನೆಯಲ್ಲೇ ಇದ್ದನು.

———o———

## ಎಂಟನೆಯ ಪ್ರಕರಣ

ಸೂರ್ಯೋದಯವಾಗಿ ಸುಮಾರು ಹತ್ತುಗಳಿಗೆಯಾಗಿರಬಹುದು. ಅರಸನನ್ನು ಕಾಣುವುದಕ್ಕೆ ಬಂದಿದ್ದವರೆಲ್ಲರೂ ಹೊರಟುಹೋದರು. ಅಧಿಕಾರಿಗಳೂ ಬೀಳ್ಕೊಂಡರು, ಮಂತ್ರಿಯು ಮಾತ್ರ ಇನ್ನೂ ಹೋಗಿರಲಿಲ್ಲ.

ಅರಸನು ಕುದುರೆಯ ತೊಟ್ಟಿಯಲ್ಲಿ ಭದ್ರಾಸನದ ಮೇಲೆ ಕುಳಿತಿದ್ದಾನೆ. ಮಂತ್ರಿಯು ಪಕ್ಕದಲ್ಲಿ ಬೆಳ್ಳಿಯ ಗದ್ದುಗೆಯ ಮೇಲೆ ಇದ್ದಾನೆ.

ಅರಸನು ವಿಷಣ್ಣನಾಗಿ ಮೌನದಿಂದ ಕುಳಿತಿದ್ದವನು ಎಲ್ಲಿಯೋ ನೋಡುತ್ತ ಹೇಳಿದನು: 'ಪಲ್ಲವರು ಸಾರ್ವಭೌಮರು. ಪೂರ್ವಾಪರ ಸಮುದ್ರಗಳವರೆಗಿನ ರಾಜ್ಯದೊಡೆಯರು. ಕಡಲಿಗಿಂತಲೂ ಮಿಗಿಲಾದ ಸೇನೆಯನ್ನುಳ್ಳವರು. ಸಿಂಹಾಸನಾಧಿಪತಿಗಳು ಬಿರುನೋಟದಿಂದ ನೋಡಿದರೆ ಸಾಕು, ಸಾಮಂತರು ನಡುಗುವರು. ಆದರೇನು? ರಾಜಪುತ್ರನನ್ನು ಹೊಡೆದುಹೋದ ಹಾದಿಹೋಕನನ್ನು ಹಿಡಿದು ದಂಡಿಸಲು ಸಮರ್ಥರಾಗಲಿಲ್ಲ. ಸಾಮ್ರಾಜ್ಯದ ಶ್ವೇತಚ್ಛತ್ರದ ನೆರಳಿನಲ್ಲಿದ್ದರೂ ಅಪಮಾನದ ಬೇಸಗೆಯ ಬಿರುಬಿಸಿಲು ಸುಡದೆ ಬಿಡಲಿಲ್ಲ' ಎಂದು ಒಂದು ನಿಟ್ಟುಸಿರುಗರೆದನು.

ಮಂತ್ರಿಯು ನೆಲದ ಕಡೆಗೆ ನೋಡುತ್ತಿದ್ದನು.

ಅರಸನು ಮತ್ತೆಯೂ ಮಾತನಾಡಿದನು: 'ಚಕ್ರವರ್ತಿಯ ಮಗನನ್ನು ಬೀದಿಯ ಭಿಕಾರಿಯನ್ನಾಗಿ ಮಾಡಿಯಾಯಿತು. ಇನ್ನುಳಿದಿರುವುದು ತುಂಬಿದ ಓಲಗದಲ್ಲಿ ಸಿಂಹಾಸನದಲ್ಲಿರುವ ಸಮ್ರಾಜನನ್ನು ಕೆಳಗೆಳೆದು ಮಸ್ತಕದ ಮಣಿಕಿರೀಟವು ಮುರಿಯುವಂತೆ ಒದೆಯುವುದು ಅಲ್ಲವೆ?'

ಮಂತ್ರಿಯು ಯತ್ನವಿಲ್ಲದೆ, 'ಅಚಾತುರ್ಯದಿಂದ ನಡೆದುಹೋದ ಒಂದು ಕಾರ್ಯಕ್ಕಾಗಿ ಮಹಾ ಪ್ರಭುಗಳವರು ಅಷ್ಟು ಚಿಂತಿಸಬೇಕಾಗಿಲ್ಲ. ನಮ್ಮ ಸೇನೆಯ ಕೋಟಿ ಕೊತ್ತಲಗಳಿಗೆಲ್ಲಾ ಗೂಢಚಾರರು ಹೋಗಿದ್ದಾರೆ. ತನ್ನ ತಾಯ ಬಸುರನ್ನು ಬಗೆದು ಅವಿತುಕೊಂಡಿದ್ದರೂ ಅಪರಾಧಿಯು ತಪ್ಪಿಸಿಕೊಳ್ಳುವಂತಿಲ್ಲ. ಕೊತ್ತವಾಲರು ತಾವೇ ಹೊರಟಿದ್ದಾರೆ. ಮಹಾಪಾದಕ್ಕೆ ಈ ವಿಚಾರದಲ್ಲಿ ಯೋಚನೆಯೇನೂ ಬೇಕಾಗಿಲ್ಲ' ಎಂದನು.

ಅರಸನು ನಿರಾಶೆಯ ನಗುವನ್ನು ಸಣ್ಣದಾಗಿ ನಕ್ಕು ಹೇಳಿದನು: 'ಅಹುದು. ಕೊತ್ತವಾಲರು ಹೋಗಿ ಇಂದಿಗೆ ಆರು ದಿನವಾಯಿತು. ಅವರ ಸುದ್ದಿಯೂ ಇಲ್ಲ. ಅವರೂ ಏನು ಉಳಿದಿದ್ದಾರೆಯೋ ಇಲ್ಲವೋ? ಅದನ್ನೂ ಹೇಳುವವರಿಲ್ಲ. ಅಷ್ಟೆ!'

ಆ ವೇಳೆಗೆ ಊಳಿಗದವನು ಬಂದು 'ಕೊತ್ತವಾಲರು ಬಂದಿದ್ದಾರೆ' ಎಂದು ಅರಿಕೆ ಮಾಡಿದನು. ಅರಸನು ಒಳಗೆ ಬರಲೆಂಬರ್ಥದ ಕಣ್ಣುಸನ್ನೆ ಮಾಡಿದನು. ಕೊತ್ತವಾಲರು ಬಂದರು. ಮುಖದಲ್ಲಿ ಕಳೆಯಿರಲಿಲ್ಲ.

ಹಿಂದಿನ ದರ್ಪವು ಮಾಯವಾಗಿ ಅದರ ಎಡೆಯಲ್ಲಿ ದೈನ್ಯವು ಮನೆಮಾಡಿ ಕೊಂಡಿದ್ದಿತು. ಇಂದಿನ ಕೊತ್ತವಾಲರು ಅಂದಿನ ಕೊತ್ತವಾಲರ ಪ್ರೇತ ವಿರಬಹುದು ಎನ್ನುವ ಹಾಗಿದ್ದಿತು.

ಅವನನ್ನು ಕಂಡು ರಾಜ ಮಂತ್ರಿಗಳು ವಿಹ್ವಲರಾದರು. ಅವನ ಮರ್ಯಾದೆಯನ್ನು ಕೈಗೊಳ್ಳುವುದನ್ನೂ ಅತ್ತಿಟ್ಟು ಕೇಳಿದರು: 'ಇದೇ ನಿದು? ಏಕೆ ಹೀಗಿರುವಿರಿ?'

ಕೊತ್ತವಾಲನು ತಗ್ಗಿಸಿದ್ದ ಮುಖವನ್ನು ಎತ್ತಲಿಲ್ಲ. ಮಂತ್ರಿಗೆ ಮುಂದಕ್ಕೆ ಮಾತನಾಡಲು ಧೈರ್ಯವಾಗಲಿಲ್ಲ. ಅರಸನಿಗೆ ಕೊತ್ತವಾಲನು ತನ್ನ ಕೆಲಸವನ್ನು ಮಾಡಿಲ್ಲವೆಂಬುದು ಅಂಗೈಯ್ಯ ನೆಲ್ಲಿಕಾಯಂತೆ ಪುಟವಾಗಿ ತಿಳಿದು ಹೋಯಿತು. ಇನ್ನಾರಾದರೂ ಚಿಕ್ಕ ಪುಟ್ಟ ಅಧಿಕಾರಿಗಳಾಗಿದ್ದರೆ, ಕಟ್ಟೆಯೊಡೆದ ಕೆರೆಯ ನೀರು ಎದುರಿದ್ದುದನ್ನೆಲ್ಲ ಹೊಡೆದುಕೊಂಡು ಹೋಗುವಂತೆ ಆಗುತ್ತಿದ್ದಿತು.

ಅರಸನು ಗಡುಸಾದ ದನಿಯಿಂದ ಕೇಳಿದನು: 'ಹೋದ ಕೆಲಸ ವಾಯಿತೋ?'

ಕೊತ್ತವಾಲನ ಬಾಯಲ್ಲಿ ಮಾತು ಹೊರಡಲಿಲ್ಲ.

ಅರಸನು ಮತ್ತೆ ಮಾತನಾಡಿದನು. ನುಡಿಯಲ್ಲಿ ಮೊದಲಿನ ಗಡು ಸಿರಲಿಲ್ಲ. 'ಹೋದ ಕೆಲಸವೇನಾಯಿತು? ಕೊತ್ತವಾಲರೇ!' ಕೊತ್ತ ವಾಲನೂ ನುಡಿದನು: 'ಅಪರಾಧಿಯು ಶತ್ರುವಾಗಿದ್ದಾನೆ. ಪ್ರಬಲರ ಜೊತೆ ಸೇರಿ ಅವನೂ ಪ್ರಬಲನಾಗಿದ್ದಾನೆ'

ಅರಸನ ಕಿವಿಯು ನೆಟ್ಟಗಾಯಿತು; 'ಹಾಗೆಂದರೆ?'

ಕೊತ್ತವಾಲನು ಹೇಳಿದನು: 'ನಾಗಶ್ರೀಯ ಕಾರಣವನ್ನು ಹಿಡಿದು ವೈಜಯಂತಿಯರಸನನ್ನು ಸೋಲಿಸಿ ಅಮರಾರ್ಣವದವರೆಗೂ ರಾಜ್ಯವನ್ನು ವಿಸ್ತರಿಸಿದುದನ್ನು ಮಹಾಸ್ವಾಮಿಯವರು ಮರೆತಿರಲಾರರು!'

'ಹೌದು, ಹೌದು'

'ಆಗ ಅಲ್ಲಿಯ ಅರಸ ಚಂದ್ರವರ್ಮನೊಡನೆ ಮಂತ್ರಿ ಷಡಾನನ ಶರ್ಮನೂ ಸೈನ್ಯಾಧಿಪತಿ ನರಸಿಂಹದತ್ತನೂ ಹೋಗಿಬಿಟ್ಟರೆಂದು ವದಂತಿ ಹುಟ್ಟಿತು'

'ಹೌದು, ಹೌದು'

'ಅವರಿಬ್ಬರೂ ಬದುಕಿದ್ದಾರೆ'

'ಹಾ!' ಅರಸನ ಮುಖವು ಬೆಳ್ಳಗಾಯಿತು. ಮಂತ್ರಿಯ ಮುಖವು ನಿಸ್ತೇಜವಾಯಿತು.

'ಹೌದು ಅವರು ಬದುಕಿದ್ದಾರೆ. ಇದುವರೆಗೂ ರಾಜಧಾನಿಯ ಬಳಿಯಲ್ಲಿಯೇ ಇದ್ದರು. ಅಪರಾಧಿಯು ಅವರ ಮಡಲಿಗೆ ಬಿದ್ದಿದ್ದಾನೆ'

'ಹಾಗಾದರೆ ಇನ್ನು ಅವನು ಸಿಕ್ಕುವ ಹಾಗಿಲ್ಲ?'

'ಅವನು ಸಿಕ್ಕದೇ ಹೋದರೆ ನಷ್ಟವಿಲ್ಲ. ಸಾಮ್ರಾಜ್ಯಕ್ಕೆ ಮೃತ್ಯುವಾಗದಿದ್ದರೆ ಅಷ್ಟೇ ಸಾಕು.'

ಅರಸನು ನಿಧಾನವಾಗಿ, ಅಲ್ಲಿಗಲ್ಲಿಗೆ ನಿಲ್ಲಿಸಿ ಹೇಳಿದನು: 'ಷಡಾನನ ಶರ್ಮ........ನರಸಿಂಹದತ್ತ........ಇಪ್ಪತ್ತು ವರ್ಷಗಳ ಮೇಲೆ? ಅವರು ನಿಮಗೆ ಹೇಗೆ ಸಿಕ್ಕಿದರು?'

'ಮಹಾ ಪ್ರಭುಗಳಿಗೆ ಅರಿಕೆಯಿರಬೇಕು: ಶೇಖರವರ್ಮರನ್ನು ರಾಯಭಾರಿಯಾಗಿ ವೈಜಯಂತಿಗೆ ಕಳುಹಿಸಿದಾಗ ಅವರಿಗೆ ಸಹಾಯಕನನ್ನಾಗಿ ನನ್ನನ್ನೂ ಕಳುಹಿಸಲಾಗಿದ್ದಿತು. ಆಗ ಅವರಿಬ್ಬರನ್ನೂ ಹಗಲೂ ರಾತ್ರಿ ನೋಡಿ ನೋಡಿ ಅವರಿಬ್ಬರ ರೂಪವೂ ಕಣ್ಣಿಗೆ ಕಟ್ಟಿದಂತಾಗಿ ಹೋಯಿತು. ಐವತ್ತು ವರ್ಷವಾದರೂ ಅದನ್ನು ಮರೆಯುವಂತಿಲ್ಲ'

'ಅವರಿಬ್ಬರೂ ಇವನಲ್ಲಿ ಪಕ್ಷಪಾತಿಗಳಾಗಿರಲು ಕಾರಣವೇನಿರಬಹುದು?'

'ನನಗೊಂದು ಸಂದೇಹವಿದೆ. ಈಶಭಟ್ಟರನ್ನೂ ರಂಗಾಜಟ್ಟಿಯವರನ್ನೂ ಕೇಳಿ ಅದನ್ನು ನಿವೃತ್ತಿಮಾಡಿಕೊಳ್ಳಬೇಕು'

ಮಂತ್ರಿಯು ನಡುವೆ ಬಾಯಿ ಹಾಕಿದನು: 'ತಮ್ಮ ಸಂದೇಹವು ದೃಢಪಟ್ಟಹಾಗೆಯೇ ಸರಿ. ಈಶಭಟ್ಟರು ಮೊನ್ನೆಯದಿನ ಸಂಧ್ಯಾವಂದನೆಗೆಂದು ಕೆರೆಯ ಕಡೆ ಹೋದವರು ಇದುವರೆಗೂ ಬಂದಿಲ್ಲ.'

'ರಂಗಾಜಟ್ಟಿಗೂ ತಿಳಿದಿರಬಹುದು.'

*　*　*　*　*

ರಾಜಾಜ್ಞೆಯಂತೆ ರಂಗಾಜಟ್ಟಿಯು ಬಂದು ಕಾಣಿಸಿಕೊಂಡನು. ಅವನಿಗೆ ಬಹಳವೇನೂ ತಿಳಿಯದು. ತಿಳಿದಿದ್ದ ಕೊಂಚವೂ ಈಚೀಚೆಗೆ ತಿಳಿದುದು. 'ಮಯೂರಶರ್ಮನು ಬ್ರಾಹ್ಮಣನಲ್ಲ. ಯಾವುದೋ ಒಂದು ಉಚ್ಚವಂಶದ ಕ್ಷತ್ರಿಯ ಕುಮಾರನವನು. ರಾಜ್ಯವನ್ನು ಕಳೆದುಕೊಂಡಿದ್ದನು. ಶತ್ರುಗಳು ಪ್ರಬಲರಾಗಿದ್ದ ಕಾರಣ ಬ್ರಾಹ್ಮಣ ವೇಷದಿಂದ ಅಜ್ಞಾತವಾಸ ಮಾಡಬೇಕಾಯಿತು. ತಾನದನ್ನು ತಿಳಿದ ಮೇಲೆಯೇ ಕುದುರೆಯ ಬಯಲಿಗೆ ಹೋಗಿ ಬರಲು ಅಲ್ಲಿನ ಅಧಿಕಾರಿಯಿಂದ ಗುಟ್ಟಾಗಿ ಅಪ್ಪಣೆಯನ್ನು ಕೊಡಿಸಿದ್ದುದು. ಇವನು ಇಂತಹ ವಂಶದವನೆಂಬುದನ್ನು ಈಶಭಟ್ಟರು ಚೆನ್ನಾಗಿಯೂ ಬಲ್ಲರು'

*　*　*　*　*

ಅರಸನೂ ಮಂತ್ರಿಯೂ ಇಬ್ಬರೂ ಪಿಸಪಿಸಗುಟ್ಟಿದರು. ಇಬ್ಬರಿಗೂ ಮುಖವು ಒಮ್ಮೆ ಕೆಂಪೇರಿ ನಿಸ್ತೇಜವಾಯಿತು; ಒಮ್ಮೆ ಇಬ್ಬರೂ ನಿಟ್ಟುಸಿರು ಬಿಟ್ಟರು. ರಂಗಾಜಟ್ಟಿಯು ವೀಳಯವನ್ನು ತೆಗೆದುಕೊಂಡು ಹೊರಟು ಹೋದ ಮೇಲೆ ಮತ್ತೆಯೂ ಅರಸನಿಗೂ ಕೊತ್ತವಾಲನಿಗೂ ಮಾತು ಕಥೆ ನಡೆಯಿತು.

'ನಿಮಗೆ ಅವರೆಲ್ಲಿ ಸಿಕ್ಕಿದರು?'

'ಈ ಹುಡುಗನನ್ನು ಹುಡುಕಲು ಕಳುಹಿಸಿದ ಗೂಢಚಾರರು ಬಂದು ಅವನು ಒಬ್ಬ ಬೈರಾಗಿಯ ಗುಹೆಯಲ್ಲಿರುವುದಾಗಿ ಹೇಳಿದರು. ಆ ಬೈರಾಗಿಯು ಅಲ್ಲಿಗೆ ಬಂದು ಸುಮಾರು ವರ್ಷವಾಗಿದ್ದಿತು. ಆತನನ್ನು ಒಂದೂವರೆ ತಿಂಗಳ ವರೆಗೂ ಬೇಹಿನವರಿಂದ ಬೇಕಾದ ಹಾಗೆ ಪರೀಕ್ಷಿಸಲಾಯಿತು. 'ಆತನು ನಿಸ್ಪೃಹ ಚಕ್ರವರ್ತಿಯು. ಸಂಪೂರ್ಣ ವೈರಾಗ್ಯವಂತನು. ಆತನು ನಗರ ಪ್ರವೇಶವನ್ನೂ ಕೂಡ ಮಾಡುವುದಿಲ್ಲ.' ಎಂದು ತಿಳಿಯಿತು. ಅದರ ಮೇಲೆ ಆತನನ್ನು ನಂಬಿದ್ದುದಾಯಿತು. ಆದರೆ ಹುಡುಗನು ಆತನ ಗುಹೆಗೆ ಹೋಗಿದ್ದಾ

ನೆಂಬುದರ ಮೇಲೆ ಮತ್ತೆ ಸಂಶಯವು ಹುಟ್ಟಿ ಐದು ಕುದುರೆಗಳನ್ನೂ ಹತ್ತು ಕಾಲಾಳನ್ನೂ ತೆಗೆದುಕೊಂಡು ಆ ಗುಹೆಗೆ ಹೋದೆನು. ಅಲ್ಲಿ ಮೂವರಿದ್ದರು; ಇಬ್ಬರು ಮಂತ್ರಿ ದಳವಾಯಿಗಳು, ಮತ್ತೊಬ್ಬನು ಈ ಹುಡುಗ'

'ಹಾಗಾದರೆ ಈ ಹುಡುಗನು ಯಾರಿರಬಹುದೆಂದು ನಿಮ್ಮ ಮತ?'

'ನಾವು ವೈಜಯಂತಿಯನ್ನು ಹಿಡಿದಾಗ ಚಂದ್ರವರ್ಮನ ರಾಣಿ ಪುಷ್ಪಾವತಿಯೂ ಆಕೆಯ ಒಂದು ವರ್ಷದ ಮಗುವೂ ಸಿಕ್ಕಲಿಲ್ಲ. ಅಲ್ಲಿದ್ದ ಆಳುಕಾಳುಗಳನ್ನು ಹೆದರಿಸಿ ಬೆದರಿಸಿ ನೋಡಲಾಗಿ ಪುಷ್ಪಾವತಿಯು ತವರು ಮನೆಗೆ ಹೋಗಿರುವುದಾಗಿ ತಿಳಿಯಿತು. ಅಲ್ಲಿಗೂ ಹೋಗಿ ವಿಚಾರಿಸಲು ಗಂಡನು ಸತ್ತ ವರ್ತಮಾನವನ್ನು ಕೇಳಿ ಆಕೆಯು ಪ್ರಾಯೋಪವೇಶ ಮಾಡಿದಳೆಂದೂ ಮಗುವೂ ಕೆಲವು ದಿನವಿದ್ದು ಮೃತವಾಯಿತೆಂದೂ ತಿಳಿಯಿತು. ಆ ವರ್ತಮಾನವು ಸುಳ್ಳಿರಬೇಕು. ಈ ಹುಡುಗನೇ ಆ ಕದಂಬ ಕುಮಾರನಿರಬೇಕು'

ಅರಸನ ಮುಖವು ಗಂಭೀರವಾಯಿತು: ಇರಲಿ. ಗಡಿನಾಡಿಗೆಲ್ಲ ಎಚ್ಚರ ಕೊಡಿ. ಎಲ್ಲರೂ ಸಿದ್ಧರಾಗಿರೋಣ 'ಇನ್ನು ದುಡುಕಿ ಫಲವಿಲ್ಲ' ಎಂದನು.

ಮಂತ್ರಿಯು, 'ಅಂದಿನ ದಿನ ಕುದುರೆಯ ಬಯಲಿನಲ್ಲಿದ್ದವರನ್ನು ಬನವಾಸಿ, ಮಧುರೆ, ಮಹಾಬಲಿಪುರ, ಶ್ರೀಶೈಲಗಳಿಗೆ ಕಳುಹಿಸಿ. ಅವರಿಗೆ ಬೇಕೆಂದಾಗ ನಾಡೊಡೆಯರು ಪಡೆಯೊಡನೊದಗಿ ಬೇಕಾದ ಸಹಾಯ ಮಾಡುವಂತೆ ಅರಮನೆಯ ಕರಣಿಕರಿಂದ ರಾಯಸವನ್ನು ಬರೆಸಿ ರಾಜ ಮುದ್ರೆಯೊಡನೆ ಕಳುಹಿಸಿ' ಎಂದನು.

ಕೊತ್ತವಾಲನು 'ಅಪ್ಪಣೆ' ಎಂದು ಕೈಮುಗಿದನು.

ಅರಸನು ಇಬ್ಬರನ್ನೂ ಬೀಳ್ಕೊಟ್ಟು ಸಚಿಂತನಾಗಿ ರಾಣೀವಾಸಕ್ಕೆ ನಡೆದನು.

——o——

## ಒಂಬತ್ತನೆಯ ಪ್ರಕರಣ

ಶ್ರೀಶೈಲದ ಒಂದು ಪಕ್ಕದಲ್ಲಿ ಒಂದು ಗುಹೆ. ಸಾಮಾನ್ಯವಾಗಿ ಅಲ್ಲಿ ಹುಲಿಗಳು ಹೆಚ್ಚು. ಒಬ್ಬಂಟಿಗರಾಗಿ ತಿರುಗುವುದು ಕಷ್ಟ. ಇಬ್ಬರು ಮೂವರಿದ್ದರೂ ತಟ್ಟನೆ ಯಾವುದಾದರೂ ಗುಹೆಯನ್ನು ಪ್ರವೇಶಿಸುವುದೆಂದರೆ ಅದೂ ಸಾಹಸವೇ ಎನ್ನಬೇಕು. ಹೀಗಿರಲು ಗುಹೆಯಲ್ಲಿ ಗುಟ್ಟಾಗಿರಲು ಆತಂಕವೇನು?

ಗುಹೆಯು ಒಂದೇ ಒಂದು ಭಾರಿಯ ಕಲ್ಲಿನದು. ಕೆಳಗೊಂದು ದೊಡ್ಡ ಪೊಟ್ಟರೆ. ಅದರ ಮೇಲೆ ದೊಡ್ಡ ಕಲ್ಲು. ಅದರೊಳಗೆ ಹೋದರೆ ಅಲ್ಲಿ ಒಂದು ಹುಲಿಯು ಕಣ್ಣು ಮುಚ್ಚಿಕೊಂಡು ಮಲಗಿರುವಂತೆ ಒಂದು ಚಿತ್ರ. ದೂರದಿಂದ ನೋಡಿದರೆ ತಟ್ಟನೆ ಬದುಕಿರುವ ಹುಲಿಯಂತೆಯೇ ಕಾಣುವುದು. ಅಷ್ಟು ಸೊಗಸಾಗಿದ್ದಿತು ಚಿತ್ರ.

ಹುಲಿಯ ಬಲಗಡೆಗೆ ಕುಳಿತುಕೊಂಡು ಹೋಗಬೇಕಾದಷ್ಟು ತಗ್ಗಿನ ಒಂದು ಹಾದಿ. ಅದರಲ್ಲಿ ಹತ್ತು ಮಾರು ಮುಂದೆ ಹೋದರೆ, ಮತ್ತೊಂದು ವಿಶಾಲವಾದ ಗುಹೆ. ಅಲ್ಲಿ ಯಾರೋ ಒಬ್ಬರು ಹುಲಿಯ ಚರ್ಮವನ್ನು ಹಾಸಿಕೊಂಡು ಕುಳಿತಿದ್ದಾರೆ. ಇನ್ನಿಬ್ಬರು ವಿನೀತರಾಗಿ ಅವರ ಮುಂದೆ ಕುಳಿತಿದ್ದಾರೆ. ವ್ಯಾಘ್ರಾಸನದವರು ಮಾತನಾಡುತ್ತಿದ್ದಾರೆ. ಇತರರು ಕೇಳುತ್ತಿದ್ದಾರೆ.

'ಹಾಗಾದರೆ ಸರಿಯೆಂದು ಇಲ್ಲಿಗೇ ಬಂದುಬಿಟ್ಟಿರಿ?'

'ಹೌದು. ಮೂಡಲಿಗೆ ಹೋದರೆ ಮಹಾಬಲಿಗಳು, ಅವರು ಪಲ್ಲವರಿಗೆ ಕಾಣಿಕೆ ಕೊಡುವವರು. ತೆಂಕಣಕ್ಕೆ ಹೋಗೋಣವೆಂದರೆ ಅಲ್ಲಿನ ರಾಜರೆಲ್ಲರೂ ದುರ್ಬಲರು. ಪಡವಲಿಗೆ ಕಡಲು. ಇನ್ನೆಲ್ಲಿಗೆ ಹೋಗಬೇಕು? ಇಲ್ಲಿಗೆ ಬಂದರೆ ತಮ್ಮನ್ನು ನೋಡಿದುದೂ ಆಯಿತು ಪಲ್ಲವರ ಗಡಿಯನ್ನು ದಾಟಿದುದೂ ಆಯಿತು ಎಂದು ಇಲ್ಲಿಗೆ ಬಂದೆವು'

'ಬಂದುದೇನೋ ಸರಿಯೆ! ಆದರೆ, ನಾನು ಆ ಹುಡುಗನನ್ನು ಪರೀಕ್ಷಿಸುವವರೆಗೆ ಏನೂ ಹೇಳಲಾರೆ'

'ಈಶಭಟ್ಟರು ತಮ್ಮ ಅಪ್ಪಣೆಗೆ ಎಳ್ಳಷ್ಟೂ ವಿರೋಧವಿಲ್ಲದ ಹಾಗೆ ಬೆಳಿಯಿಸಿದ್ದಾರೆ. ನಾವೂ ನೋಡಿದ್ದೇವೆ. ನಮ್ಮ ದೃಷ್ಟಿಯಿಂದ ಎಲ್ಲವೂ ನೇರವಾಗಿದೆ. ತಾವೂ ನೋಡಿಬಿಟ್ಟರೆ...........'

'ಈಶಭಟ್ಟರೂ ಹೇಳಿದರು. ಆದರೂ ನಾನೂ ಒಮ್ಮೆ ನೋಡಿ ಬಿಡುತ್ತೇನೆ'

'ಹಾಗಾದರೆ ಬರಮಾಡೋಣವೇ?'

'ಬೇಡಿ. ನಾನು ಆಕಸ್ಮಿಕವಾಗಿ ಕಂಡಂತೆ ಕಾಣುವುದು ಒಳ್ಳೆಯದು'

'ಅಪ್ಪಣೆ' ಎಂದಿಬ್ಬರೂ ಹೊರಟುಹೋದರು.

ಮರುದಿನ ಬೆಳಗಿನಲ್ಲಿ ಮಯೂರನು ಬೆಟ್ಟದ ಕಿಬ್ಬರಿಯಲ್ಲಿ ಒಂದು ದೊಣೆಯಲ್ಲಿ ಸ್ನಾನಮಾಡಿ ಸಂಧ್ಯಾವಂದನೆ ಮಾಡುತ್ತಾ ಕುಳಿತಿದ್ದಾನೆ. ಸೂರ್ಯಬಿಂಬವು ಪೂರ್ಣವಾಗಿ ಉದಯವಾಗಿಲ್ಲ. ಹುಟ್ಟುತ್ತಿರುವ ನೇಸರಿನ ಹೊಂಬಣ್ಣದ ಕಿರಣಗಳು ಇರುಳಿನ ಉಳಿದ ಕತ್ತಲನ್ನು ತೊಳೆಯಲು ಸಂಭ್ರಮವಾಗಿ ಓಡಾಡುತ್ತಿವೆ. ಹಕ್ಕಿಗಳ ಕಲಕಲರವವು ನಾನಾ ವಾದ್ಯಗಳು ಸೇರಿ ನುಡಿದಂತೆ ಮನೋಹರವಾಗಿದೆ.

ಮಯೂರನ ಆಹ್ನಿಕವು ಮುಗಿಯಿತು. ಆಸನವನ್ನು ಬಿಟ್ಟೆದ್ದು ಅತ್ತ ತಿರುಗಿದರೆ ಅಲ್ಲೊಬ್ಬ ಯತಿಯು ನಿಂತಿದ್ದಾನೆ. ಶಾಂತಿಗೆ ನಿಲಯವೆನ್ನುವ ಹಾಗಿರುವ ಅರೆನಗೆಯು ಬೆಳಗುತ್ತಿರುವ ದುಂಡು ಮೊಗ. ಬೆಳೆದಿರುವ ಗಡ್ಡ ಮೀಸೆಗಳು ತುಂಬಿಕೊಂಡಿರಲು ಕವಿದಿರುವ ಮೋಡವನ್ನು ಬಗೆದು ತೇಜಸ್ವಿಯಾದ ಪುರುಷನು ಆ ತೂತಿನಿಂದ ಇಣಿಕಿ ನೋಡುತ್ತಿದ್ದಂತಿದೆ. ಬೆಟ್ಟಗಾಡು. ಬೆಳಗಿನ ಹೊತ್ತು. ಆಹ್ನಿಕವನ್ನು ಆಗತಾನೇ ಮುಗಿಸಿಕೊಂಡು ಎದ್ದಿರುವ ಹುಡುಗನ ಮುಂದೆ ತಪಸ್ಸಿನ ಮೂರ್ತಿಯಂತೆ ಕಂಗೊಳಿಸುತ್ತಿರುವ ಅಡಿಯಿಂದ ಮುಡಿಯವರೆಗೆ ಬೂದಿಯನ್ನು ಬೊಳಿದುಕೊಂಡಿರುವ ಭವ್ಯಮೂರ್ತಿ. ಹುಡುಗನೂ ಪರವಶನಾಗಿ ಆ ಯತೀಶ್ವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು.

ಯತಿಯು ಸರಸವಾದ ಸ್ನಿಗ್ಧವಾದ ನೋಟದಿಂದ ಗೆಲ್ಲುವ ನಗೆಯನ್ನು ಚೆಲ್ಲುತ್ತಾ ಕೇಳಿದನು: 'ನೀನು ಯಾರು?'

'ನನ್ನ ಹೆಸರು ಮಯೂರ ಶ........ಮಯೂರ!'

'ಶರ್ಮನೋ? ವರ್ಮನೋ?'

'ನನಗೇ ಅದು ಸಂದೇಹ'

'ಅದೇನು?'

'ಸ್ವಾಮಿ! ಎಂಟು ಹತ್ತು ದಿನಗಳಿಂದ ನಾನು ವಿಚಿತ್ರವಾಗಿಹೋಗಿದ್ದೇನೆ. ಇದುವರೆಗೂ ಇಲ್ಲದಿದ್ದ ಒಂದು ದಳ್ಳುರಿಯು ಎದೆಯನ್ನು ಸುಡುತ್ತಿದೆ. ಯಾರಮೇಲೂ ಹಗೆ ಮಾಡದವನಿಗೆ, ಬೇರುಬಿಟ್ಟು ನೆಲಸಿರುವ ರಾಜ್ಯವನ್ನು ಆಳುವ ಅರಸರ ಮೇಲೆ ಸೇಡು ತೀರಿಸುವ ದುರ್ಭಾವನೆಯು ತುಂಬಿಹೋಗಿದೆ. ಬೇಡವೆಂದು ನೂಕಿದರೂ ಬಿಡದೆ ಬ್ರಹ್ಮಪಿಶಾಚಿಯಂತೆ ನನ್ನನ್ನು ಈ ಕ್ರೋಧವು ಹಿಡಿದಿರಲು ನಾನು ಬ್ರಾಹ್ಮಣನೆಂದು ಹೇಗೆ ತಾನೇ ಹೇಳಿಕೊಳ್ಳಲಿ? ತೋಳುಗಳ ತೀಟೆಯು ಬುದ್ಧಿಗೆಡಿಸುತ್ತಾ ಕಾಳಗಕ್ಕೆ ಕಾಲು ಕೆರೆಯುತ್ತಾ ಚೇತನವು ವಿಜೃಂಭಿಸುತ್ತಿರಲು ಶಾಂತಿ ಪ್ರಧಾನರಾದ ಭೂಸುರರ ಕಾಲಕ್ಕೆ ಸೇರಿದವನೆಂದು ಹೇಗೆ ಹೇಳಲಿ?'

'ಹಾಗಾದರೆ, ನಿನ್ನ ತಂದೆ ತಾಯಿಗಳಾರು ಅರಿಯೆಯಾ?'

'ಈಶಭಟ್ಟರೆಂಬ ತುಂಗಾತೀರದ ಅಗ್ರಹಾರದ ನಿವಾಸಿಗಳೊಬ್ಬರು ನನ್ನ ಸಾಕುತಂದೆ. ಅದಿಷ್ಟು ಬಿಟ್ಟು ನಾನಿನ್ನೇನೂ ಕಾಣೆ'

'ಹಾಗಾದರೆ ನೀನು ನಿಸ್ಸಂದೇಹವಾಗಿ ಕ್ಷತ್ರಿಯ!'

'ಅದು ಹೇಗೆ?'

'ನೀನೇ ಹೇಳಿದೆಯಲ್ಲವೆ? ಇಂತಹ ಭಾವನೆಗಳು ಕಾಲವಶವಾಗಿ ಬ್ರಾಹ್ಮಣನ ಹೃದಯದಲ್ಲಿ ಹುಟ್ಟಿದರೂ ಹುಟ್ಟಬಹುದು. ಆದರೆ ಅವು ಅಲ್ಲಿ ನೆಲಸಲಾರವು. ಇಂತಹ ಭಾವನೆಗಳು ಬಲಿಯುತ್ತಿರುವ ಹೃದಯವು ಕ್ಷತ್ರಿಯನದೇ ಎಂದು ಧಾರಾಳವಾಗಿ ಹೇಳಬಹುದು'

'ಮನುಷ್ಯನು ಇಂತಹ ಜಾತಿಗೆ ಸೇರಿದವನೆಂದು ತಿಳಿದುಕೊಳ್ಳಲು ಜನ್ಮವನ್ನು ಬಿಟ್ಟು ಮತ್ತಾವುದಾದರೂ ಸಾಧನವುಂಟೇನು?'

'ಇಲ್ಲದೆ ಏನು? ಮಾನವ ದೇಹವು ಸ್ಥೂಲ ಸೂಕ್ಷ್ಮ ಕಾರಣಗಳಿಂದು ಮೂರು ಭಾಗವಾಗಿರುವುದು. ರಕ್ತ, ಮಾಂಸ, ಅಸ್ಥಿ ಮೊದಲಾದವು ಗಳೆಲ್ಲವೂ ಸೇರಿ ಸ್ಥೂಲ ಶರೀರವಾಗುವುದು. ಸ್ಥೂಲ ಶರೀರದ ಕ್ರಿಯಾ ಕಲಾಪವನ್ನು ಸರಿಯಾಗಿ ನಡೆಯಿಸುವ ಶಕ್ತಿಗಳೂ ಅವುಗಳ ದುರ್ಗಗಳೂ ಸೂಕ್ಷ್ಮಶರೀರದಲ್ಲಿರುವುವು. ಪ್ರಾಣಾದಿವಾಯುಗಳೂ ಇಂದ್ರಿಯಾಧಿಷ್ಠಾನ ಗಳೂ ಅಹಂಕಾರಾದಿಗಳೂ ಇರುವುದು ಇಲ್ಲಿಯೇ! ಮೂರನೆಯದಾದ ಕಾರಣವಲ್ಲಿ ದೇವತಾಧಿದೇವತೆಗಳೂ ತನ್ಮಾತ್ರೆಗಳೂ ಇರುವುವು. ಶಾಸ್ತ್ರದಲ್ಲಿ ಹೇಳಿರುವ ಈ ಮೂರು ದೇಹಗಳನ್ನೂ ಪರೀಕ್ಷಿಸುವ ಮಾರ್ಗಗಳನ್ನು ಜ್ಞಾನಿಗಳು ಬಲ್ಲರು. ಅತೀಂದ್ರಿಯ ಜ್ಞಾನವುಳ್ಳ ಸಂಯಮಿಯು ಮುಖದ ಮೇಲಿನ ವರ್ಚಸ್ಸಿನಿಂದ ಕಾರಣ ಶರೀರದ ಸ್ಥಿತಿಯನ್ನರಿತು ಜಾತಿಯನ್ನು ಹೇಳುವನು. ಯೋಗಿಯು ಮನಸ್ಸಿನಿಂದ ಹೊರಡುವ ವೃತ್ತಿಗಳನ್ನು ಪರೀಕ್ಷಿಸಿ ಸೂಕ್ಷ್ಮ ಶರೀರದ ಕ್ರಿಯೆಯನ್ನರಿತು ಜಾತಿಯನ್ನು ಹೇಳುವನು. ಎರಡೂ ಶಕ್ತಿಯಿಲ್ಲದ ಲೋಗರಿಗೂ ತಿಳಿಯಲು ಸಾಧ್ಯವಾಗಬೇಕೆಂದು ರಕ್ತ ಪರೀಕ್ಷಾವಿಧಾನವನ್ನು ಹೇಳಿರುವುದು. ಅದು ಕೇವಲ ಸ್ಥೂಲವು. ಇದನ್ನೆಲ್ಲಾ ತಿಳಿದು ನೀನು ಮಾಡುವುದೇನು?'

'ನನಗೆ ಈಗ ಬರುತ್ತಿರುವ ಯೋಚನೆಗಳು ನನ್ನ ಜಾತಿಗೆ ಅನು ಗುಣವಾಗಿದ್ದರೆ ಅವುಗಳನ್ನು ಬೆಳೆಯಿಸುವೆನು. ಇಲ್ಲವಾದರೆ ಅವು ಮುಂಬರಿಯದಂತೆ ಇಲ್ಲಿಯೇ ಮುರಿದುಬಿಡುವೆನು'

'ಹಾಗಾದರೆ ನಾನು ಹೇಳುವೆನು; ನೀನು ಕ್ಷತ್ರಿಯನು. ಇನ್ನುಮುಂದೆ ನೀನೇನು ಮಾಡುವೆ ಅದನ್ನು ಹೇಳು'

'ನಾನು ಕ್ಷತ್ರಿಯನೆಂಬುದು ಖಂಡಿತವಾದರೆ ರಾಜ್ಯವನ್ನು ಕಟ್ಟುವ ಯತ್ನಮಾಡುವೆನು'

'ಹಾಗೆಂದರೇನು? ಬೇಕಾದ ಹಾಗೆ ರಕ್ತದಕೋಡಿಯನ್ನು ಹರಿಯಿಸುವೆನು ಎಂದ ಹಾಗಾಯಿತು ಅಲ್ಲವೆ?'

'ಹೌದು. ಯುದ್ಧವಿಲ್ಲದೆ ರಾಜ್ಯವನ್ನು ಕಟ್ಟುವ ಬಗೆ ಹೇಗೆ?'

'ನನಗೇನಾದರೂ ರಾಜ್ಯವನ್ನು ಕಟ್ಟಬೇಕೆಂಬ ಆಶೆ ಬಂದರೆ ನಾನು ಸೈನಿಕರನ್ನು ವಧಿಸುವ ಕ್ಷುದ್ರ ಕರ್ಮದಲ್ಲಿ ಪ್ರವೃತ್ತನಾಗಲಾರೆನು'

'ಮತ್ತೇನು ಮಾಡುವಿರಿ?'

'ಸಾಧ್ಯವಾದರೆ ಸಾಮ ದಾನ ಭೇದಗಳಿಂದಲೇ ರಾಜನನ್ನು ವಶಪಡಿಸಿಕೊಂಡು ರಾಜ್ಯವನ್ನು ಕಕ್ಕಿಸುವೆನು'

'ಇಷ್ಟು ಗಂಡುಮಾತಾಡುವ ನೀವು ಅಂತಹ ಸೌಮ್ಯ ಕರ್ಮವನ್ನು ಮಾಡುವಿರಾ?'

'ನಾನು ಬ್ರಾಹ್ಮಣನು. ಉಪಶಮವು ನನಗೆ ಸ್ಥಾಯಿಭಾವವು. ಆದರೂ ಒಂದೊಂದು ವೇಳೆ ವ್ಯಭಿಚರಿತವಾಗಿ ಉತ್ಸಾಹವು ತೋರುವುದು. ಅದೆಂದೂ ರೌದ್ರವಾಗಿ ಪರಿಣಮಿಸದಂತೆ, ಉಪಶಮವು ಶಾಶ್ವತವಾಗಿರುವಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯವು. ಕ್ಷತ್ರಿಯನಿಗಾದರೊ ಉತ್ಸಾಹವೇ ಸ್ಥಾಯಿಭಾವವು. ಬಹುಬೇಗ ವ್ಯಭಿಚರಿತವಾಗಿ ರೌದ್ರಪರ್ಯವಸಾಯಿಯಾಗುವುದು. ಹಾಗಾಗದಂತೆ ನೋಡಿಕೊಳ್ಳುವುದು ಅವನ ಕರ್ತವ್ಯವು'

ಮಯೂರನು ಮರುಮಾತನಾಡಲಾರದೆ ಒಂದು ಪೆಚ್ಚುನಗೆ ನಕ್ಕುಬಿಟ್ಟನು. ಉತ್ತರ ಕ್ಷಣದಲ್ಲಿಯೇ ಮತ್ತೆ ಮುಖವು ಗಂಭೀರವಾಯಿತು. ಯತಿಯೂ ನಗುತ್ತ ಹೇಳಿದನು: 'ಏನೋ ಕೇಳಬೇಕೆಂದಿರುವೆ. ಕೇಳು'

'ನಾನು ಒಂದು ವಿಚಾರವನ್ನು ಕೇಳಬೇಕೆಂದಿದ್ದೇನೆ'

'ಅಗತ್ಯವಾಗಿ ಆಗಬಹುದು'

'ತಮ್ಮ ಮುಖವನ್ನು ಕಂಡು ಕೇಳಬೇಕೆಂದೆನ್ನಿಸಿತು. ರಾಜ್ಯವನ್ನು ಕಟ್ಟುವುದಕ್ಕೆ ನನ್ನಿಂದ ಆದೀತೆ'?

'ನಾನು ಜೋಯಿಸನೇನೋ ಅಲ್ಲ. ಆದರೂ ನೀನು ಕೇಳಿದೆಯಾಗಿ ಹೇಳುತ್ತೇನೆ. ಪ್ರಪಂಚದಲ್ಲಿ ಯಾವ ಕೆಲಸವೂ ದೊಡ್ಡದಲ್ಲ. ಕುಲ, ವಿದ್ಯೆ, ಪದವಿ, ಮೊದಲಾದವುಗಳು ಲಭಿಸಬೇಕಾದರೆ ಪುಣ್ಯವಿರಬೇಕು. ಹಾಗೆಯೇ ರಾಜ್ಯವನ್ನು ಕಟ್ಟಲು ಬೇಕಾಗುವಷ್ಟು ಪುಣ್ಯವಿದ್ದರೆ ಅದೂ ಸಿದ್ಧಿಸುವುದು'

'ಪುಣ್ಯವೆಂದರೇನು ?'

'ಪುರುಷನ ಸತ್ಕರ್ಮಕ್ಕೆ ಅನುಗುಣವಾಗಿ ದೈವವು ಕೊಡುವ ಫಲಾನುಭವ ಸಾಮರ್ಥ್ಯವು ಪುಣ್ಯವು'

'ನಾನಷ್ಟು ಪುಣ್ಯಮಾಡಿದ್ದೇನೆಯೋ ಇಲ್ಲವೋ ತಿಳಿಯುವುದು ಹೇಗೆ?'

'ಬೀಜವೊಂದಾಗಿ ಗಿಡವೊಂದಾಗುವುದಿಲ್ಲ. ಹಾಗೆಯೇ ಪೂರ್ವವಾಸನೆಗೆ ಅನುಸಾರವಾಗಿಯೇ ಬುದ್ಧಿಯೂ ಹೊರಡುವುದು'

'ಹಾಗಾದರೆ ನಾನು ರಾಜ್ಯವನ್ನು ಕಟ್ಟುವುದಕ್ಕೆ ತಾವೂ ನೆರವಾಗುವಿರಾ?'

'ಯಾವ ಕೆಲಸವನ್ನು ಮಾಡಬೇಕಾದರೂ ಉದ್ದೇಶ, ಧನಸಂಪತ್ತಿ, ಆತ್ಮಯೋಗ್ಯತೆಗಳನ್ನು ವಿಚಾರಿಸಿ, ಆರಂಭಿಸುವುದು ಬುದ್ಧಿವಂತನ ಲಕ್ಷಣ. ನೀನೂ ಇವುಗಳನ್ನು ಕುರಿತು ಯೋಚಿಸಿರುವೆಯಷ್ಟೆ ?'

'ತಾವೇ ಹೇಳಿದಿರಲ್ಲ ಪುಣ್ಯವಿರಬೇಕು ಎಂದು. ಅದರಲ್ಲಿ ಕೊಂಚ ಕಡಿಮೆಯಾಗಿದ್ದೀತು ಎಂದು ಹೆದರಿ ಅದರ ಪರಿಪೂರ್ಣತೆಗೋಸ್ಕರವೇ ತಮ್ಮನ್ನು ಪ್ರಾರ್ಥಿಸಿದುದು'

ಯತಿಯು ದುರುಗುಟ್ಟಿಕೊಂಡು ನೋಡುತ್ತಾ, 'ನಾನು ನೀನಾಗಿದ್ದಿದ್ದರೆ ಸಾಹಸದ ಕಾರ್ಯವೊಂದನ್ನು ಮಾಡಿ ಜನರನ್ನು ಒಲಿಸಿಕೊಳ್ಳದೆ, ಸಹಾಯವನ್ನು ಕೇಳುವ ಸಾಹಸ ಮಾಡುತ್ತಿರಲಿಲ್ಲ' ಎಂದನು.

ಮಯೂರನು ಏನೋ ಹೇಳಲು ಹೋಗಿ ಸುಮ್ಮನಾಗಿ ಇನ್ನೊಂದು ಕ್ಷಣವಾದ ಮೇಲೆ, 'ಹಾಗಾದರೆ ತಮ್ಮಲ್ಲಿ ಸಹಾಯವನ್ನು ಬೇಡಬೇಕಾದರೆ ಏನು ಮಾಡಬೇಕು ? ಅಪ್ಪಣೆಯಾಗಲಿ' ಎಂದನು.

ಯತಿಯೂ ಏನೋ ಹೇಳಲು ಹೋಗಿದ್ದು ತಟ್ಟನೆ ನಾಲಗೆಯನ್ನು ಬಿಗಿಹಿಡಿದು, ಅಪರಿಚಯವನ್ನು ನಟಿಸುತ್ತಾ, 'ನಿನ್ನ ಸಂಪೂರ್ಣ ಪರಿಚಯವು ನನಗಿಲ್ಲ. ನಾನು ಈ ವಿಚಾರವಾಗಿ ಏನು ಹೇಳಲಿ?' ಎಂದನು.

ಆತನ ರೀತಿಯನ್ನು ನೋಡಿ ಮಯೂರನು ಆ ಮಾತನ್ನು ನಂಬಲಿಲ್ಲ. ಆದರೂ ಅಪ್ಪಣೆಪಡೆದು ಕಂಚಿಯ ಯುವರಾಜನೊಡನೆ ಒದಗಿದ ಕತ್ತಿಯ ಯುದ್ಧ; ಅದಕ್ಕಾಗಿ ರಾಜಭಟರು ತನ್ನನ್ನು ಹಿಡಿಯ ಬಂದುದು; ಗರಡಿಯವರ ಸಹಾಯದಿಂದ ತಾನು ತಪ್ಪಿಸಿಕೊಂಡುದು: ಆಮೇಲೆ ಅಕಸ್ಮಾತ್ತಾಗಿ ಅಪ್ರಾರ್ಥಿತವಾಗಿ ಷಡಾನನಶರ್ಮ ನರಸಿಂಹದತ್ತರ ಸಹಾಯವು ಒದಗಿದುದು ಮೊದಲಾದ ಎಲ್ಲ ಸಂಗತಿಯನ್ನೂ ಸಂಕ್ಷೇಪವಾಗಿ ಹೇಳಿದನು.

ಯತಿಯು ಕುತೂಹಲದಿಂದ ಎಲ್ಲವನ್ನೂ ಕೇಳಿ, 'ಮಾಡಿರುವುದು ಹೇಡಿಯ ಕೆಲಸ. ನಾನಾಗಿದ್ದರೆ ಹೆದರಿ ಓಡಿ ಬರುತ್ತಿರಲಿಲ್ಲ' ಎಂದನು.

ಮಯೂರನೂ ಜೊತೆಯಲ್ಲಿಯೇ 'ನಾನೂ ಹೆದರಿ ಓಡಿಬರಲಿಲ್ಲ. ಇನ್ನು ಅನ್ಯಾಯವಾಗಿ ನನಗೋಸ್ಕರ ರಕ್ತಪಾತವಾಗಬಾರದೆಂದು ಹೊರಟು ಬಂದೆ. ಅಷ್ಟೆ!' ಎಂದನು.

ಯತಿಯು ಅತೃಪ್ತಿಯನ್ನು ನಟಿಸುತ್ತಾ, 'ಈಗಲೂ ನೀನು ಸಾಹಸಿಯೆಂದು ತೋರಿಸಿಕೊಳ್ಳಬೇಕಾದರೆ ನೇರವಾಗಿ ರಾಜಧಾನಿಗೆ ಹೋಗಿ ಅರಮನೆಯನ್ನು ಹೊಕ್ಕು ಯುವರಾಜನನ್ನು ಕಂಡು ಆತನ ಅಪ್ಪಣೆಯನ್ನು ಪಡೆದು ಬರಬೇಕು' ಎಂದನು.

'ಅಷ್ಟು ಮಾಡಿ ಬಂದರೆ ತಮ್ಮ ಸಹಾಯವು ಸಿಗುವುದೋ?'

'ನಾನೊಂದು ಸಿದ್ಧಿಗಾಗಿ ಇಪ್ಪತ್ತು ವರ್ಷಗಳಿಂದಲೂ ಗೆಡ್ಡೆ ಗೆಣಸುಗಳನ್ನು ತಿಂದುಕೊಂಡು ತಪಸ್ಸು ಮಾಡುತ್ತಲಿದ್ದೇನೆ. ಅದಷ್ಟು ತಪಸ್ಸನ್ನೂ ನಿನಗೇ ಕೊಡುತ್ತೇನೆ'

'ಇನ್ನೊಂದು ಮಾತು. ತಾವು ಈ ಮುಕ್ಕನಲ್ಲಿ ಏಕೆ ಇಷ್ಟು ಅನುಗ್ರಹ ಮಾಡುವಿರಿ?'

'ನಾನು ನನ್ನ ಪ್ರ........' ಆ ಮಾತು ಅಲ್ಲಿಗೆ ನಿಂತಿತು: 'ನಿನ್ನ ಮುಖದಲ್ಲೊಂದು ಅಪೂರ್ವವಾದ ಕಾಂತಿಯನ್ನು ಕಂಡು ನನಗೆ ನಿನ್ನಲ್ಲಿ ವಿಶ್ವಾಸ ಹುಟ್ಟಿದೆ'

ಮಯೂರನು 'ನನಗೂ ಬೆಟ್ಟಕ್ಕಲ್ಲದಿದ್ದರೆ ಹೋಗಲಿ; ಅಟ್ಟಕ್ಕಾದರೂ ಹತ್ತುವುದಕ್ಕೆ ಒಂದು ಏಣಿ ಸಿಕ್ಕಿತು' ಎಂದುಕೊಂಡು ಯತಿಗೆ ನಮಸ್ಕಾರಮಾಡಿ ಆಶೀರ್ವಾದವನ್ನು ಪಡೆದು ಹೊರಟು ಹೋದನು.

ಯತಿಯೂ ಹೋಗುತ್ತಿದ್ದವನನ್ನು ನೀರು ತುಂಬಿದ ಕಣ್ಣಿನಿಂದ ನೋಡುತ್ತ, 'ರಾಣಿಯ ಸೊಗಸು ರಾಜನ ಠೀವಿ ಎರಡೂ ಇವೆ. ಕೃತಕಾರ್ಯನಾಗು, ಕಂದ! ಕೃತಕಾರ್ಯನಾಗು' ಎಂದನು. ಯತಿಗೆ 'ಕಾಡಿನಿಂದ ಹೊರಕ್ಕೆ ಹಾದಿಯನ್ನು ತೋರಿ ಬರಲೇ?' ಎನ್ನಿಸಿತು. ಹಾಗೆಯೇ ಆಶೆಯನ್ನು ಅಡಗಿಸಿಕೊಂಡು, 'ಈಗಲ್ಲ, ಇನ್ನೂ ಕಾಲವಿದೆ' ಎಂದುಕೊಂಡು ಸುಮ್ಮನಾದನು.

*           *           *           *           *

ಮರುದಿನ ಈಶಭಟ್ಟರು ಗುರುಗಳ ದರ್ಶನಕ್ಕೆ ಹೋದಾಗ ಆತನ ಮುಖವು ಬಾಡಿದ್ದಿತು. ಗುರುಗಳು ಕಾರಣವನ್ನು ವಿಚಾರಿಸಿದರು. ಭಟ್ಟರು 'ನಿನ್ನೆಯ ಬೆಳಗಿನಿಂದಲೂ ಹುಡುಗನ ಸುಳಿವೇ ಇಲ್ಲ. ನಾವು ಮೂವರೂ ಹುಡುಕಿದೆವು' ಎಂದರು.

ಗುರುಗಳು ನಗುನಗುತ್ತ, 'ಅರಸಾಗುವುದಕ್ಕೆ ಹುಟ್ಟಿದವನು ಅರಣ್ಯದ ಮೃಗಗಳಿಗೆ ತುತ್ತಾಗುವುದಿಲ್ಲ. ಭಟ್ಟರು ಇದನ್ನು ಬಲ್ಲರಷ್ಟೆ?' ಎಂದರು.

ಭಟ್ಟರು ಬೆಚ್ಚಿಬಿದ್ದು, 'ಹೌದು! ನ್ಯಾಯ! ನ್ಯಾಯ! ಆದರೆ ಸಾಕಿದ ಮಮತೆಯು ತಟ್ಟನೆ ಬಿಡದು. ಅಲ್ಲದೆ ಗುರುತರಿಯದ ಕಡಿದಾದ ಕಾಡು. ಒಬ್ಬೊಂಟಿಗನಾಗಿ ಎಲ್ಲಿ ಹೋದನೋ ಎಂದು ಕಾತರನಾದೆ' ಎಂದರು.

ಗುರುಗಳು ಮತ್ತೆ, 'ಅಯ್ಯೋ! ಹೋಗಯ್ಯ! ಯೋಗವಿದ್ದರೆ ಭಾಗ್ಯ ಲಕ್ಷ್ಮಿ ಓಡಿಬರುತ್ತಾಳೆ' ಎಂದರು.

ಭಟ್ಟರು ಮರುಮಾತನಾಡಲಿಲ್ಲ.

———o———

## ಹತ್ತನೆಯ ಪ್ರಕರಣ

ಶುದ್ಧ ಅಷ್ಟಮಿಯ ರಾತ್ರಿ; ಚಂದ್ರನು ಅಸ್ತನಾಗಿ ಸುಮಾರು ಒಂದು ಕ್ಷಣವಾಗಿರಬಹುದು; ಪಡುವಣ ದೆಸೆಯ ಬಿಳುಪು ಇನ್ನೂ ಅಳಿದಿಲ್ಲ, ಕತ್ತಲಿನ ಒಡೆತನವೂ ಚೆನ್ನಾಗಿ ಬಲಿತಿಲ್ಲ; ತಾರೆಗಳು ಮಾತ್ರ ಥಳಥಳಿಸುತ್ತಿದ್ದುವು.

ರಾಜಧಾನಿಯಾದ ಕಾಂಚೀಪುರವೂ ಮೌನವನ್ನವಲಂಬಿಸುತ್ತಿದೆ. ಅಲ್ಲಲ್ಲಿ ಬಿಸಿಲು ಮಚ್ಚಿನಲ್ಲಿ ನಡೆಯುತ್ತಿದ್ದ ಸಂಗೀತಗಳು ಒಂದೊಂದಾಗಿ ನಿಲ್ಲುತ್ತಿವೆ. ಕರುಮಾಡಗಳಿಂದ ಈಚೆಗೆ ಸುರಿಯುತ್ತಿರುವ ಧೂಪದ ಸುವಾಸನೆಯು ನಟ್ಟಿರುಳ ಸುಳಿಗಾಳಿಯಲ್ಲಿ ಬೆರೆತು ಹೋಗುತ್ತಿದೆ. ಸಮರಾತ್ರಿಯವರೆಗೂ ನರ್ತನ ಮಾಡುತ್ತಿದ್ದ ಸುಂದರಿಯರ ಕಾಲ್ಕಡಗ ಗೆಜ್ಜೆಗಳ ಮಂಜುಳನಿನಾದವು ಕಡಿಮೆಯಾಗುತ್ತಿದೆ. ದೊಡ್ಡವರ ಮನೆಯ ಬಾಗಲಿನ ಪ್ರಹರಿಗಳಿಗೂ ತೂಕಡಿಕೆಯು ಹೆಚ್ಚಾಗಿದೆ.

ಅಂತೂ ರಾಜಧಾನಿಯು, ನಗರದ ನಟ್ಟನಡುವಿದ್ದ ಅರಮನೆಯ ಸುತ್ತುಮುತ್ತಲಿನ ಉದ್ಯಾನದ ಸುಯ್ಯಲರ ಸದ್ದು ಸ್ಫುಟವಾಗಿ ಕೇಳಿಸುವಷ್ಟು ನಿಶ್ಶಬ್ದವಾಗಿದೆ.

ಅರಮನೆಯೂ ನಿಶ್ಶಬ್ದವಾಗಿದ್ದುಕೊಂಡು ಮೌನಮುದ್ರೆಯನ್ನಪ್ಪಿಕೊಂಡಂತಿದೆ. ಅಲ್ಲಲ್ಲಿ ಕಾವಲ್ಗೋಡದ ನಡುನಡುವೆ ಮಿನುಗುವ ನಕ್ಷತ್ರಗಳಂತೆ ತೋರುವ ದೀಪಗಳು, ಆಕಳಿಕೆ ತೂಕಡಿಕೆಗಳ ಪ್ರಹರಿಗಳು, ಇನ್ನೂ ಒಳಕ್ಕೆ ಹೋದರೆ ಒಂದೊಂದೆಡೆ ಸಾವಧಾನವಾಗಿ ನಿದ್ರಿಸುತ್ತಿರುವವರ ಗೊರಕೆಗಳು.

ಅರಮನೆಯನ್ನು ಕಟ್ಟಡಗಳ ಗುಂಪು ಅಥವಾ ದೊಡ್ಡ ದೊಡ್ಡ ಜಗತಿಗಳಮೇಲೆ ಕಟ್ಟಿರುವ ತೊಟ್ಟಿಯ ಮನೆಗಳ ಗುಂಪು ಎನ್ನಬಹುದು. ಮೂಡಲಿಗೆ ಸಜ್ಜೆ, ಸಿಂಹಾಸನದ ತೊಟ್ಟಿ, ದೇವರ ತೊಟ್ಟಿಗಳು. ತೆಂಕಣಿಗೆ ಭದ್ರಾಸನದ ತೊಟ್ಟಿ, ಕುದುರೆಯ ತೊಟ್ಟಿ, ರಾಣಿಯರ ತೊಟ್ಟಿಗಳು. ಪಡುವಲಲ್ಲಿ ಕುಮಾರರ ತೊಟ್ಟಿಗಳು ಬಡಗಣಿಗೆ ಆಯುಧದ ತೊಟ್ಟಿ, ಸಂಗೀತದ ತೊಟ್ಟಿಗಳು, ನರ್ತನಶಾಲೆ. ನಡುವೆ ಒಂದು ದೊಡ್ಡ ಬಯಲು ಅಲ್ಲಲ್ಲಿ ಕಣ್ಣಿಗೆ ಒಪ್ಪುವಂತೆ ವೈಯ್ಯಾರವಾಗಿ ನೆಟ್ಟು ಬೆಳಸಿರುವ ಕೈದೋಟ. ರತ್ನಗಂಬಳಿಯನ್ನು ಹಾಸಿ ಸಿಂಗರಿಸಿರುವ ಅಂಗಳವೆನ್ನಬಹುದು, ಅಷ್ಟು ಚೊಕ್ಕಟವಾಗಿದೆ ಚೆಂದವಾಗಿದೆ.

ಅರಮನೆಯಲ್ಲಿರುವವರೆಲ್ಲಾ—ಪ್ರಹರಿಗಳನ್ನು ಬಿಟ್ಟು—ಅವರಲ್ಲಿಯೂ ಕೆಲವರುಂಟು—ಸುಖನಿದ್ರೆಯಲ್ಲಿ ಇದ್ದಾರೆ. ಪರರ ಅಂಕೆಸಂಕೆಗಳಿಲ್ಲದೆ ಸ್ವಾತಂತ್ರ್ಯದ ಸವಿಯನ್ನನುಭವಿಸಿದವರು ಪಡುವ ಆನಂದದ ನಿದ್ದೆಯಲ್ಲಿ ಮೈಮರೆತಿದ್ದಾರೆ. ನಿರಾತಂಕವೆಂಬ ನಂಬಿಕೆಯಿಂದ ಪ್ರಹರಿಗಳಿಗೂ ಧೈರ್ಯ ಹುಟ್ಟಿ ಅವರ ಪ್ರಬಲ ಪ್ರಯತ್ನಗಳೆಲ್ಲವೂ ನಿಷ್ಫಲವಾಗಿ ಅವರೂ ನಿದ್ದೆಯ ಅಧಿಕಾರಕ್ಕೆ ಒಳಗಾಗುತ್ತಿದ್ದಾರೆ. ತೊಟ್ಟಿಗಳ ಬಾಗಿಲುಗಳಲ್ಲಿ ನೇತುಹಾಕಿರುವ ಪಂಜರಗಳಲ್ಲಿದ್ದ ಪಕ್ಷಿಗಳ ಮೇಲಿನ ಹುರುಡಿನಿಂದಲೋ ಎನ್ನುವ ಹಾಗೆ ಅವರೂ ನಿಂತಲ್ಲಿಯೇ ನಿದ್ರಿಸುತ್ತಿದ್ದಾರೆ. ಕಾವಲೇನೋ 'ಸರ್ಪಕಾವಲು' ಎನ್ನುವಷ್ಟು ಬಲವಾದುದು. ಆದರೆ, ನಿಶ್ಶಬ್ದವಾಗಿ ನಡೆಯಬಲ್ಲವರಿದ್ದರೆ ನಿಶ್ಶಂಕೆಯಾಗಿ ಒಳಕ್ಕೆ ಹೋಗಿ ಬರಬಹುದು.

ಇಂತಹ ಸಮಯದಲ್ಲಿ, ರಾಜಧಾನಿಯವರೆಲ್ಲರೂ ನಿದ್ರಾಸಕ್ತರಾಗಿ ಲೋಕವನ್ನೇ ಮರೆತಿರುವ ಸಮಯದಲ್ಲಿ, ಒಂದು ವ್ಯಕ್ತಿಯು ಕುಮಾರರ ತೊಟ್ಟಿಯ ಕರುಮಾಡದ ಗೋಡೆಗೆ ಹತ್ತಿಕೊಂಡಂತೆ ನಡೆದುಬಂದು ಒಂದು ಕಿಟಕಿಯೊಳಕ್ಕೆ ನುಗ್ಗಿತು. ಕಿರುಮನೆಯೊಳಗಿನ ಕೆಂಪು ದೀಪದ ಬೆಳಕು ಒಳನುಗ್ಗಿದ ವ್ಯಕ್ತಿಯ ನೆರಳನ್ನು ಎದುರು ತೊಟ್ಟಿಯ ಬಾಗಿಲಿನಲ್ಲಿ ಕಟ್ಟಿದ್ದ ನಿಲುಗನ್ನಡಿಯ ಮೇಲೆ ಕೆಡವಿ ತನ್ನ ಕೆಲಸವನ್ನೇನೋ ಮಾಡಿತು. ಆದರೆ ಕನ್ನಡಿಯಲ್ಲಿನ ನೆರಳನ್ನು ನೋಡಲು ಪ್ರಹರಿಗೆ ಎಚ್ಚರವಿರಲಿಲ್ಲ. ವೀರಾ

ಸನದಲ್ಲಿ ಬಿಚ್ಚುಗತ್ತಿಯನ್ನು ಹಿಡಿದು ಕುಳಿತಿದ್ದ ವೀರಭಟನು ತಲೆಯ ಮೇಲಿನ ಪಾಗು ಅಲ್ಲಾಡದಂತೆ ಹಿಡಿದ ಕತ್ತಿಯು ಅಲುಗದಂತೆ ಬಿಟ್ಟ ಅರೆಗಣ್ಣು ಬಿಟ್ಟಂತೆಯೇ ನಿದ್ದೆಹೋಗುತ್ತಿದ್ದಾನೆ. ಕನ್ನಡಿಯಲ್ಲಿ ಮೂಡಿದ ನೆರಳು ಮರುಗಳಿಗೆಯಲ್ಲಿಯೇ ಅಳಿಸಿಹೋಯಿತು.

ವ್ಯಕ್ತಿಯು ತನ್ನ ಜೀವಿತದಲ್ಲಿ ಅಂತಹ ಸುಸಜ್ಜಿತವಾದ ಶಯ್ಯಾಗಾರವನ್ನು ಕಂಡಂತಿರಲಿಲ್ಲ. ಅಚ್ಚರಿಯಿಂದ ಕಣ್ಣುಗಳು ಬಿಚ್ಚುತ್ತಿದ್ದರೂ ಅಲ್ಲಿದ್ದ ವಸ್ತುವೊಂದೊಂದೂ ಕಣ್ಣುಬಗೆಗಳನ್ನು ಸೆಳೆಯುತ್ತಿದ್ದರೂ ವ್ಯಕ್ತಿಯು ಅಲೆಯದ ನಡೆಯಿಂದ ನೇರವಾಗಿ ಮಂಚದ ಬಳಿಗೆ ಹೋಯಿತು. ಸುತ್ತಲೂ ಬಿಟ್ಟಿದ್ದ ತೆಳ್ಳನೆಯ ತೆರೆಯನ್ನು ಮೆಲ್ಲಗೆ ಅತ್ತತ್ತ ಸರಿಸಿ ನಡುಗುತ್ತಿದ್ದ ಕಯ್ಯನ್ನು ಮುಂದೆ ಚಾಚಿ ಅಲ್ಲಿ ಶಾಲಿನ ಮುಸಕಿಟ್ಟು ಪಕ್ಕಕ್ಕೆ ತಿರುಗಿ ಮಲಗಿದ್ದ ವ್ಯಕ್ತಿಯ ಮೈಯನ್ನೊಮ್ಮೆ ತಟ್ಟಿತು. ಮಲಗಿದ್ದ ವ್ಯಕ್ತಿಯೂ ತೊಟ್ಟ ರತ್ನದ ಬಳೆಗಳು ಜಲ್ಲೆನ್ನುತ್ತಿರಲು ಅವಸರವಾಗಿ ತಿರುಗಿ 'ಆ' ಎಂದು ಗಾಬರಿಯಿಂದ ಎದ್ದು, ಬಿಟ್ಟ ಬಿರಿಗಣ್ಣು, ನೆಟ್ಟನೋಟ, ಅರೆತೆರೆದ ಬಾಯಿ, ಒಂದು ಕೈಯಿಂದ ಹಿಡಿದಿರುವ ಮುಸುಕು, ದೇಹದ ಭಾರವನ್ನೆಲ್ಲ ಧರಿಸಿರುವ ಮತ್ತೊಂದು ಕೈ ಇವೆಲ್ಲವುಗಳಿಂದ ಹಾಗೆಯೇ ಅವಾಕ್ಕಾಗಿ ಇದ್ದುಬಿಟ್ಟಿತು. ಒಳನುಗ್ಗಿದ ವ್ಯಕ್ತಿಯ ಕಂಠದಿಂದ ಹೊರಟಿದ್ದ ಏನೋ ಹೆಸರು ನಾಲಗೆಯ ತುದಿಯಲ್ಲಿಯೇ ನಿಂತಿತು. ಹೊದೆದುಕೊಂಡಿದ್ದ ಕರಿಯ ಕಂಬಳಿಯು ಸರಿದು ಬಿದ್ದುಹೋಯಿತು. ನಾಚಿಕೆಯಿಂದ ಕೆಂಪೇರಿದ ಆ ಮುಖವು ಉತ್ತರಕ್ಷಣದಲ್ಲಿಯೇ ಬೆಳ್ಳಗಾಗಿಹೋಯಿತು. ಏನೋ ಹೇಳಬೇಕೆಂದು ತಲೆಯೆತ್ತಿದರೆ ಮಾತುಗಳು ಬಾಯಿಂದ ಹೊರಬೀಳಲಿಲ್ಲ. ಕಣ್ಣುಗಳು ಎದುರಿರುವ ಸುಕುಮಾರ ಸುಂದರ ಸುವರ್ಣಪುತ್ಥಳಿಯ, ನಸುಕಿನಿಸಿನ ಗಂಟನಿಂದ ಬಿರುಸಾದ ನೆಟ್ಟನೋಟದ ಮುರಿದ ಹುಬ್ಬಿನ ಮುಖವನ್ನು ನೋಡಲು ನಿಲ್ಲಲಿಲ್ಲ. ನಾಲಗೆಯು ಅಂಗಳಿಗೆ ಹತ್ತಿಹೋಯಿತು: ಗಂಟಲು ಬಿಗಿದುಹೋಯಿತು: ಕಣ್ಣು ಮುಚ್ಚಿಹೋಯಿತು: ಏನುಮಾಡಬೇಕೆಂಬುದು ತೋರಲಿಲ್ಲ. ತಿರುಗಿ ಬರುತ್ತಿದ್ದ ತಲೆಯನ್ನು ಹಾಗೆಯೇ ಹಿಡಿದುಕೊಂಡು ಹಿಂದೆ ಹಿಂದಕ್ಕೆ ಹೋಗಿ ವ್ಯಕ್ತಿಯು ಗೋಡೆಯನ್ನವಲಂಬಿಸಿ ನಿಂತಿತು.

ರಾಜಕುಮಾರಿಗೂ ಯಾವುದೂ ಅರ್ಥವಾಗಲಿಲ್ಲ. ಕಳ್ಳನಾದರೆ ನಿದ್ದೆಯಲ್ಲಿದ್ದ ತನ್ನನ್ನು ತಟ್ಟಿ ಎಬ್ಬಿಸುವುದುಂಟೆ? ತನಗಾಗಿ ಬಂದಿದ್ದರೆ ಹೀಗೆ ನಾಚಿ ನೀರಾಗಿ ಹಿಂದೆ ಸರಿಯುವುದುಂಟೆ? ರಾಜಕುಮಾರಿಯು ಆಗಂತುಕನನ್ನು ಮತ್ತೊಮ್ಮೆ ದಿಟ್ಟಿಸಿ ನೋಡಿದಳು. ಅರಳಿದ ದುಂಡುಮಲ್ಲಿಗೆಯಂತೆ ವಿಶಾಲವಾದ ಮುಖದಲ್ಲಿ ಕಾಪಟ್ಯದ ಕುರುಹಿಲ್ಲ. ಆಳುದ್ದದ ದೇಹವನ್ನು ಗೇಣುದ್ದ ಮಾಡಿಬಿಟ್ಟಿರುವ ಆ ನಾಚಿಗೆಯಲ್ಲಿ ಕೊಂಕುತನದ ಸೋಂಕಿಲ್ಲ. ಹಾಗಾದರೆ ಬಂದುದೇಕೆ? ರಾಜಪುತ್ರಿಗೆ ಹೊಳೆಯಲಿಲ್ಲ.

ಸಮರಾತ್ರಿ. ನಿರ್ಜನವಾದ ಅಂತಃಪುರ. ನಿರ್ಮಾಕ್ಷಿಕವಾದ ಶಯ್ಯಾಗೃಹ. ಆಗಂತುಕನೊಬ್ಬನು ಅಪರಿಚಿತನೊಬ್ಬನು ಅಧೋದೃಷ್ಟಿಯಾಗಿ ಎದುರು ನಿಂತಿದ್ದಾನೆ. ತಟ್ಟನೆದ್ದಳು. ಒಂದು ನಿಮಿಷದೊಳಗಾಗಿ ಇದ್ದುದರಲ್ಲಿ ಎಲ್ಲವನ್ನೂ ಸರಿಪಡಿಸಿಕೊಂಡು ಮೇಲೆಬೀಳಲು ಸಿದ್ಧವಾಗಿರುವ ಹೆಣ್ಣು ಹುಲಿಯಂತೆ ನಿಂತಳು.

ಆಗಂತುಕನೇ ಮಾತನಾಡಬಹುದೆಂದಿದ್ದ ರಾಜಕುಮಾರಿಯ ಆಶೆಯು ಈಡೇರಲಿಲ್ಲ. ತಾನೇ ಗಡುಸಿನ ಬಿರುದನಿಯಿಂದ ಮಾತನಾಡಲು ಹೊರಟಳು. 'ಏನೆನ್ನಬೇಕು?' ಬಹುದೊಡ್ಡ ಪ್ರಶ್ನೆ. ಆದರೆ ಎಷ್ಟು ಹೊತ್ತು ಸುಮ್ಮನಿರುವುದು? ಇತ್ತ ತಿರುಗಿದಳು. ಅಲ್ಲಿ ಒಂದು ಬೆಳ್ಳಿಯ ಬೃಂದಾವನ. 'ಮೇಲೆ ಬಿದ್ದರೆ ಇದರಿಂದಲೇ ಹೊಡೆದು ತಲೆಯೊಡೆದರಾಯಿತು. ದಿಗಿಲೇನು?' ಎಂದುಕೊಂಡು, 'ಯಾರು?' ಎಂದಳು. ಮಾತು ಈಚೆಗೇ ಬರಲಿಲ್ಲ. ಇನ್ನೊಮ್ಮೆಯೂ, 'ಯಾರು?' ಎಂದಳು. ವ್ಯಕ್ತಿಯು ತಲೆಯೆತ್ತಿತು. ಮುಖದ ಮೇಲೆ ಕೆಂಪು ದೀಪದ ಬೆಳಕು ಬಿದ್ದಿದೆ. ಗಾಬರಿಯು ತಾನೇ ತಾನಾಗಿದೆ. ವ್ಯಕ್ತಿಯು ಬಹು ಕಷ್ಟದಿಂದ ಮಾತನಾಡಿದನು.

'ತಾವು ಯಾರೋ ತಿಳಿಯದು.'

ರಾಜಕುಮಾರಿಯು ಏಕವಚನದಲ್ಲಿ ಮಾತನಾಡಿಸಬೇಕೆಂದಿದ್ದಳು. ವ್ಯಕ್ತಿಯ ಧ್ವನಿಯಲ್ಲಿ ಏನಿದ್ದಿತೋ ಯಾರು ಬಲ್ಲರು? ಬಹುವಚನದಲ್ಲಿಯೇ ಮಾತನಾಡಿಸಿದಳು.

'ಹಾಗಾದರೆ ನಾನು ಯಾರೆಂಬುದನ್ನು ಕಾಣಿರೋ?'

'ತಮ್ಮ ದರ್ಶನವನ್ನು ಪಡೆಯುವ ಭಾಗ್ಯವು ಈ ಪಾಮರನಿಗೆ ಲಭಿಸಿದುದು ಇದೇ ಮೊದಲು'

'ಹಾಗಾದರೆ ಇಲ್ಲಿಗೇಕೆ ಬಂದಿರಿ?'

'ಕಾರ್ಯಾಂತರದಿಂದ ಯುವರಾಜರನ್ನು ಕಾಣಬೇಕಾಗಿದ್ದಿತು. ಇದು ಅವರ ತೊಟ್ಟಿಯೆಂದುಕೊಂಡು ಇಲ್ಲಿಗೆ ಬಂದೆನು'

ರಾಜಕುಮಾರಿಗೆ ಆಶ್ಚರ್ಯವಾಯಿತು. ಬಂದಿರುವುದು ಯುವರಾಜರನ್ನು ಕಾಣುವುದಕ್ಕೆ; ತನ್ನನ್ನು ಕಾಣನು.!

'ನೀವು ಯುವರಾಜರನ್ನು ಬಲ್ಲಿರೋ?'

'ದೂರದಿಂದ ಅನೇಕ ವೇಳೆ ನೋಡಿದ್ದೇನೆ: ಹತ್ತಿರವಾಗಿ ನೋಡಿರುವುದು ಒಂದೇಸಲ. ಆದರೂ ಅದೊಂದೇ ನೋಟವೇ ಈ ಜನ್ಮದಲ್ಲಿ ನಾವಿಬ್ಬರೂ ಒಬ್ಬರನ್ನೊಬ್ಬರು ಮರೆಯದಂತೆ ಮಾಡಿದೆ'

'ಕಾರಣ?'

'ಕಾರಣವು ಅಷ್ಟು ಸಮರ್ಪಕವಾಗಿಲ್ಲ. ನಾವಿಬ್ಬರೂ ಕಾದಾಡಿದ್ದೇವೆ'

'ಹಾಗಾದರೆ, ತಾವೇ............ಏನು?'

'ಅಹುದು'

ರಾಜಕುಮಾರಿಯ ಕಣ್ಣರಳಿತು. ಕೈ ಕಟ್ಟಿಕೊಂಡು ಎದುರು ನಿಂತಿದ್ದ ವ್ಯಕ್ತಿಯನ್ನು ಮತ್ತೊಮ್ಮೆ ನೋಡಿದಳು. ಮಸಕುಮಸಕಾದ ಆ ಬೆಳಕಿನಲ್ಲಿಯೂ ಆ ಮೂರ್ತಿಯು ಭವ್ಯವಾಗಿ ತೋರಿತು. 'ಹೋಗಿ ದೀಪವನ್ನೆತ್ತಲೇ?' ಎಂದುಕೊಂಡಳು. ಆದರೆ, ಬಿಂಕ?

ರಾಜಕುಮಾರಿಯ ದನಿಯ ಬಿರುಸು ಅಳಿಯಿತು. ಮುಖದ ಗಂಟುಬಿಚ್ಚಿ ಸ್ವಾಭಾವಿಕವಾದ ನಗೆಯು ಬಂದು ಮುಖವರಳಿ ಕೆಂಪೇರಿತು. ಏನೋ ಹೇಳಬೇಕೆಂದಿದ್ದವಳು ನುಡಿಗಳನ್ನು ಹಾಗೇ ನುಂಗಿಕೊಂಡು, 'ಕನ್ಯಾಂತಃಪುರಕ್ಕೆ ನೂರಾರು ಜನದ ಕಾವಲುಂಟು. ಅಗೋ! ಆ ಕದದ ಹೊರಗೆ ಬಿಚ್ಚುಗತ್ತಿಯ ಪ್ರಹರಿಯುಂಟು. ಇದನ್ನು ತಾವು ಬಲ್ಲಿರಾ?' ಎಂದಳು.

ಅದುವರೆಗೂ ಮಯೂರನು ತಲೆಯೆತ್ತಿರಲಿಲ್ಲ. ಕಾವಲು ಎಂಬ ಮಾತು ಕಿವಿಗೆ ಬಿದ್ದೊಡನೆಯೇ ಬಿಗಿದುಕೊಂಡು ತಲೆಯೆತ್ತಿ, 'ರಾಜಪುತ್ರಿ! ಯುವರಾಜನನ್ನು ಕಾಣಬಂದ ನಾನು ಮೃತ್ಯುವಿನ ಬಾಯೊಳಗೆ ತಲೆಯಿಟ್ಟಿರುವೆನೆಂಬುದನ್ನು ಅರಿತೇ ಇರುವೆನು' ಎಂದನು.

ಆ ಗರ್ವೋಕ್ತಿಯು ಕುಮಾರಿಗೆ ಬಲು ಸೊಗಸಿತು. ತಿರುಗಿಯೂ ಆಕೆಯೇ ಮಾತನಾಡಿದಳು.

'ಅಣ್ಣಾಜಿಯನ್ನು ಕಾಣಿಸಿಕೊಳ್ಳಬೇಕಾದ ಕಾರಣವೇನು?'

'ನಾನು ಈ ಊರನ್ನು ಬಿಟ್ಟುಹೋದಾಗ ಹೇಡಿಯಂತೆ ಹೇಳಕೇಳದೆ ಹೊರಟುಹೋದೆನು. ಈಗ ಹೇಳಿ ಕೇಳಿ ಹೋಗಬೇಕೆಂದು ಬಂದಿದ್ದೇನೆ.'

'ಈಗೇಕೆ ಹಾಗೆ ಮಾಡಬೇಕು?'

'ನನಗೊಬ್ಬರು ಪೂಜ್ಯರ ದರ್ಶನವಾಯಿತು. ಅವರ ಅನುಗ್ರಹವನ್ನು ಯಾಚಿಸಿದೆನು. ಅವರು ಹೀಗೆ ಮಾಡಿದಲ್ಲದೆ ಯತ್ನವಿಲ್ಲವೆಂದರು. ಅದಕ್ಕಾಗಿ ಬಂದೆನು'

'ರಾಜಧಾನಿಯ ಕೋಟೆಯು ಸಾಮಾನ್ಯವಲ್ಲ. ಕಾಯುವ ಭಟರು ಕಡುಗಲಿಗಳು. ತಾವು ಒಳಕ್ಕೆ ಬಂದುದು ಹೇಗೆ?'

'ನಾನು ಬರುವ ದಾರಿಯಲ್ಲಿ ಕಾಡುಕುರುಬನೊಬ್ಬನು ಮರದಿಂದ ಬಿದ್ದು ಗಾಯಪಟ್ಟಿದ್ದನು. ಅವನಿಗೆ ಕೊಂಚ ಉಪಚಾರಮಾಡಲು ಆತನು ತನ್ನಲ್ಲಿದ್ದ ಒಂದು ಉಡುವನ್ನು ಕೊಟ್ಟನು. ಅದರ ಸಹಾಯದಿಂದ ಕೋಟೆಯನ್ನೇರಿಬಂದೆನು.'

'ಅಂತಃಪುರಕ್ಕೆ?'

'ಅಗೋ! ಅಲ್ಲಿ ಕಾಣುತ್ತಿರುವ ಮರದಿಂದ ಹಾರಿಬಂದೆನು.'

ಹುಡುಗಿಯು ಹಿಂತಿರುಗಿ ನೋಡಿದಳು. ಮರಕ್ಕೂ ಮಾಡಕ್ಕೂ ಸುಮಾರು ಎರಡು ಮೂರು ಮಾರಾಗಬಹುದು.

'ಕಾವಲಿನವರ ಕೈಗೆ ಸಿಕ್ಕಿದರೆ ಏನಾಗುವುದು ಬಲ್ಲಿರಾ?'

'ಆಗಲೇ ಹೇಳಿದೆನಲ್ಲ ?'

'ಹಾಗಾದರೆ ನಾನವರನ್ನು ಕರೆಯಬಹುದಷ್ಟೆ ?'

'ರಾಜಪುತ್ರಿ! ತಾವು ಅಗತ್ಯವಾಗಿ ಕರೆಯಬಹುದು. ಆದರೆ ಒಂದು ಮಾತನ್ನು ತಮ್ಮಲ್ಲಿ ಅರಿಕೆಮಾಡಬೇಕಾದುದುಂಟು. ಅದನ್ನು ಆಲಿಸಿ ಅನಂತರ ತಮಗೆ ತೋರಿದಂತೆ ಮಾಡಬಹುದು'

'ಅದೇನು ?'

'ಕಾವಲುಗಾರರು ಬಂದು ಮೇಲೆ ಬಿದ್ದರೆ ಕಾಪಾಡಿಕೊಳ್ಳುವ ಸಾಧನವು ನನ್ನಲ್ಲುಂಟು. ಅದರಿಂದ ಅವರನ್ನು ಕಂಡರೆ ಹೆದರಿಕೆಯಿಲ್ಲ. ಆದರೆ, ತಮ್ಮಲ್ಲಿ ಅಪಚಾರ ಮಾಡಿದನೆಂದು ತಾವು ಕೋಪಗೊಂಡು ನನ್ನಕಡೆ ತಿರುಗಿದರೆ ನಾನು ಉಳಿಯುವುದೆಂತೋ ಕಾಣೆನು. ಅದರಿಂದ ಅದುರಿ ಬೆದರಿ ತಮ್ಮನ್ನು ಕೈಮುಗಿದು ಕೇಳಿಕೊಳ್ಳುವೆನು. ತಾವೊಮ್ಮೆ ನನ್ನ ಅವಿನಯವನ್ನು ಅಪಚಾರವನ್ನು ಕ್ಷಮಿಸಿರುವೆನೆಂದು ಅಪ್ಪಣೆ ಕೊಡಿಸಿ. ಅನಂತರ ಕಾವಲುಗಾರರನ್ನು ಕರೆಯೋಣವಾಗಲಿ. ಒರೆಯಲ್ಲಿ ಯುವರಾಜರು ಕೊಟ್ಟ ಕತ್ತಿಯಿದೆ: ತೋಳಿನಲ್ಲಿ ದೇವರು ಕೊಟ್ಟ ಬಲವಿದೆ. ಎರಡೂ ವಿಫಲವಾದ ಕಾಲಕ್ಕೆ ನೋಡಿಕೊಳ್ಳೋಣ'

ರಾಜಪುತ್ರಿಯ ಕಣ್ಣು ಒದ್ದೆಯಾಯಿತು.

'ಯುವರಾಜರ ಶಯ್ಯಾಗೃಹವು ಎದುರಿನದು. ಇಂದು ಅವರು ಊರಿನಲ್ಲಿಲ್ಲ. ಬೇಟೆಗೆ ಹೋಗಿದ್ದಾರೆ'

'ಹಾಗಾದರೆ ಅವರನ್ನೆಲ್ಲಿ ಕಾಣಬಹುದು. ತಾವು ಬಲ್ಲಿರಾ ?'

'ಪಡುವಣ ದಿಕ್ಕಿನಲ್ಲಿ ಹಬ್ಬಿರುವ ಮಲೆಸಾಲಿನಲ್ಲಿ'

'ಸರಿ ಅಪ್ಪಣೆಯಾದರೆ ನಾನಿನ್ನು ಬರುವೆನು.'

'ಆಗಬಹುದು'

ಮಯೂರನು ಸವರಿಸಿಕೊಳ್ಳುತ್ತ ಮುಂದೆ ಹೊರಟನು. ರಾಜಪುತ್ರಿಗೆ ಅವನು ಹೊರಟುಹೋಗುವನಲ್ಲ ಎನ್ನಿಸಿತು. ಆದರೇನು ಮಾಡುವುದು ? ಆಗಲೇ ಅವನು ಕಿಟಕಿಯ ಬಳಿಗೆ ಹೋಗಿಬಿಟ್ಟಿದ್ದಾನೆ. ಇನ್ನೊಂದುಸಲ

ರೆಪ್ಪೆ ಹೊಯ್ಯುವುದರೊಳಗಾಗಿ ಅವನು ಆ ಕಟ್ಟಡದಿಂದ ಹೊರಕ್ಕೆ ಹೋಗಿ ಬಿಡುತ್ತಾನೆ.

ಆಕೆಯು ಜಾಗ್ರತೆಮಾಡಿ ದೀಪದ ಬತ್ತಿಯನ್ನು ಎತ್ತಿದಳು. ದೀಪದ ಬೆಳಕು ಹೆಚ್ಚಿದುದನ್ನು ನೋಡಿ ಮಯೂರನು ಹಿಂದುರುಗಿದನು. ರಾಜಪುತ್ರಿಯು ಅನನ್ಯಸಾಮಾನ್ಯವಾದ ಗಾಂಭೀರ್ಯದಿಂದ, 'ತಾವು ಅರಮನೆಗೆ ಬಂದಿರುವಿರಿ. ಹಾಗೆಯೇ ಹೊರಟುಹೋಗುವುದು ಮರ್ಯಾದೆಯಲ್ಲ. ಈ ವೀಳ್ಯವನ್ನು ಸ್ವೀಕರಿಸಿ ಹೋಗಬೇಕು' ಎಂದು ಬೆಳ್ಳಿಯ ತಟ್ಟೆಯಲ್ಲಿದ್ದ ವೀಳ್ಯವನ್ನು ಮುಂದಿಟ್ಟಳು.

ಮಯೂರನಿಗೆ ಒಮ್ಮೆ 'ತಾನು ಸ್ವರ್ಗದಲ್ಲಿದ್ದೇನೋ?' ಎಂದು ಸಂದೇಹ ಬಂದಿತು.

ಮರುಗಳಿಗೆಯಲ್ಲಿ ಮತ್ತೆ ಸ್ಥಿರನಾಗಿ 'ಈ ಉಪಚಾರವು ಮಿತ್ರರಿಗೆ ಒಪ್ಪತಕ್ಕದು. ನನ್ನಂತಹ ಶತ್ರುವಿಗೆ ಸಲ್ಲತಕ್ಕದಲ್ಲ.' ಎಂದನು.

ರಾಜಪುತ್ರಿಯು ಕೂಡಲೇ, 'ಶತ್ರುತ್ವ ಮಿತ್ರತ್ವಗಳು ಬದಲಾಗುವುದು ಎಷ್ಟು ಹೊತ್ತು? ಅಲ್ಲದೆ ಬ್ರಾಹ್ಮಣರು ದೀರ್ಘಕೋಪಿಗಳಲ್ಲ'ಎಂದಳು.

'ಬ್ರಾಹ್ಮಣರು ದೀರ್ಘಕೋಪಿಗಳಲ್ಲ, ನಿಜ. ಆದರೆ, ತಮ್ಮ ಸಹೋದರರು ಓದಿಸಿದ ಸೆಳೆಯ ಏಟು ಒಂದು ಪಕ್ಕದಲ್ಲಿದೆ. ನಾನು ಬೇಡವೆಂದರೂ ಬಿಡದೆ ಗಳಿಗೆ ಗಳಿಗೆಗೂ ನನಗೆ ರೋಷೋದ್ರೇಕವನ್ನುಂಟು ಮಾಡುತ್ತಿದೆ, ಅಷ್ಟೇನು? ಈ ವೇಳೆಗೆ ಆಗಲೆ ನನಗೆ ಪಲ್ಲವರ ಮೇಲೆ ಪ್ರಬಲವಾದ ದ್ವೇಷವು ಹುಟ್ಟಿಬಿಟ್ಟಿದೆ'

ರಾಜಪುತ್ರಿಯು ನಡುಗಿದಳು. ಏಕೋ ಆಕೆಗೆ ತಿಳಿಯದು.

'ಈ ಮಾತುಗಳು ಕ್ಷತ್ರಿಯರಿಗೆ ಯೋಗ್ಯವು'

'ನಿಜ! ನಾನೂ ಬಲ್ಲೆ. ಅದರಿಂದಲೇ ನನಗೂ ಸಂದೇಹವಾಗಿದೆ, ನಾನೂ ಬ್ರಾಹ್ಮಣನೇ ಹೌದೋ ಅಲ್ಲವೊ ಎಂದು.

ರಾಜಪುತ್ರಿಯು ಅಲ್ಲಿಂದ ಮುಂದೆ ವೀಳ್ಯವನ್ನು ಪರಿಗ್ರಹಿಸಿರೆಂದು ಒತ್ತಾಯ ಮಾಡಲಿಲ್ಲ. ಮಯೂರನು ಆಕೆಯ ಅಪ್ಪಣೆ ಪಡೆದು ಕಿಟಕಿಯಿಂದ ಹೊರಬಿದ್ದು ಪಾರಾದನು.

ಬಾಗಿಲಬಳಿಯ ಪಂಜರದಲ್ಲಿದ್ದ ಸೋರೆಯಹಕ್ಕಿಯು ಸದ್ದುಮಾಡಿತು. ಜಾವದ ಗಂಟೆಯಾಯಿತು. ಕಾವಲನ್ನು ಬದಲಾಯಿಸಲು ಬರುವ ಪ್ರಹರಿಗಳ ಕಾಲ ಸಪ್ಪಳವು ಕೇಳಿಸಿತು.

ರಾಜಪುತ್ರಿಯು ಮತ್ತೊಮ್ಮೆ ಗಾಳಿಗೆ ಸಿಕ್ಕಿದ ಅರಳಿಯೆಲೆಯಂತೆ ಥರಥರನೆ ನಡುಗಿ ಹೋದಳು. ಗಾಬರಿಯಲ್ಲಿ ಏನೂ ತೋರದೆ, 'ಅವನು ಕ್ಷೇಮವಾಗಿರಲಿ. ತಾಯಿ!' ಎಂದು ತನ್ನ ಕೈಯ ರತ್ನದ ಬಳೆಯನ್ನು ನಗರದೇವತೆ ಕಾಮಾಕ್ಷಿಗೆ ಮೀಸಲು ಕಟ್ಟಿದಳು.

ಆಕೆಗೆ ಆ ರಾತ್ರಿ ಬಹಳ ಹೊತ್ತು ನಿದ್ದೆಬರಲಿಲ್ಲ. ಹಾಸುಗೆಯ ಮೇಲೆ ದಿಂಬನ್ನೊರಗಿಕೊಂಡು ಬೆಳಗಾಗುವವರೆಗೂ ಹಾಗೆಯೇ ಕುಳಿತಿದ್ದಳು. ಭಾವನಾತರಂಗಗಳು ಮೇಲಿಂದಮೇಲೆದ್ದು ಆಕೆಯ ಹೃದಯವನ್ನು ಕ್ಷೋಭೆಗೊಳಿಸಿದುವು; ತೀರ ದಣಿಸಿಬಿಟ್ಟುವು.

ಮೂರನೆಯ ಝಾಮದ ಕೊನೆಯಲ್ಲಿ ಒಂದು ಕನಸು. ಅದರಲ್ಲಿ ಬೆಟ್ಟದ ತಪ್ಪಲ ಕಾಡಿನಲ್ಲಿ ಒಂದು ದೊಡ್ಡ ಆನೆಯ ಮೇಲೆ ತಾನು ಯಾರೊಡನೆಯೋ ಕುಳಿತು ಆ ಬೆಟ್ಟವನ್ನು ಹತ್ತುತ್ತಿದ್ದಂತೆ ಇದ್ದಿತು. ಕೂಡಲೇ ಎಚ್ಚರವಾಯಿತು. ಕನಸಿನಲ್ಲಿ ಮಗ್ಗುಲಲ್ಲಿ ಕುಳಿತಿದ್ದವರನ್ನು ಎಚ್ಚರದಲ್ಲಿಯೂ ಅಂದೇ ಅಲ್ಲಿಯೇ ಕಂಡಿದ್ದಂತೆ ತೋರಿತು. ಅದೇ ಕನಸು ಇನ್ನೊಂದು ಸಲ ಬೀಳಲಾರದೇ ಎಂದು ಕಣ್ಮುಚ್ಚಿಕೊಂಡಳು.

ಕನಸು ಬರಲಿಲ್ಲ, ನಿದ್ದೆ ಬಂದಿತು.

——o——

## ಹನ್ನೊಂದನೆಯ ಪ್ರಕರಣ

ಮಧ್ಯಾಹ್ನವಾಗಿ ಹೋಗಿದ್ದಿತು. ಭಗವಂತನಾದ ಸೂರ್ಯನ ತೇಜಸ್ಸು ತಗ್ಗಿ ಬಿಸಲಿನ ಶಾಖವೂ ಕಡಿಮೆಯಾಗುತ್ತ ಮೈಯೊಡ್ಡಿ ಕುಳಿತುಕೊಳ್ಳುವುದಕ್ಕೆ ತಕ್ಕುದಾಗುತ್ತಿದ್ದಿತು.

ಬೆಟ್ಟದ ತಪ್ಪಲಿನಲ್ಲಿ ಸಾಮ್ರಾಜ್ಯದ ಸೈನ್ಯವು ಬೀಡುಬಿಟ್ಟಿದೆ. ಸುತ್ತಲೂ ಕರ್ಮಕಾರರ ತಂಡಗಳು. ಆಮೇಲೆ ಆನೆಯ ಪಾಳ್ಯ. ಅಲ್ಲಿಂದಾಚೆ ಕುದುರೆಯ ಲಾಯಗಳು. ಅದಾದಮೇಲೆ ಪದಾತಿಗಳು. ಆಮೇಲೆ ಸೈನ್ಯ ದೊಡನೆ ತಿರುಗುವ ವ್ಯಾಪಾರಗಾರರ ಇತರರ ಅಂಗಡಿಗಳ ಗುಡಾರಗಳು. ನಟ್ಟನಡುವೆ, ಸಮ್ರಾಜನ ಹಿರಿಯ ಮಗ, ಮುಂದೆ ಪಲ್ಲವ ಸಾಮ್ರಾಜ್ಯದ ಬೆಳುಗೊಡೆಯನ್ನು ಹಿಡಿಸಿಕೊಳ್ಳುವ ಚಕ್ರವರ್ತಿ, ಇಂದಿನ ಯುವರಾಜ, ಆತನ ಪ್ರಶಸ್ತವಾದ ಪಟಗೃಹ. ಆ ಗೂಡಾರದ ಮೇಲೆ ಸಮೀಪಿಸುತ್ತಿರುವ ಸಂಜೆಯ ಗಾಳಿಯಲ್ಲಿ ಸಾಮ್ರಾಜ್ಯದ ಸಿಂಹಧ್ವಜವು ನರ್ತಿಸುತ್ತಿದೆ.

ಯುವರಾಜನು ಬೇಟೆಯಿಂದ ತಿರುಗಿ ಬಂದಿದ್ದಾನೆ. ಬೇಟೆಯು ಸಫಲವಾಗಿದ್ದರೂ ಮನಸ್ಸಿನ ಮಾಲಿನ್ಯವನ್ನು ಮಾತ್ರ ಕಳೆದಿಲ್ಲ. ಅಂದಿನ ಕಾದಾಟವು ಕಳೆದು ಇಂದಿಗೆ ಎರಡು ತಿಂಗಳಾಗುತ್ತ ಬಂದಿದೆ. ಆದರೂ ಎದುರಾಳಿಗೆ ಅವಕಾಶಕೊಟ್ಟು ತಾನು ಸೋತುದನ್ನು ನೆನೆನೆನೆದು ಆತನು ಒಮ್ಮೆ ಕುದಿಯುವನು; ಇನ್ನೊಮ್ಮೆ, 'ಅಂತಹ ವೀರನನ್ನು ತನ್ನ ಬಳಿಯ ಲ್ಲಿಟ್ಟುಕೊಳ್ಳಬೇಕು' ಎಂದುಕೊಳ್ಳುವನು; ಮತ್ತೊಮ್ಮೆ, 'ಅವನನ್ನು ಗೆಲ್ಲದಿರಲು ತಾನು ಬದುಕಿ ಫಲವೇನು?' ಎಂದು ಸಂತಾಪಗೊಳ್ಳುವನು. ಹೀಗೆ ಹಲವುತೆರದ ಯೋಚನೆಗಳಿಗೆ ಎಡೆಯಾಗಿ ಪುಟಚೆಂಡಿನಂತೆ ಎದ್ದೂ ಬಿದ್ದೂ ಮನಸ್ಸು ಘಾಸಿಯಾಗಿರಲು ಆತನು ವಿಹ್ವಲನಾಗಿ ಬೆಳ್ಳಿಯ ಮಂಚದಮೇಲೆ ದಿಂಬನ್ನು ಒರಗಿಕೊಂಡು ಕುಳಿತಿದ್ದಾನೆ. ಮುಖವು ಗಾಂಭೀರ್ಯದ ಗಣಿಯಾಗಿದೆ. ನೆಟ್ಟನೋಟವು ಎದುರಿಗಿಲ್ಲದ ಏನನ್ನೋ ದೃಷ್ಟಿಸಿ ನೋಡುತ್ತಿದೆ. ಎಡಗೈಯು ಕಿರುಮೀಸೆಯನ್ನು ಹಿಂಡುತ್ತಿದೆ. ಬಲಗೈಯು ತನ್ನ ಕಡೆಗೆ ಒಲೆದ ಮೈಯ ಭಾರವನ್ನು ದಿಂಬಿನೊಡನೆ ಹಂಚಿಕೊಂಡಿದೆ. ಒಟ್ಟಿನಲ್ಲಿ ಭಾವವು ಸಮೀಪಕ್ಕೆ ಬರಬೇಕೆಂದಿದ್ದವರನ್ನೂ ಬೇಡವೆಂದು ನಿವಾರಿಸುವಂತಿದೆ.

ಹೀಗೆಯೇ ಎಷ್ಟೋ ಹೊತ್ತು ಕಳೆದುಹೋಯಿತು. ಸೂರ್ಯನು ಕೆಳ ಕೆಳಕ್ಕಿಳಿಯುತ್ತ ಬಂದನು. ಗಿಡಮರಗಳ ನೆಳಲುಗಳೆಲ್ಲವೂ ನಿಡಿದಾಗುತ್ತ ಬಂದುವು. ಹಕ್ಕಿಪಕ್ಕಿಗಳ ಚಿಲಿಪಿಲಿಯು ಹೆಚ್ಚಾಯಿತು. ಅರಸು ಮಗನು

ಹಠಾತ್ತಾಗಿ ತನ್ನ ಭಾವನಾ ಪ್ರಪಂಚವನ್ನು ಬಿಟ್ಟು ಹೊರಬಿದ್ದು ಸುತ್ತು ಮುತ್ತಲು ನೋಡಿ ಸಂಧ್ಯಾಕರ್ಮಕ್ಕೆಂದು ಒಳಕ್ಕೆ ಹೊರಡಲು ಎದ್ದನು.

ಸಮಯವನ್ನು ಕಾದಿದ್ದ ಪ್ರಹರಿಯು ಬಳಿಗೆ ಬಂದು ವಿನಯದಿಂದ ಒಂದು ಪತ್ರವನ್ನೊಪ್ಪಿಸಿದನು. ಯುವರಾಜನಿಗೆ ಯೇನೋ ಯೆಂತೋ ಆ ಪತ್ರವನ್ನು ನೋಡುತ್ತಿದ್ದ ಹಾಗೆಯೇ ಒಂದು ವಿಧವಾದ ತವಕ ಹುಟ್ಟಿತು. ಆತುರದಿಂದ ಅವಸರವಾಗಿ ಅದನ್ನು ಬಿಚ್ಚಿ ಓದಿದನು. ಅದರಲ್ಲಿ ಹೀಗೆ ಬರೆದಿದ್ದಿತು; 'ತಮ್ಮ ಕತ್ತಿ ನನ್ನ ಬಳಿಯಿದೆ. ಕೊಟ್ಟುಹೋಗಲು ಬಂದಿದ್ದೇನೆ. ದರ್ಶನಕ್ಕೆ ಅಪ್ಪಣೆಯಾಗಬೇಕು. ಮಯೂರ'

ಯುವರಾಜನಿಗೆ ಆಶ್ಚರ್ಯವಾಯಿತು: ಪ್ರಹರಿಯನ್ನು ಕುರಿತು 'ಎಷ್ಟು ಜನರು ಬಂದಿದ್ದಾರೆ?' ಎಂದು ಕೇಳಿದನು.

'ಒಬ್ಬನೇ'

'ಎಲ್ಲಿದ್ದಾರೆ?'

'ಬಾಗಿಲಲ್ಲಿಯೇ ಇದ್ದಾರೆ'

ರಾಜಕುಮಾರನು ಒಂದು ಗಳಿಗೆ ತಡೆದು, 'ಹೂಂ! ಹೋಗು ಕರೆದುಕೊಂಡು ಬಾ!' ಎಂದನು.

ಉತ್ತರ ಕ್ಷಣದಲ್ಲಿಯೇ ಪ್ರಹರಿಯು ಧೂಳಿಧೂಸರಿತನಾಗಿ ಪ್ರಯಾಣ ಮಲಿನವಾದ ವೇಷದಿಂದ ಕಂದಿರುವ ಮಯೂರನನ್ನು ಕರೆತಂದು ಯುವ ರಾಜನ ಸಮ್ಮುಖದಲ್ಲಿ ಬಿಟ್ಟು ತಾನು ಮರೆಯಾದನು.

ಯುವರಾಜನು ಮಯೂರನನ್ನು ವಿಶ್ವಾಸದಿಂದಲೇ ಬರಮಾಡಿ ಕೊಂಡನು; 'ಹೊಡೆದಾಡಿದವನು; ಹಗೆ' ಎಂಬ ಭಾವವು ಎಳ್ಳಷ್ಟೂ ಇದ್ದಂತೆ ತೋರಲಿಲ್ಲ. ಆಜನ್ಮಸ್ನೇಹಿತನಂತೆ ನಡೆದುಕೊಂಡನು. ಅಪರಿಚಿತ ನೆಂಬ ಭಾವವಿದ್ದಂತೆ ತೋರಲಿಲ್ಲ. ಬಾಯಿತುಂಬ ಮಾತನಾಡಿಸಿದನು; ಅಜ್ಞಾತಕುಲಗೋತ್ರನೆಂದು ತಿರಸ್ಕಾರವನ್ನೇನೂ ತೋರಲಿಲ್ಲ. ಯುವ ರಾಜನ ರೀತಿಯನ್ನು ನೋಡಿದರೆ ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕೆಂಬ ಪ್ರಲೋಭದಿಂದ ವರ್ತಿಸುವಂತಿದ್ದಿತು. ಎದುರಾಳಿಯ ಹೃದಯವನ್ನು

ತನ್ನ ಕಡೆಗೆ ಒಲಿಸಿಕೊಂಡು ಅವನನ್ನು ತನ್ನವನನ್ನಾಗಿ ಮಾಡಿಕೊಳ್ಳ ಬೇಕೆಂಬ ಹವಣಿಕೆಯಲ್ಲಿದ್ದಂತೆ ಇದ್ದಿತು. ಒಳನುಡಿಯ ಮೆಚ್ಚುಗೆಗೊಟ್ಟು ಒಳಬಗೆಯನ್ನು ಹಿಡಿಯಬೇಕೆಂಬ ಸಂಚುಮಾಡುವಂತೆ ತೋರುತ್ತಿದ್ದಿತು.

ಮಾತನಾಡಬೇಕೆಂದು ಬಂದವನಿಗೆ ಬಾಯಲ್ಲಿ ಮಾತು ಹೊರಡುವುದು ಕಷ್ಟವಾಯಿತು. ವಿಸ್ತಾರವಾದ ಸಾಮ್ರಾಜ್ಯದ ಯುವರಾಜನು, ಹತ್ತಾರು ಜನ ರಾಜರೆನಿಸಿಕೊಂಡವರಿಂದ ಕಾಣಿಕೆಯನ್ನೊಪ್ಪಿಸಿಕೊಳ್ಳುವ ಅಧಿರಾಜನಾಗುವವನು, ಯಃಕಶ್ಚಿತನಾಗಿ ತಾನಾರೆಂಬುದನ್ನು ತಾನೇ ತಿಳಿಯದ ಬಿಕಾರಿಯನ್ನು ಸರಿಸಮನೆಂದು ಭಾವಿಸಿ ಏಕಾಸನದಲ್ಲಿ ಮಗ್ಗುಲಲ್ಲಿ ಕೈಹಿಡಿದು ಕುಳ್ಳಿರಿಸಿಕೊಂಡಿರಲು ಬಾಯಿಂದ ಮಾತೆಂತು ಧಾರಾಳವಾಗಿ ಹೊರಡುವುದು? ತಿರಸ್ಕಾರವು ಬಾಯ ಬೀಗವನ್ನು ತೆರೆಯಬಲ್ಲುದು. ಹೀಯ್ಯಾಳಿಕೆಯು ನುಡಿಯ ಹೊಳೆಯನ್ನು ಹರಿಸಬಲ್ಲುದು. ಆದರೆ ಸ್ನೇಹವು ಹೃದಯವನ್ನು ನನೆಯಿಸಿರಲು, ಮೃದುಮಧುರ ಕುಶಲಪ್ರಶ್ನೆಯು ಅಂತರಾತ್ಮನನ್ನು ತಣಿಯಿಸಿರಲು, ಪ್ರಕಟವಾದ ಪ್ರಬಲವಾದ ಪ್ರಶ್ರಯವು ಪ್ರತಿಯೋಗಿತೆಯ ಕುರುಹನ್ನೂ ಅಳಿಸಿರಲು, ಏನು ನುಡಿಯುವುದು? ಎಂತು ನುಡಿಯುವುದು?

ಯುವರಾಜನೇ ಮಾತನಾಡಿದನು: 'ತಮ್ಮ ಮುಖದಿಂದಲೇ ತಮ್ಮ ಪರಿಚಯವನ್ನು ಪಡೆಯುವುದರೊಳಗಾಗಿ ತಮ್ಮ ದರ್ಶನವೇ ಅಲಭ್ಯವಾಯಿತು'

ಮಯೂರನು ಇನ್ನೆಂತು ಸುಮ್ಮನಿರುವುದು? ಆತನೂ ಹೇಳಿದನು: 'ಹೌದು! ನಾನು ತಮ್ಮ ಉಪಕಾರಕ್ಕಾಗಿ ಕೃತಜ್ಞತೆಯನ್ನು ಸೂಚಿಸಿ ತಮ್ಮನ್ನು ಬೀಳ್ಕೊಂಡು ಹೋಗಬೇಕಾಗಿದ್ದಿತು. ಆ ಅನುನಯವನ್ನು ಪಾಲಿಸದೆ ಓಡಿಹೋದುದಕ್ಕಾಗಿ ತಮ್ಮಲ್ಲಿ ಕ್ಷಮೆಯನ್ನು ಬೇಡಲು ಬಂದಿದ್ದೇನೆ. ತಾವು ಮನ್ನಿಸಬೇಕು. ಹಾಗೆಯೇ, ಇದೋ! ತಾವು ಕೊಟ್ಟ ಖಡ್ಗರತ್ನ. ಇದು ತಮ್ಮ ಬಳಿಯಲ್ಲಿರಬೇಕಾದುದು. ಇದನ್ನು ಒಪ್ಪಿಸಿಕೊಳ್ಳಬೇಕು'

ಆದರೆ ಮನುಷ್ಯನ ಮನಸ್ಸಿನ ಲೋಭಸ್ವಭಾವವನ್ನು ಮಾರ್ಪಡಿಸಲು ಯಾರಿಗೆ ಸಾಧ್ಯ? ಮೊದಲಿನಿಂದ ಶಾಂತವಾಗಿ ಸಮಾಧಾನವಾಗಿ ದಿಟ್ಟವಾಗಿ ಇದ್ದ ಸ್ವರವು ಖಡ್ಗವನ್ನು ಒರೆಯಿಂದ ಸೆಳೆದು ಇಡುವಾಗ ಸ್ವಲ್ಪ ವ್ಯತ್ಯಸ್ತವಾಯಿತು: ಕಂಪನವೆನ್ನಬಹುದಾದಷ್ಟುಮಟ್ಟಿಗೂ ಆಯಿತು. ಮಯೂರನು

ಖಡ್ಗವನ್ನು ಒರೆಯಿಂದ ಸೆಳೆದು ತನ್ನ ಉತ್ತರೀಯದ ಸೆರಗಿನಿಂದ ಒರೆಸಿ ಒಮ್ಮೆ ಕಣ್ಣಿಗೊತ್ತಿಕೊಂಡು ಸಣ್ಣಗೆ ರೆಪ್ಪೆ ಹೊಯ್ಯುವಷ್ಟು ಕಾಲ ಹೆಚ್ಚಾಗಿ ತನ್ನ ಕೈಯಲಿಟ್ಟುಕೊಂಡಿದ್ದು ಯುವರಾಜನ ಮುಂದಿಟ್ಟನು. ಆತನಿಗೂ ಮನಸ್ಸು ವಿಹ್ವಲವಾಯಿತು: 'ವೀರವರ! ಈ ಖಡ್ಗವು ತಮ್ಮಲ್ಲಿಯೇ ಇರಲಿ. ನಮ್ಮಿಬ್ಬರ ಪರಿಚಯವು ಕ್ಷತ್ರಿಯೋಚಿತವಾದ ರೀತಿಯಲ್ಲಿಯೇ ಆಯಿತು. ಆಯುಧೋಪಜೀವಿಗಳಲ್ಲವೇ ಕ್ಷತ್ರಿಯರು! ಖಡ್ಗವು ಹಸ್ತವನ್ನಲಂಕರಿಸಿದರೆ ಅವಮಾನವೇನೂ ಇಲ್ಲವಲ್ಲ!' ಎಂದನು.

ಮಯೂರನು ಉತ್ತರ ಹೇಳಲಿಲ್ಲ.

ಯುವರಾಜನು ಮತ್ತೆ ಹೇಳಿದನು: 'ವೀರಪುಂಗವ! ತಮ್ಮ ಸ್ನೇಹಕ್ಕಾಗಿ ಕಾತರನಾಗಿರುವೆನು. ಯಾವ ಉತ್ತಮ ರಾಜವಂಶವು ತಮ್ಮ ಜನ್ಮದಿಂದ ಅಲಂಕೃತವಾಗಿರುವುದು? ಯಾವ ರಾಜಶ್ರೇಷ್ಠನ ಪೀಳಿಗೆಯು ತಮ್ಮಿಂದ ಭೂಷಿತವಾಗಿರುವುದು? ಯಾವ ಪ್ರಬಲ ರಾಜಕಾರಣಕ್ಕಾಗಿ ನಮ್ಮ ರಾಜಧಾನಿಯಲ್ಲಿ ಗುಪ್ತವೇಷದಿಂದ ಕಾಲಯಾಪನೆ ಮಾಡುತ್ತಿದ್ದಿರಿ? ಅಪ್ಪಣೆಯಾಗಲಿ' ಎಂದನು.

ಮಯೂರನು ಏನೋ ಗಾಢವಾದ ಯೋಚನೆಯಲ್ಲಿ ಮಗ್ನನಾಗಿದ್ದನು. ಯುವರಾಜನ ಕಣ್ಣನೋಟ, ಕಂಠಸ್ವರ, ಮೈಕಟ್ಟು, ಮುಖಭಾವ, ಎಲ್ಲವೂ ಹಿಂದೆ ನೋಡಿದ ಯಾವುದೋ ಒಂದು ರಮಣೀಯಾಕೃತಿ ವಿಶೇಷವನ್ನು ನೆನೆಪಿಗೆ ತಂದು, ಅವನ ಮನಸ್ಸನ್ನು ವಿಹ್ವಲಗೊಳಿಸುತ್ತಲಿದ್ದುವು. ಯಾರೋ ಅವನಿಗೆ ತಿಳಿಯದಂತೆಯೇ ಅವನ ಮನಸ್ಸನ್ನು ಹರಣಮಾಡಿಕೊಂಡು ಹೋಗಿ ಯಾರಿಗೋ ಮಾರಿಬಿಡುತ್ತಿದ್ದಂತೆ ತೋರಿತು. ಅಂತೂ ಅದುವರೆಗೆ ಅಪರಿಚಿತವಾಗಿದ್ದ ಒಂದು ನವೀನ ಭಾವವು ಹೃದಯದಲ್ಲಿ ಉದಯವಾಗಿ ಹೊಸ ಆಸೆಯೊಂದು ಹುಟ್ಟಿ ಎದೆಯನ್ನಲ್ಲಾಡಿಸಿತು. 'ಯಾವ ರಾಜನ ಸ್ನೇಹವು ತನ್ನ ಆಸೆಯನ್ನು ಪೂರಯಿಸುವ ಸಾಧನವಾಗಲಾರದೆ? ಹಾಗಾದರೆ ಇವನ ಗೆಳೆಯನ್ನೇಕೆ ಗಳಿಸಬಾರದು?' ಎನ್ನಿಸಿತು. ಇದುವರೆಗೂ ಹುಡುಗನ ಹುಡುಗಬುದ್ಧಿಯಲ್ಲಿ ತಲಸ್ಪರ್ಶಿಯಾದ ದೀರ್ಘಾಲೋಚನೆಗಳು ಮೂಡುತ್ತಿರಲಿಲ್ಲ. ಈಗ ಮೊದಲಾದುವು. ಬಾನಿಗೆ ಏಣಿ

ಕಟ್ಟಲು ಎದುರಿದ್ದ ಜೊಂಬನ್ನು ಕೌಂಕುಳಿಗಿರುಕುವ ಹೊಸಬುದ್ಧಿಯು ಹುಟ್ಟಿತು.

ಯುವರಾಜನು ಮಯೂರನ ಮನಸ್ಸಿನ ಭಾವವನ್ನು ಗ್ರಹಿಸಲಿಲ್ಲ. ತನ್ನ ಶಿಬಿರಕ್ಕೆ ಬಂದುದರಿಂದ ಆತನ ಮನಸ್ಸು ಹೀಗೆ ಕ್ಷುಬ್ಧನಾಗಿರಬಹುದು ಎಂದು ಭಾವಿಸಿದನು. ಅಪಾರವಾದ ಸೇನೆಯ ನಡುವೆ ತಾನೊಬ್ಬನಾಗಿ ಬಂದುದಕ್ಕೆ ಆತನ ಬಗೆಯು ಒಗರಾಗಿರಬಹುದೆಂದುಕೊಂಡನು. ಆತನಿಗೆ ನಂಬುಗೆಯಾಗುವಂತೆ ನಡೆದುಕೊಳ್ಳಬೇಕೆಂದು ಗೊತ್ತುಮಾಡಿಕೊಂಡನು. ತನ್ನ ವಿಷಯವಾಗಿ ಎಳ್ಳಷ್ಟಾದರೂ ಸಂದೇಹ ಬರದಂತೆ ನೋಡಿಕೊಳ್ಳಬೇಕೆಂದು ನಿರ್ಧರಿಸಿದನು. ತತ್‌ಕ್ಷಣವೇ ಹೇಳಿದನು:

'ತಾವು ಯಾವ ವಿಧದಲ್ಲೂ ಸಂಶಯಪಡಬೇಕಾಗಿಲ್ಲ. ನದಿಯು ನದಿಯನ್ನು ಬೆರೆಯುವಂತೆ ತಮ್ಮ ಹೃದಯವು ನನ್ನ ಹೃದಯದೊಡನೆ ಬೆರೆಯಲಿ. ಧರ್ಮದ ನೆರಳಿನಲ್ಲಿ ದೈವದ ಆಶ್ರಯದಲ್ಲಿ ನಾವಿಬ್ಬರೂ ನಚ್ಚಿನ ಗೆಳೆತನದ ನಲವನ್ನು ಸವಿಯೋಣ'

ಮಯೂರನು ಆತನ ನೀಡಿದ ಕೈಯ್ಗಳನ್ನು ಹಿಡಿದುಕೊಂಡು ಕಾತರನಾಗಿ ವಿಷಣ್ಣಭಾವದಿಂದ ನಿಧಾನವಾಗಿ ನುಡಿದನು: 'ಯುವರಾಜ! ಉದಾರ ಹೃದಯರು ತಾವು ಸ್ನೇಹಭಿಕ್ಷೆಯನ್ನು ದಯಪಾಲಿಸುತ್ತಿರುವಿರಿ. ಆದರೆ ನಾನು ಯಾರೆಂಬುದನ್ನು ತಾವು ಕಾಣಿರಿ. ಹೀನ ದೀನನು ನಾನು, ತಾವು ಸಮ್ರಾಜರಾಗುವವರು ನನಗೂ ತಮಗೂ ಇರುವ ಅಂತರವು ಪರಮಾಣುವಿಗೂ ಪರ್ವತಕ್ಕೂ ಇರುವಷ್ಟು. ಸ್ನೇಹವು ಸಮಾನ ಧರ್ಮಿಗಳಲ್ಲಿ ಮಾತ್ರವೇ ಅಲ್ಲವೇ ಶೋಭಿಸುವುದು?'

ಕುಮಾರವಿಷ್ಣುವು ಎಳೆಬೆಳಕನ್ನು ಪಸರಿಸುವ ಸುಲಿಪಲ್ಗಳನ್ನು ಸಣ್ಣಗೆ ತೋರುವ ಮುಸಿನಗೆಯನ್ನು ನಕ್ಕು, 'ಕುಮಾರರಿಗೆ ತಮ್ಮ ಪರಿಚಯವನ್ನು ಹೇಳಿಕೊಳ್ಳಲು ಇಷ್ಟವಿಲ್ಲ. ಚಿಂತೆಯಿಲ್ಲ. ಕಾಪಟ್ಯವು ಕೊನೆಯಾಗಲೆಂದು, ವಿಶ್ವಾಸವು ವರ್ಧಿಸಲೆಂದು, ನಾನರಿತುದನ್ನು ನಾನು ಹೇಳುವೆನು. ತಾವು ಕದಂಬರಾಜಕುಮಾರರು; ಬನವಾಸಿಯರಸರು; ಚಂದ್ರ

ವರ್ಮರ ಔರಸಪುತ್ರರು; ಕಾದಿದ್ದು ಪಲ್ಲವರಿಗೆ ಮಣ್ಣು ಮುಕ್ಕಿಸಬೇಕೆಂದು ಹಟ ತೊಟ್ಟಿರುವವರು. ಅಲ್ಲವೆ ?' ಎಂದನು.

ಮಯೂರನು ಬಿರುಗಣ್ಣಿನಿಂದ ಬೆರಗುವಟ್ಟಂತೆ ನೋಡುತ್ತಿದ್ದನು. ಅಷ್ಟೆ! ನೋಟಕ್ಕೆ ಎದುರು ಎಲ್ಲವೂ ಇದ್ದರೂ ನೋಟವು ಮಾತ್ರ ಏನನ್ನೂ ನೋಡುತ್ತಿರಲಿಲ್ಲ. ಬಗೆಯು ಏನೋ ಗುಣಿಸುತ್ತಿದ್ದಿತು. ನಾಲಗೆಗೆ ಆಡುವುದಕ್ಕೆ ಮಾತಿಲ್ಲದಿದ್ದಿತು.

ತಟ್ಟನೆ ನಿದ್ದೆಯಿಂದ ಎಚ್ಚತ್ತವನಂತೆ ಎದ್ದು, 'ಯುವರಾಜ! ಇದನ್ನು ತಿಳಿದು ತಿಳಿದೂ ನನ್ನೊಡನೆ ಗೆಳೆತನವನ್ನು ಬಯಸುವಿರಾ ?' ಎಂದನು.

ರಾಜಕುಮಾರನು ಕ್ಷುಬ್ಧನಾಗದೆ ಕಾತರನಾಗದೆ ವಿಹ್ವಲನಾಗದೆ ಸ್ಥಿರವಾಗಿ ಹೇಳಿದನು; 'ಏತಕ್ಕಾಗಬಾರದು ?'

'ನಮ ನಮಗೆ ಯುದ್ಧವಾಗುವ ಸಂಭವವಿದ್ದರೆ ?'

'ಅಂತಹ ಸಂಭವವುಂಟೆಂಬುದನ್ನು ನಾನು ಬಲ್ಲೆ. ಆಗುವುದು ಎಂಬುದನ್ನೂ ಗೊತ್ತುಮಾಡಿಕೊಂಡಿದ್ದೇನೆ. ಅಂತಹ ದುಷ್ಕಾಲ ಬಂದಾಗ ಆದ ಮಟ್ಟಿಗೂ ಪ್ರಜಾಕ್ಷೋಭವನ್ನು ಕಡಿಮೆಮಾಡಬೇಕೆಂಬ ಉದ್ದೇಶದಿಂದ, ಸಾಧ್ಯವಾದರೆ ಯುದ್ಧವನ್ನು ನಿಲ್ಲಿಸುವುದಕ್ಕಾಗಿ, ನಾನು ಮಾಡುತ್ತಿರುವ ಯತ್ನವಿದು. ಅಲ್ಲದೆ ರಾಜಕುಮಾರ! ಪಲ್ಲವರಿಗೂ ಕದಂಬರಿಗೂ ಜಗಳವಾದರೆ ಆ ರಾಜ್ಯದವರೂ ಈ ರಾಜ್ಯದವರೂ ಏಕೆ ನಷ್ಟಪಡಬೇಕು? ಅದಕ್ಕಾಗಿ ಈ ಸ್ನೇಹಭಿಕ್ಷೆಯನ್ನು ತಮ್ಮಲ್ಲಿ ಯಾಚಿಸುತ್ತಿರುವೆನು'

'ಯುವರಾಜ! ನಾನು ರಾಜಕುಮಾರನು ಹೌದೋ ಅಲ್ಲವೋ ಅದಂತಿರಲಿ. ಅಂತೂ ನಾನೂ ಲುಬ್ಧನಾಗಿ ತಮ್ಮ ಸ್ನೇಹವನ್ನು ಯಾಚಿಸುತ್ತೇನೆ. ತಾವೂ ಭಿಕ್ಷೆನೀಡಲು ಸಿದ್ಧರಾಗಿದ್ದೀರಿ. ನಮ್ಮಿಬ್ಬರ ಸ್ನೇಹದಿಂದ ಮುಂದಿನ ವಿಪ್ಲವವು ಮಾಣುವುದಾದರೆ, ಅಗತ್ಯವೂ ಆಗಲಿ. ಆದರೆ—'

ಯುವರಾಜನು ಕಾತರನಾಗಿ, 'ಆದರೆ—ಏನು ?' ಎಂದು ಕೇಳಿದನು.

ಮಯೂರನು ತಡೆತಡೆದು ಅನಿಷ್ಟ ಸಮಾಚಾರವನ್ನು ಹೇಳುವಾಗ ಸ್ವಾಭಾವಿಕವಾದ ಸಂಕೋಚದಿಂದ ಹೇಳಿದನು: 'ಯುವರಾಜ! ಒಂದು

ವೇಳೆ ನನ್ನ ಹೃದಯವು ದ್ವೇಷದೂಷಿತವಾಗಿದ್ದರೆ, ನನ್ನ ಮನಸ್ಸು ವಿವಶವಾಗಿ ಪ್ರತಿಕ್ರಿಯೆ ಮಾಡಬೇಕೆಂದು ಸಂಚುಮಾಡುತ್ತಿದ್ದರೆ, ತಮ್ಮನ್ನು ಸೋಲಿಸುವುದೇ ಜೀವನದ ಪರಮ ಧ್ಯೇಯವೆಂದುಕೊಂಡಿದ್ದರೆ, ಆಗಲೂ ನನ್ನೊಡನೆ ಸ್ನೇಹದಿಂದಿರುವಿರಾ?'

——o——

## ಹನ್ನೆರಡನೆಯ ಪ್ರಕರಣ

ಯುವರಾಜನು ಧೀರನಾಗಿರಬೇಕೆಂದು ಮಾಡಿದ ಯತ್ನವು ಮೊದಮೊದಲು ವಿಫಲವಾಯಿತು; ಎಳನಗೆಯಿಂದ ಕಳೆಯೇರಿದ್ದ ಮುಖವು ಸ್ವಲ್ಪ ಗಂಭೀರವಾಯಿತು: ಕೊನೆಗೆ ಸಮಾಧಾನದ ನಗುವನ್ನು ನಕ್ಕು ಹೇಳಿದನು: 'ಸ್ನೇಹವು ಸಮಾನ ಧರ್ಮಿಗಳಲ್ಲಿ ಶೋಭಿಸುವುದೆಂದು ತಾವೇ ಹೇಳಿದಿರಿ. ದ್ವೇಷವೂ ಹಾಗೆಯೇ ವಿಧರ್ಮಿಗಳಲ್ಲಿಯೇ ವರ್ಧಿಸುವುದು. ರಾಜಪುತ್ರರೇ! ದ್ವೇಷವು ವೈಷಮ್ಯ ಮೂಲವು. ಆ ವೈಷಮ್ಯವನ್ನು ತೊಡೆದುಬಿಡೋಣ; ನಾವಿಬ್ಬರೂ ಸಮರಾಗಿ ಮೆರೆಯೋಣ. ಅಲ್ಲದೆ ನಮ್ಮನ್ನು ಸೋಲಿಸುವುದೇ ಜೀವನದ ಪರಮಧ್ಯೇಯವೆಂದೂ ಅಪ್ಪಣೆಯಾಯಿತು. ಸೋಲುಗೆಲುಗಳನ್ನು ನಾವು ಚೆನ್ನಾಗಿ ತಿಳಿದುಕೊಂಡಿರುವೆವೇ? ನನಗೇನೋ ಇಲ್ಲವೆನ್ನಿಸುವುದು. ಹಾಗೆಯೇ ಯೋಚಿಸೋಣವಾಗಲಿ. ಗೆಲುವೆಂದರೆ ಸೋಲು ಸೋಲೆಂದರೆ ಗೆಲುವಲ್ಲವೆ? ನಮ್ಮನ್ನು ಸೋಲಿಸಬೇಕೆನ್ನೋಣವಾಯಿತು. ನಾವೇ ತಮ್ಮ ಕೆಳೆಯನ್ನು ಎರೆಯುತ್ತಿರಲು ಅದು ಸೋಲನ್ನು ಒಪ್ಪಿಕೊಂಡಂತೆಯೇ ಅಲ್ಲವೇನು? ಅಥವಾ ಗೆಲುವೆಂದರೆ ಕಳದಲ್ಲಿ ಬಿತ್ತಿ ಕಾಳೆಗವೆಂಬ ಬೇಸಾಯಮಾಡಿ ರಕ್ತವನ್ನು ಹೊಯ್ದು ಬೆಳೆಯಿಸಿ, ಕಣ್ಣೀರಿನ ಗೋಳಿನ ಕಣಮಾಡಿ, ಕಣಜದಲ್ಲಿ ತುಂಬಿಕೊಳ್ಳುವ ವಸ್ತುವಿಶೇಷವೇನು? ಆ ಗೆಲುವೆನ್ನುವುದು ರಣರಂಗದಲ್ಲಿ ಎರಡೂ ಕಡೆಯ ಗಂಡುಗಲಿಗಳ ತಂಡವನ್ನು ಬಲಿಗೊಟ್ಟು ಆರಾಧಿಸಿ ಒಲಿಸಿಕೊಳ್ಳಬೇಕಾದ ದೇವತೆಯೇನು? ರಾಜಕುಮಾರ! ಬವರಕ್ಕೆದುರಾಗದೆ ಹೆದರಿದ ಹೇಡಿಯ ನುಡಿಗಳಿವಲ್ಲ. ಹುರಿಗೊಂಡು ಹಣ್ಣಿದ ಹುಮ್ಮಸ್ಸಿನಿಂದ ಕನಲಿದ ಕಡಲಿನಂತೆ ಮೊರೆಯುತ್ತ, 'ಮಾರಿಯು ಅಡ್ಡಯಿ

ಸಿದರೂ ಮುಡಿಗೊಂಡು ಕಡಿಯುವೆವು' ಎಂಬ ಕೆಚ್ಚೆದೆಯ ಗಂಡುಗಲಿಗಳ ತಂಡತಂಡವನ್ನು ಕೈಯಾಟದಿಂದ ಕಣ್ಣುಸನ್ನೆಯಿಂದ ನಡೆಯಿಸುತ್ತ ಕದನ ಭೂಮಿಗೆ ನಡೆದು, ಮಾರ್ಮಲೆತ ಹಗೆಗಳ ಹಿಂಡನ್ನು ತುಂಡುತುಂಡಾಗಿ ಕತ್ತರಿಸಿ ಹೊಟ್ಟನಂತೆ ಗಾಳಿಗೆ ತೂರಲು ನಾನು ಸಿದ್ಧನಾಗಿಲ್ಲವೆಂದಲ್ಲ. ಆದರೆ ಯೋಚಿಸೋಣವಾಗಲಿ. ಗೆದ್ದವನ ಗೆಲುವಿನ ಬಡಿವಾರವನ್ನೂ ಸೋತವನ ಸೋಲಿನ ಗೋಳನ್ನೂ ತೂಕಮಾಡೋಣವಾಗಲಿ. ಅಲ್ಲದೆ, ಗೆಲುವು ತಾನೇ ಸುಮ್ಮನೆ ಬಂದಿರುವುದೇ? ಎಷ್ಟು ಮಂದಿಯನ್ನು, ಎಷ್ಟು ತಂದೆಗಳನ್ನು, ಎಷ್ಟು ಮಕ್ಕಳನ್ನು, ಎಷ್ಟು ಒಡಹುಟ್ಟುಗಳನ್ನು, ಎಷ್ಟು ಗೆಳೆಯರನ್ನು, ಎಷ್ಟು ನಂಟರನ್ನು, ಎಷ್ಟು ಗಂಡಂದಿರನ್ನು ಬಲಿಗೊಟ್ಟು ಆ ಗೆಲುವನ್ನು ಪಡೆಯುವುದು? ಎಷ್ಟು ಜನರು ತಬ್ಬಲಿಗಳಾಗುವರು? ಎಷ್ಟು ಜನರು ತಮ್ಮ ಕುರುಡುಬಾಳಿನ ಊರುಗೋಲೊಂದನ್ನು ಕಳೆದುಕೊಂಡು ಬೀದಿಯ ತಿರುಕರಾಗುವರು? ಎಷ್ಟು ಮಡದಿಯರು ಗಂಡನನ್ನು ತಿಂದು ಕೊಂಡ ಮುಂಡೆಯರಾಗುವರು? ಎಷ್ಟು ತಾಯಿಯರು ತಮ್ಮ ಕಂದರನ್ನು ಕಳೆದುಕೊಂಡು ಕಲ್ಲು ಕರಗುವಂತೆ ಅಳುವರು? ಅದನ್ನು ಯೋಚಿಸೋಣ ವಾಗಲಿ. ರಾಜಪುತ್ರ! ಆದರೆ ಕೆಲವು ಸಲ ಯುದ್ಧವನ್ನು ಮಾಡಲೇಬೇಕು. ಧರ್ಮಕ್ಕಾಗಿ, ದೈವಕ್ಕಾಗಿ, ದೇಶಕ್ಕಾಗಿ, ವಿದ್ರೋಹಿಯ ವಿಧ್ವಂಸನಕ್ಕಾಗಿ ಆಗುವ ಆಗಬೇಕಾದ ಯುದ್ಧವನ್ನು ಮಾಡದಿರುವುದು ಪಾಪ! ತನ್ನ ಸ್ವಂತ ಆಶೆಯ ತೃಪ್ತಿಗಾಗಿ, ತನ್ನದೊಂದು ಹಂಬಲಕ್ಕಾಗಿ, ಹುಚ್ಚಿಗಾಗಿ, ಎದೆಗಿಚ್ಚನ್ನು ಆರಿಸಿಕೊಳ್ಳುವುದಕ್ಕಾಗಿ, ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಮಾಡುವ ಯುದ್ಧವು ಪರಮಪಾಪ! ಬೀದಿಯಲ್ಲಿಬ್ಬರು ಕಚ್ಚಾಡಿ ಕಾದಾಡಿ ಒಬ್ಬನನ್ನೊಬ್ಬನು ಕೊಂದರೆ ಅವನನ್ನು ಘಾತಕಿಯೆಂದು ಶಿಕ್ಷಿಸುವುದಿಲ್ಲವೇ ಅರಸರು? ಹೀಗಿರಲು ತಮ್ಮಾಸೆಗಾಗಿ ಕಾದಾಡಿ ನಾಡುನಾಡಿನ ಪ್ರಜೆಗಳ ನ್ನೆಲ್ಲಾ ಮಾರಿರೋಗದಂತೆ ತುತ್ತುಗೊಳ್ಳುವ ಅರಸರಿವರು ಮಾತ್ರ ಹೇಗೆ ತಾನೇ ಶಿಕ್ಷಾರ್ಹರಲ್ಲ? ಮನೆಗೊಬ್ಬನನ್ನು ಮುರಿದುಕೊಂಡು ಮನೆಮನೆ ಯಲ್ಲೂ ಎಳ್ಳುಹಬ್ಬ ಮಾಡಿಸುವ ಮಾರಿಗೆ ಶಿಕ್ಷೆಯಿಲ್ಲವೋ? ಹಿಂದಿನ ಪುಣ್ಯದಿಂದ ಪಡೆದ ಪದವಿಯ ದುರುಪಯೋಗವಲ್ಲವೋ ಅದು? ಅಧಿಕಾರ ವನ್ನು ದುರುಪಯೋಗಿಸಿದರೆ ಶಿಕ್ಷೆಯಿಲ್ಲವೋ? ಹಾಗೆಯೇ ಅರಸರಾದ

ಮಾತ್ರಕ್ಕೆ ದುರುಳತನಕ್ಕೆ ಶಿಕ್ಷೆಬೇಡವೋ? ರಾಜಪುತ್ರ! ಈ ಬಗೆಯಿಂದ ನಾನು ತಮ್ಮಲ್ಲಿ ಸ್ನೇಹಯಾಚನೆ ಮಾಡಿದುದು. ಅಂದು ನಮನಮಗೆ ಕೈಗೂಡಿದಾಗ ತಮ್ಮ ಮೈ ಬತ್ತಲೆಯಾಗಿದ್ದಿತು. ಅಂಗಾಂಗಗಳೆಲ್ಲವೂ ಸ್ಫುಟವಾಗಿ ಕಾಣುತ್ತಿದ್ದುವು. ತಮ್ಮ ಮೈಕಟ್ಟನ್ನೂ ಕೈಚಳಕವನ್ನೂ ಕಂಡು ನನ್ನ ಮನಸ್ಸು ತಮ್ಮದಾಯಿತು. ನನ್ನನ್ನು ಕಡಿದೆರಡು ತುಂಡುಮಾಡಲು ತಮಗೆ ಸಮಯ ಸಿಕ್ಕಿದ್ದಿತು. ಆದರೂ ಉದಾರರಾಗಿ ಸುಮ್ಮನಾದಿರಿ. ಅದೇ ಔದಾರ್ಯವನ್ನು ನಾವು ವೈರಿಗಳೆನಿಸಿಕೊಂಡವರಲ್ಲಿಯೂ ತೋರಲು ಸಾಧ್ಯವಿಲ್ಲವೇ? ಸ್ನೇಹಕ್ಕಾಗಿ ಸ್ನೇಹದಿಂದ ಸೋತು ಸೋಲಿಸಿ ಹಗೆಗಳ ಬಲಿತ ಹಗೆಯನ್ನು ಬುಡಮುಟ್ಟ ತೊಡೆದುಬಿಡಲು ಸಾಧ್ಯವಿಲ್ಲವೇ? ಗೆಲ್ಲ ಬೇಕೆಂದು ಗುಂಪುಕಟ್ಟಿ ಹಗೆಯನ್ನಡಗಿಸುವೆನೆಂದು ಹೋರಾಡಿ ಅವನ ಹಗೆಯನ್ನು ಇನ್ನೂ ಬಲಿಯಿಸುವುದೊಳ್ಳಿತೋ? ಗೆಳೆತನದ ಸರಿಸೋನೆ ಯಿಂದ ಎದೆಯನ್ನು ತಣಿಸಿ ಒಲುಮೆಯನ್ನು ಬಿತ್ತಿ ಕೂರ್ಮೆಯ ಬೆಳೆಯನ್ನು ಬೆಳೆಯುವುದೊಳ್ಳಿತೋ? ತಾವೇ ಅಪ್ಪಣೆ ಕೊಡಿಸೋಣವಾಗಲಿ'

ಮಯೂರನು ಏನೂ ಆಡದೆ ಸುಮ್ಮನಿದ್ದನು. ಅರಸು ಮಗನ ಅಮೋಘವಾದ ಅಕೃತ್ರಿಮವಾದ ಅಂತರಂಗದ ಯೋಚನೆಗಳನ್ನು ಕೇಳಿ ಬೆರಗಾಗಿ ಹೋದನು. ಏನು ಹೇಳಬೇಕೆಂಬುದು ತಟ್ಟನೆ ಹೊಳೆಯಲಿಲ್ಲ. ಒಂದು ಗಳಿಗೆ ತಲೆತಗ್ಗಿಸಿಕೊಂಡು ನೆಲವನ್ನು ನೋಡುತ್ತಿದ್ದು ತಟ್ಟನೆದ್ದು ವಂದಿಸಿ, 'ಯುವರಾಜ! ನನ್ನೆದೆಯಲ್ಲಿ ಧಗಧಗನೆ ಉರಿಯುತ್ತಿರುವ ಸೇಡಿನ ಕಿಚ್ಚನ್ನು ನೊಂದಿಸುವ ಹೊಸಹಾದಿಯೊಂದನ್ನು ತಾವಿಂದು ತೋರಿದಿರಿ. ತಮ್ಮ ಉಪದೇಶದಂತೆಯೇ ನಡೆಯುವೆನೆಂಬುದನ್ನು ಮಾತ್ರ ಹೇಳಲಾರೆ. ಆದರೆ ನಿಜವಾಗಿಯೂ ಆ ಮಾರ್ಗದಲ್ಲಿ ನಡೆಯಲು ಹೆಣಗುವೆನು. ನನ್ನನ್ನು ತಮ್ಮ ಗೆಳೆಯನೆಂದಲ್ಲ, ಶಿಷ್ಯನೆಂದು ಅಂಗೀಕರಿಸೋಣವಾಗಲಿ' ಎಂದು ಮುಗಿದ ಕೈಗಳನ್ನು ಮುಂದೆ ಚಾಚಿದನು.

ಯುವರಾಜನ ಮುಖವರಳಿತು. ತೃಪ್ತಿಯ ಭರದಲ್ಲಿ ಸಂತೋಷದ ಆವೇಶದಲ್ಲಿ ಮಯೂರನನ್ನು ಬರಸೆಳೆದಪ್ಪಿಕೊಂಡನು. ಮಯೂರನೂ ಪ್ರತ್ಯಾಲಿಂಗನವನ್ನಿತ್ತು ಯುವರಾಜರನ್ನು ಕುರಿತು, 'ಮನ್ನಿಸಬೇಕು. ಅಪ್ಪಣೆಯಾದರೆ ಹೊರಡುವೆನು' ಎಂದನು.

ಯುವರಾಜನು 'ಈ ಇರುಳನ್ನಿಲ್ಲಿಯೇ ಕಳೆದು ನಾಳಿನ ದಿನ ಉದಯ ವಾದ ಮೇಲೆ ಪ್ರಯಾಣ ಮಾಡಬಹುದಲ್ಲ!' ಎಂದನು. ಮಯೂರನು ಒಪ್ಪಲಿಲ್ಲ. ಆತನು ಮತ್ತೆಯೂ ಬಲವಂತ ಮಾಡಿನೋಡಿದನು. ಕೊನೆಗೆ ಮಯೂರನು ಹೊರಟು ಹೋಗುವುದು ಖಂಡಿತವಾದಮೇಲೆ ಮತ್ತೆ ಆತನ ಕೈ ಹಿಡಿದುಕೊಂಡು, 'ರಾಜಪುತ್ರ! ನಾನೊಂದು ಸಾಹಸ ಕಾರ್ಯವನ್ನು ಮಾಡಬೇಕೆಂದಿರುವೆನು, ನೆರವಾಗುವಿರಾ?' ಎಂದು ಕೇಳಿದನು.

ಮಯೂರನು 'ಅಪ್ಪಣೆಯಾಗಲಿ. ಸಿದ್ಧವಾಗಿದ್ದೇನೆ' ಎಂದನು.

ಯುವರಾಜನು 'ತಮ್ಮನ್ನು ಸಾವಿರ ಕುದುರೆಗಳ ಪಡೆವಳರನ್ನಾಗಿ ನೇಮಕಮಾಡಬೇಕೆಂದು ನಾನು ಸಮ್ರಾಜರನ್ನು ಪ್ರಾರ್ಥಿಸಬೇಕೆಂದಿದ್ದೇನೆ. ಅದು ತಮಗೂ ಸಮ್ಮತವಷ್ಟೆ!' ಎಂದು ಕೇಳಿದನು. ನುಡಿಯಲ್ಲಿ 'ನಾನು ಅರಸು ನೀನುಆಳು' ಎಂಬ ಭಾವವಿರಲಿಲ್ಲ; ಮೈತ್ರಿಯು ತಾನೇತಾನಾಗಿದ್ದಿತು.

ಮಯೂರನು ಏನು ಹೇಳಬೇಕು? 'ಸಮ್ರಾಜನ ಕೈಕೆಳಗಿನ ಮುಖ್ಯಾಧಿಕಾರಗಳಲ್ಲಿ ಒಂದು ತಾನಾಗಿ ಬಂದಿದೆ. ಒಲಿದು ಬಂದ ಅದೃಷ್ಟ ವನ್ನು, ಮನೆಗೆ ಬಂದ ಮಹಾಲಕ್ಷ್ಮಿಯನ್ನು ದೂಡಿ ಬಿಡುವುದೇ? ಆಗ ದಾಗದು' ಎಂದಿತು ಒಂದು ಮನಸ್ಸು. 'ಆದರೇನು? ಮುಂದಿನ ಕಾರ್ಯ (ಏನೆಂಬುದು ಅವನಿಗೇ ತಿಳಿದಿಲ್ಲ) ಕೆಡುವುದು. ಬೇಡ ಬೇಡ' ಎಂದಿತು ಇನ್ನೊಂದು ಮನಸ್ಸು. ಕೊನೆಗೆ ಆದುದಾಗಲೆಂದು, 'ಯುವರಾಜರು ಮನ್ನಿಸಬೇಕು. ನಾನು ತಿಳಿಯಬೇಕಾದ ಅಂಶವೊಂದಿದೆ. ಮಾಡಬೇ ಕಾದ ಕಾರ್ಯವೊಂದಿದೆ. ಎರಡೂ ಆದ ಮೇಲೆ ನಾನೇ ಬರುವೆನು. ತಮ್ಮಿಂದ ಒಂದು ಮಹೋಪಕಾರವಾಗಬೇಕಾದುದೂ ಇದೆ; ನಾನು ಬರು ತ್ತೇನೆ. ಸದ್ಯಕ್ಕೆ ಮನ್ನಿಸೋಣವಾಗಲಿ' ಎಂದನು.

ಯುವರಾಜನು ಈ ಅದ್ಭುತ ಪ್ರಾಣಿಯನ್ನು ಹಿಡಿಯುವ ಬಲೆಯು ತನ್ನಲ್ಲುಂಟೆಂದುಕೊಂಡಿದ್ದನು. ಆತನೂ ಮನುಷ್ಯ ಸ್ವಭಾವವನ್ನು ಬಲ್ಲನು. ಆದರೂ ಇಷ್ಟಕ್ಕೆ ಸಿದ್ಧನಾಗಿರಲಿಲ್ಲ. ಅರಸು ಮಗನಿಗೆ ಸುತ್ತುಮುತ್ತಣ ವರ ಲೋಭವು ಒಡೆದುಕಂಡು ಪ್ರಪಂಚವೆಲ್ಲವೂ ಅದೇ ಎನ್ನಿಸಿದ್ದಿತು.

ಆತನು ಬೇಕೆಂಬುದನ್ನು ಬಲ್ಲಷ್ಟು ಬೇಡವೆಂಬುದನ್ನು ಕಂಡಿರಲಿಲ್ಲ. ಅಚ್ಚರಿಯಾಯಿತು. ಅಲ್ಲದೆ ಮಯೂರನನ್ನು ಕಾಲಾನುಕಾಲದಲ್ಲಿ ತನ್ನ ಮಿತ್ರರಲ್ಲಿ ಒಬ್ಬನನ್ನು ಮಾಡಿಕೊಂಡು ಸಮಸಮವಾಗಿ ಮೆರೆಯಬೇಕೆಂದು ಕೊಂಡಿದ್ದ ತನ್ನ ಆಶೆಯೂ ವಿಫಲವಾಯಿತೆಂದು ಮನನೊಂದನು. 'ಶಿಷ್ಯನೆಂದು ಅಂಗೀಕರಿಸೋಣವಾಗಲಿ' ಎಂದು ಕೈಮುಗಿದವನು ಒಡೆತನದ ಪಟ್ಟವನ್ನು ಬೇಡವೆಂದು ದೂಡುವನೆಂದು ಆತನು ಬಗೆದಿರಲಿಲ್ಲ. 'ದೊರೆತರೆ ಸಾಕೆಂದು ಎಲ್ಲರೂ ಬಾಯಿ ಬಾಯಿ ಬಿಡುವ ಪದವಿಯು ತಾನಾಗಿ ಬಂದರೂ ಬೇಡವೆಂದು ದೂರವಾಗುವ ಈತನಿಗಿನ್ನೇನು ಬೇಕಾದೀತು?' ಎಂದು ಹುಡುಕಿದನು. ಏನೂ ತೋರಲಿಲ್ಲ.

ಕೊನೆಗೆ, 'ಹೋಗಲಿ! ನಮ್ಮ ನಮ್ಮ ಹೊಸ ಗೆಳೆತನದ ಗುರುತಾಗಿ ನಡುವಿನಲ್ಲಿ ನನ್ನ ಪಟ್ಟಾಕತ್ತಿಯಿರುವಂತೆ ಬೆರಳಲ್ಲಿ ಈ ಉಂಗುರವಿರಲಿ' ಎಂದು ತನ್ನ ಬೆರಳಿನಲ್ಲಿದ್ದ ಹರಳುಂಗುರವನ್ನು ತೆಗೆದು ಮಯೂರನ ಬೆರಳಿಗಿಟ್ಟನು. ಮಯೂರನು ಬೇಡವೆನ್ನಲಿಲ್ಲ.

ಯುವರಾಜನು ಬಾಗಲಿನ ಪ್ರಹರಿಯನ್ನು ಕರೆದು ಏನೋ ಹೇಳಿದನು. ಉತ್ತರಕ್ಷಣದಲ್ಲಿಯೇ ಇಬ್ಬರು ಸುಸಜ್ಜಿತರಾದ ಯೋಧರು ಬಂದು ಯುವರಾಜನಿಗೆ ನಮಸ್ಕಾರ ಮಾಡಿದರು. ಆತನು ಅವರನ್ನು ಕುರಿತು, 'ನೀವು ಇವರೊಡನೆ ಹೋಗತಕ್ಕದು! ನಮ್ಮವರು ಯಾರೂ ಇವರಿಗೆ ಯಾವ ತೆರದ ಅಡಚಣೆಯನ್ನೂ ಮಾಡಕೂಡದು!! ಇದು ನಮ್ಮ ಕಟ್ಟಪ್ಪಣೆ' ಎಂದನು.

ಯೋಧರು ರಾಜಾಜ್ಞೆಯನ್ನು ವಹಿಸಿ ಮುಂದೆ ನಡೆದರು. ಮಯೂರನು ಯುವರಾಜನನ್ನು ಬೀಳ್ಕೊಂಡು ಅವರ ಹಿಂದೆ ಹೋದನು.

———o———

## ಹದಿಮೂರನೆಯ ಪ್ರಕರಣ

ತಿಂಗಳು ಚೆನ್ನಾಗಿ ಬೆಳಗುತ್ತಿದೆ. ಎಲ್ಲೆಲ್ಲಿ ನೋಡಿದರೂ ಸತ್ಪುರುಷರ ಮನಸ್ಸಿನ ಹಾಗೆ ನಿರ್ಮಲವಾಗಿ, ಎಳಹರೆಯದ ಹುಡುಗಿಯರ ಮುಸಿಮುಸಿ ನಗುವಿನ ಹಾಗೆ ಸೊಗಸಾಗಿ, ಹೊಸಜಾಜಿಯ ಹೂವಿನ ವಾಸನೆಯ ಹಾಗೆ ಹಿತವಾಗಿ, ಸದ್ದಿಲ್ಲದೆ ಸುರಿಯುತ್ತಿರುವ ಹಾಲಿನ ಮಳೆಯ ಹಾಗೆ ಚೆಲುವಾಗಿರುವ ಬೆಳದಿಂಗಳು. ಅಲ್ಲಲ್ಲಿ ದುರುಳರ ಚಿತ್ತದಲ್ಲಿ ಎಡಬಿಡದೆ ಮೂಡುತ್ತಿರುವ ಸಂದೇಹಗಳಂತೆ ವ್ಯಕ್ತಾವ್ಯಕ್ತವಾಗಿ ಕಾಣುತ್ತಿರುವ ನೆರಳುಗಳು. ಮರಗಳ ಸುಯ್ಯ್ ಸುಯ್ಯೆಂಬ ಸದ್ದು ಬಿಟ್ಟರೆ, ಆಗಾಗ ಅಲ್ಲೊಂದುಸಲ ಇಲ್ಲೊಂದು ಸಲ ಕೇಳುವ ಹರಿಯುವ ಹಾವಿನ, ಓಡುವ ಇಲಿಯ, ಚಿಗಿಯುವ ಮೊಲದ, ಸದ್ದುಗಳನ್ನುಳಿದರೆ, ನಿಶ್ಶಬ್ದತೆಯ ಸಾಮ್ರಾಜ್ಯವು ನಿರುಪಾಧಿಕವಾಗಿ ನೆಲಸಿದ್ದಿತೆಂದು ಧಾರಾಳವಾಗಿ ಹೇಳಬಹುದು: ಅಥವಾ ವನದೇವಿಯು ಮೌನ ಮುದ್ರೆಯ ಬೆಡಗಿನ ನರ್ತನದಿಂದ ತನ್ನ ಭಾವವನ್ನು ಪ್ರಕಟಿಸುತ್ತಿದ್ದಳೆನ್ನಬಹುದು.

ಆ ಕಾಡಿನಲ್ಲಿ ದಟ್ಟವಾಗಿ ಬೆಳೆದು ಪೊದೆಗಟ್ಟಿಕೊಂಡಿರುವ ಮರಗಳ ಒಂದು ಗುಂಪಿನಲ್ಲಿ ಎರಡು ಕುದುರೆಗಳು, ಒಬ್ಬ ಹರೆಯದ ಕಟ್ಟಾಳು. ನೋಡಿದರೆ ಬಲು ಹೊತ್ತಿನಿಂದ ಕಾದು ಕಾದು ಬೇಸತ್ತವನಂತೆ ಕಾಣುತ್ತಾನೆ. ಹೊತ್ತುಹೋಗದೆಂದು ಬೇಸರವಿರಲಾರದು. ಹಾಗಿದ್ದರೆ ಅವನು ಅಷ್ಟು ನಿಶ್ಶಬ್ದವಾಗಿ ಏನು ಸದ್ದಾದರೆ ಏನು ಅನರ್ಥವೋ ಎಂದು ಸುಮ್ಮನೆ ಇರುವಂತೆ ಇರುತ್ತಿರಲಿಲ್ಲ.

ಅವನ ಮುಖದ ಮೇಲೆ ತೋರುತ್ತಿದ್ದ ಬೇಸರವು ಬರಬರುತ್ತ ಸಂಶಯವಾಯಿತು. 'ಆತನನ್ನು ಒಬ್ಬನನ್ನೇ ಕಳುಹಿಸಬಾರದಾಗಿದ್ದಿತು. ತುಂಬಿದ ಕಟಕದ ನಡುವೆ ಒಬ್ಬನನ್ನೇ ಕಳುಹಿಸಿದುದು ಮಾರಿಗಳ ಗುಂಪಿಗೆ ಮರಿಕುರಿಯನ್ನು ಕಳುಹಿಸಿದಂತಾಯಿತೋ ಏನೋ? ನಾನಾದರೂ ಜೊತೆಯಲ್ಲಿ ಏಕೆ ಹೋಗಲಿಲ್ಲ? ಏನಾದರೂ ಅನರ್ಥವಾದರೆ ಏನು ಗತಿ? ಆ ಮೇಲೆ ಎಲ್ಲರಿಗೂ ಮೋರೆ ತೋರಿಸುವುದು ಹೇಗೆ?' ಎಂದು ಭೀತಿಗೊಂಡು ಕಾತರನಾದನು.

ಇನ್ನೂ ಅಷ್ಟು ಹೊತ್ತಾಯಿತು. ಕಾಡೆಲ್ಲವೂ ಎಂದಿನಂತೆ ನಿಶ್ಶಬ್ದವಾಗಿಯೇ ಇದೆ. ಯುವಕನು ಕಿವಿಗೊಟ್ಟು ಆಲಿಸಿ ಕೇಳಿದನು. ಏನೂ ಸದ್ದಿಲ್ಲ. ಎಲ್ಲೊಂದು ಒಣಕಲು ಎಲೆಯ ಮರ್ಮರವು ಕೇಳಿದರೂ 'ಬಂದನೋ?' ಎಂದುಕೊಳ್ಳುವನು. ದೂರದ ಯಾವುದೋ ಮರದಮೇಲೆ ಯಾವುದೋ ಒಂದು ಹಕ್ಕಿಯು ಏಕೋ ರೆಕ್ಕೆಯನ್ನು ಒದರಿಕೊಂಡರೆ ಇವನತ್ತಕಡೆಗೆ ಕಿವಿಗೊಟ್ಟು ಕೇಳುವನು. ಮತ್ತೆಲ್ಲಿಯೋ ಸತ್ತ ಕಡ್ಡಿಯೊಂದು ಕೆಳಗುದುರಿ ಒಣ ಎಲೆಯಮೇಲೆ ಬಿದ್ದು ಸಣ್ಣ ಸದ್ದಾದರೆ ಅತ್ತಕಡೆ ತಿರುಗಿ ನೋಡುವನು. ಎಷ್ಟೆಷ್ಟು ಸಲ ತಿರುಗಿ ನೋಡಿದರೂ ಎಷ್ಟು ಕಿವಿಗೊಟ್ಟು ಕೇಳಿದರೂ ತಾನು ಕಾಯುತ್ತಿರುವವನು ಬಂದಂತೆ ತೋರಲಿಲ್ಲ. 'ಕೊನೆಗೆ ಕಾಯುವುದು ಸರಿಯಲ್ಲ ತಾನೇ ಹೋಗಿಬರಬೇಕು' ಎಂದುಕೊಂಡನು. ಆದರೆ ತಾನಲ್ಲಿಗೆ ಹೋಗುವುದು ಹೇಗೆ? ಹಿರಿಯ ಜಟ್ಟಿಯ ಮಗ ಮುನಿಯಾ ಜಟ್ಟಿಯ ಗುರುತಿಲ್ಲದವರು ಯಾರು ಆ ಅರಸುಮಗನ ಶಿಬಿರದಲ್ಲಿ? ಹೋಗುವುದು ಸರಿಯಲ್ಲ. ಹಾಗಾದರೆ ಏನು ಮಾಡಬೇಕು?

ಹೀಗೆ ಜಟ್ಟಿಯು ಅಳಿದು ಸುರಿಯುತ್ತಿರುವ ಸಮಯದಲ್ಲಿ ಕೊಂಚ ದೂರದಲ್ಲಿ ಒಂದು ಮರದ ಬುಡದಲ್ಲಿ ಕಂಬಳಿಯ ಗೊರಟೆಯನ್ನು ಹಾಕಿಕೊಂಡು ನಿದ್ರಿಸುತ್ತಿದ್ದಂತೆ ಕಾಣುತ್ತಿದ್ದ ಕಾಡು ಕುರುಬನು, 'ಬಂದಂಗೆ ಕಾಣ್ತದೆ ಕಪ್ಪೊ!' ಎಂದನು. ಜಟ್ಟಿಯು ಅವನ ಮಾತು ಕೇಳಿಸಿದ ಗುರುತಾಗಿ 'ಹೂ' ಗುಟ್ಟಿದನು. ಆದರೂ ಅವನ ಕಾತರತೆಯು ತೊಲಗಲಿಲ್ಲ.

ಇನ್ನು ಕೊಂಚ ಹೊತ್ತಿನ್ನುವುದರೊಳಗಾಗಿ ದೂರದಲ್ಲಿ ಕಾಲು ಸದ್ದಾದ ಹಾಗೆ ಆಗಿ ಬರುಬರುತ್ತಾ, ಸದ್ದು ಹೌದು ಎನ್ನುವ ಮಟ್ಟಿಗೆ ಕೇಳಿಸಿತು. ಕುದುರೆಗಳು ತಲೆಯೆತ್ತಿ ಕಿವಿಗೊಟ್ಟು ಕೇಳಿದುವು. ಇನ್ನು ಅಷ್ಟು ಹೊತ್ತಿನೊಳಗಾಗಿ ಬೀಸುಗಾಲು ಹಾಕಿಕೊಂಡು ಭರಭರನೆ ಮಯೂರನು ಬಂದು ಜಟ್ಟಿಯ ಎದುರಿಗೆ ನಿಂತುಕೊಂಡನು. ಜಟ್ಟಿಯು ಸಮಾಧಾನದ ನಿಟ್ಟುಸಿರು ಬಿಟ್ಟು ಶಾಂತನಾದನು.

'ಹೋದ ಕೆಲಸವಾಯಿತೆ?'

'ನಾವೆಂದುಕೊಂಡಿದ್ದುದಕ್ಕಿಂತ ಚೆನ್ನಾಗಿಯೇ ಆಯಿತು. ಹೊತ್ತಾಗಿದೆ. ಹೋಗಿ ಸಂಧ್ಯಾವಂದನೆಯನ್ನು ಮಾಡಿ ಬರ್ರೋಣ. ಹೋಗುತ್ತ ದಾರಿಯಲ್ಲಿ ಎಲ್ಲವನ್ನೂ ಹೇಳುವೆನು'

ಒಂದು ಪ್ರಹರವಾಗಿರಬಹುದು. ಇಬ್ಬರು ಹರೆಯುದವರು ಕುದುರೆಗಳನ್ನು ಹತ್ತಿಕೊಂಡು ಉತ್ತರ ದಿಕ್ಕಿಗೆ ಹೋಗುತ್ತಿದ್ದರು. ಕಾಡು ಕುರುಬನೊಬ್ಬನು ಕುಣಿಗಾಲೋಟದಿಂದ ಓಡುತ್ತ ಮುಂದೆ ದಾರಿ ತೋರಿಸಿಕೊಂಡು ಹೋಗುತ್ತಿದ್ದನು.

ಹುಣ್ಣಿಮೆಯ ತುಂಬುವೆರೆಯು ಮೂಡಣ ದಿಕ್ಕಿನಲ್ಲಿ ಸುಮಾರು ನೊಗದಷ್ಟು ಎತ್ತರ ಹತ್ತಿದೆ. ಶ್ರೀಶೈಲದ ಬೆಟ್ಟದ ಕಿಬ್ಬರಿಯೆಲ್ಲವೂ ಬೆಳುದಿಂಗಳಿನಲ್ಲಿ ಮಿಂದು ತೆಳುವಾದ ಪೊರೆಯಂತಹ ಬಟ್ಟೆಯನ್ನುಟ್ಟ ದೊಡ್ಡವರ ಮನೆಯ ಮಡದಿಯರಂತೆ ಮೆರೆಯುತ್ತಿದೆ. ಒಮ್ಮೊಮ್ಮೆ ಆಗತಾನೆ ಹೊರಹೊರಟಿರುವ ಹುಲಿಯ ಗರ್ಜನೆಯು ಸುತ್ತುಮುತ್ತಲಿನ ನಿಶ್ಶಬ್ದತೆಯಲ್ಲಿ ಭೀಕರವಾಗಿ ಕೇಳಿಸುತ್ತಿದೆ. ಅಲ್ಲಲ್ಲಿ ಗುಳ್ಳೆನರಿಗಳ ಕೂಗಾಟ, ಸಣ್ಣ ಪುಟ್ಟ ಮೃಗಗಳ ಓಡಾಟ. ಇವೆಲ್ಲಕ್ಕೂ ಆಧಾರಶ್ರುತಿಯಂತೆ ಕಿಬ್ಬರಿಯಲ್ಲಿ ಕೆಳಗೆ ಹರಿದು ಹೋಗುತ್ತಿರುವ ತೊರೆಯೊಂದರ ವಿಚಿತ್ರ ಶಬ್ದ.

ಯತಿಯ ಗುಹೆಯ ಬಳಿಯಲ್ಲಿ ಒಂದು ಅಗಲವಾದ ಬಂಡೆ ಸುಮಾರು ನಲವತ್ತು-ಐವತ್ತು ಜನರು ಕುಳ್ಳಿರುವುದಕ್ಕೆ ಎಡೆಯುಂಟು ಅಲ್ಲಿ. ಅಲ್ಲಿ ಕುಳಿತು ನೋಡಿದರೆ ಶ್ರೀಶೈಲದ ಪಟ್ಟಣವೂ ಕೂಡ ಚೆನ್ನಾಗಿ ಕಾಣುವುದು. ಇಂದು ಅಲ್ಲಿ ಅರುವರು ಕುಳಿತಿದ್ದಾರೆ. ಎಲ್ಲರೂ ಪರಿಚಿತರೇ! ಆದರೂ ಮಾತು ಮಾತ್ರ ಮೆಲ್ಲಗೆ, ಪಿಸುಗುಟ್ಟುವುದು, ಗೊಣಗುಟ್ಟುವುದಕ್ಕಿಂತ ಕೊಂಚ ಗಟ್ಟಿಯಾಗಿ, ಅಷ್ಟೆ. ಷಡಾನನಶರ್ಮನು ಪ್ರಶ್ನೆ ಮಾಡುತ್ತಿದ್ದಾನೆ. ಮಯೂರನು ಉತ್ತರ ಹೇಳುತ್ತಿದ್ದಾನೆ. ಇತರರು ಕುಳಿತುಕೇಳುತ್ತಿದ್ದಾರೆ.

'ಅಲ್ಲಿಗೆ ಹೋಗಲು ದಾರಿ ಯಾರು ತೋರಿಸಿದರು?'

'ದಾರಿಯಲ್ಲಿ ಒಬ್ಬ ಕುರುಬನ ಪರಿಚಯವಾಯಿತು. ಅವನು ದಾರಿಯನ್ನು ತೋರಿಸಿದನು'

'ಅಲ್ಲಿಗೆ ಹೋಗಿ ಏನು ಮಾಡಿದೆ?'

'ಆ ಕುರುಬನು ಕೊಟ್ಟ ಉಡುವಿನ ಸಹಾಯದಿಂದ ಕೋಟೆಯನ್ನೇರಿ ಒಳಕ್ಕೆ ಹೋದೆನು. ನೇರವಾಗಿ ಹೋಗಿ ಮುನಿಯಾ ಜಟ್ಟಿಯನ್ನು ಕಂಡೆನು. ಆತನಿಂದ ಅರಮನೆಯಲ್ಲಿ ಕುಮಾರರ ತೊಟ್ಟಿಯ ವಿಚಾರವನ್ನು ಕೇಳಿಕೊಂಡು ಅಲ್ಲಿಗೆ ಹೋದೆನು. ಅದೇನಾಯಿತೇನೋ? ನಾನು ಹೋದಲ್ಲಿ ರಾಜಪುತ್ರಿ ಇದ್ದಳು. ಮಂಚದ ಮೇಲೆ ಮಲಗಿರುವವರು ಯುವರಾಜರಿರಬಹುದೆಂದು ಧೈರ್ಯವಾಗಿ ಹೋಗಿ ಭುಜತಟ್ಟಿ ಎಬ್ಬಿಸಿದೆನು. ಅವರು ಯುವರಾಜರಲ್ಲ ರಾಜಕುಮಾರಿ' ಮುಂದೆ ನಡೆದುದನ್ನೆಲ್ಲ ಸಂಕ್ಷೇಪವಾಗಿ ಹೇಳಿದನು.

ಯತಿಯು ತಲೆದೂಗಿದನು. ಈಶಭಟ್ಟನ ಮುಖವರಳಿತು. ನರಸಿಂಹ ದತ್ತನು ಬೆರಗಾಗಿ ಕೇಳುತ್ತಿದ್ದನು. ಮಯೂರನ ಕಥೆಯಾದಮೇಲೆ ಯತಿಯು, 'ಜಟ್ಟಿಗಳೇ! ಇದು ಉದ್ದೇಶಪೂರ್ವಕವಾಗಿ ಆದುದೇನು?' ಎಂದನು.

'ಇಲ್ಲ. ನಿದ್ದೆಯ ಮಬ್ಬಿನಲ್ಲಿ ಬಲಗಡೆ ಎನ್ನುವುದಕ್ಕೆ ಬದಲಾಗಿ ಎಡಗಡೆ ಎಂದುಬಿಟ್ಟಿರಬೇಕು'

'ಸರಿ ಮುಂದಕ್ಕೆ?'

ಮಯೂರನು ಮತ್ತೆ ಹೇಳಿದನು; 'ಆಕೆಯೇ ಯುವರಾಜರು ಸಾಲುಬೆಟ್ಟಕ್ಕೆ ಬೇಟೆಗೆ ಹೋಗಿದ್ದಾರೆಂದು ಹೇಳಿದುದು. ಅಲ್ಲಿಯೂ ಹೀಗೆಯೇ ಆಗಬಾರದು ಎಂದು ಮತ್ತೆ ಹೋಗಿ ಮುನಿಯಾಜಟ್ಟಿಯನ್ನು ಎಬ್ಬಿಸಿದೆ. ಆತನೂ ನನ್ನ ಜೊತೆಯಲ್ಲಿಯೇ ಊರಿಂದ ಹೊರಟುಬಂದನು. ಇಬ್ಬರೂ ಕುದುರೆಗಳನ್ನೇರಿ ಶಿಬಿರಕ್ಕೆ ಹೋದೆವು. ಸಂಜೆಗೆ ಶಿಬಿರದೊಳಕ್ಕೆ ಒಬ್ಬೊಂಟಿಗನಾಗಿ ಹೋಗಿ ಯುವರಾಜರನ್ನು ಕಂಡುಬಂದೆನು. ಅವರು 'ನಾನೂ ನೀನೂ ಸ್ನೇಹಿತರಾಗಿರೋಣ. ನೀನು ಬನವಾಸಿಯ ಅರಸಾದ ಚಂದ್ರವರ್ಮನ ಔರಸಪುತ್ರ. ಮುಂದೆ ನಮಗೂ ನಿನಗೂ ಯುದ್ಧವಾಗ ಬಹುದು. ಹಾಗಾದರೆ ಪ್ರಜಾಕ್ಷೋಭವಾಗುವುದು. ಅದಕ್ಕೆ ಅವಕಾಶ ವಿಲ್ಲದಂತೆ ಈಗಲೇ ನಾವಿಬ್ಬರೂ ಒಂದಾಗೋಣ' ಎಂದು ಹೇಳಿ ಗುರುತಾ ಗಿರಲೆಂದು ಈ ಉಂಗುರವನ್ನು ಕೊಟ್ಟರು!'

'ಇನ್ನೇನನ್ನೂ ಹೇಳಲಿಲ್ಲವೆ?'

'ನಾನೊಪ್ಪಿದರೆ ಸಮ್ರಾಜರಿಗೆ ಹೇಳಿ ಸಾವಿರ ಕುದುರೆಯ ಒಡೆ ತನವನ್ನು ಕೊಡಿಸುವದಾಗಿ ಹೇಳಿದರು'

'ನೀನೊಪ್ಪಲಿಲ್ಲವೇಕೆ?'

'ಏಕೋ ನನಗೂ ತಿಳಿಯದು. ಮನಸ್ಸಿಗೆ ಬೇಡವೆಂದು ತೋರಿತು. ಅಲ್ಲದೆ ನಿಮ್ಮೆಲ್ಲರನ್ನೂ ಕೇಳದೆ ನಾನು ಹೇಗೆ ಒಪ್ಪಿಗೆ ಕೊಡುವುದು?'

ದತ್ತನಿಗೆ ಕಣ್ಣಲ್ಲಿ ನೀರೂರಿ ತೀವವಾಯಿತು. ಶರ್ಮನು ಮುಖ ತಗ್ಗಿಸಿದನು. ಯತಿಯು ಕಣ್ಮುಚ್ಚಿದನು. ಭಟ್ಟನು ನ್ಯಾಯವೆಂದು ಸಮ್ಮತಿಯ ತಲೆದೂಗಿದನು.

ಶರ್ಮನು ಮುಂದಕ್ಕೆ ಏನೂ ಪ್ರಶ್ನೆ ಮಾಡಲಿಲ್ಲ.

'ದತ್ತರೇನಾದರೂ ಕೇಳುವರೋ?' ಎಂದು ಯತಿಯು ಕೇಳಿದನು. ದತ್ತನು 'ಅಪ್ಪಣೆ' ಎಂದು, 'ತಾವೊಬ್ಬರೇ ಶಿಬಿರದೊಳಕ್ಕೆ ದಯಮಾಡಿಸಿದಿರಲ್ಲ; ಆಗ ತಮಗೆ ಭೀತಿಯಾಗಲಿಲ್ಲವೇ?' ಎಂದನು.

ಮಯೂರನು ಹಾಗೇ ಒಂದು ಕ್ಷಣ ಯೋಚಿಸಿ ಹೇಳಿದನು: 'ಭೀತಿಯಾದಂತೆ ಕಾಣಲಿಲ್ಲ. ನನ್ನ ಮನಸ್ಸಿನಲ್ಲಿದ್ದುದು ಯುವರಾಜರನ್ನು ಕಾಣುವುದು. ಅದೊಂದನ್ನು ಬಿಟ್ಟು ಇನ್ನೇನೂ ನನ್ನ ಮನಸ್ಸಿಗೆ ತೋರಲೇ ಇಲ್ಲ'

'ಅಲ್ಲಿಗೆ ಹೋಗುವುದರಲ್ಲಿ ತಮಗಿದ್ದ ಉದ್ದೇಶವೇನು?'

'ಗುರುಗಳ ಅಪ್ಪಣೆಯಾಯಿತು 'ಸಾಹಸ ಕಾರ್ಯಮಾಡಿ ಸಹಾಯ ಕೇಳು' ಎಂದು. ಯುವರಾಜರ ಕತ್ತಿಯನ್ನು ನಾನು ಬರುವಾಗ ತಂದುಬಿಟ್ಟಿದ್ದೆನು. ಅದನ್ನು ಕೊಟ್ಟು ಬರೋಣ ಎಂದುಕೊಂಡು ಹೋದೆನು'

'ಹೋಗುವಾಗ ನಮಗೇಕೆ ಹೇಳಲಿಲ್ಲ?'

'ಹೇಳಿದರೆ ನೀವೂ ಹಿಂದೆ ಬಂದೀರೆಂದು ಹೇಳಲಿಲ್ಲ'

ದತ್ತನು ನಕ್ಕು ಸುಮ್ಮನಾದನು.

ಯತಿಯು ಇದುವರೆಗೂ ಎಲ್ಲವನ್ನೂ ಕೇಳುತ್ತ ಕುಳಿತಿದ್ದವನು, 'ಸಾಹಸವಿದೆ. ದೈವದ ಸಹಾಯವಿದೆ. ವಿವೇಕವಿಲ್ಲ. ಅದನ್ನು ಸಂಪಾದಿಸಬೇಕು' ಎಂದು ಎದ್ದನು.

ಎಲ್ಲರೂ ಎದ್ದು ಆತನ ಹಿಂದೆಯೇ ಗುಹೆಯೊಳಕ್ಕೆ ಹೋದರು.

——o——

# ಹದಿನಾಲ್ಕನೆಯ ಪ್ರಕರಣ

ಯತಿಯು ಮಯೂರನಿಗೆ ಪಾಠಹೇಳುವುದಕ್ಕೆ ಆರಂಭಿಸಿದನು. ಈಶ ಭಟ್ಟರು ಆ ವೇಳೆಗಾಗಲೇ ವೇದಾಧ್ಯಯನ ಮಾಡಿಸಿದ್ದರು. ಶಾಸ್ತ್ರಗಳಲ್ಲಿ ತಕ್ಕ ಮಟ್ಟಿಗೆ ಪಾಂಡಿತ್ಯ ಸಂಪಾದಿಸಿಕೊಟ್ಟಿದ್ದರು. ಮಯೂರನಿಗೂ ಷಡ್ದರ್ಶನಗಳು, ಷಡಂಗಗಳು, ಇವುಗಳಲ್ಲಿ ಇಬ್ಬರು ಮಾತನಾಡುತ್ತಿದ್ದರೆ ಮೂರನೆಯವನಾಗಿ ಬಾಯಿಹಾಕುವುದಕ್ಕೆ ಬೇಕಾದಷ್ಟು ಬರುತ್ತಿದ್ದಿತು. ಇನ್ನು ಆತನು ಕಲಿಯಬೇಕಾಗಿದ್ದುದು ರಹಸ್ಯಗಳು. ಕಲ್ಲನ್ನು ಒಡೆದು ಒಳಗಿರುವ ರತ್ನವನ್ನು ಪಡೆದಂತೆ, ಚಿಪ್ಪನ್ನು ಬಿಚ್ಚಿ ಮುತ್ತನ್ನು ತೆಗೆದುಕೊಂಡಂತೆ, ಶಾಸ್ತ್ರಗಳ ಮಾತಿನಲ್ಲಿರುವ ಭಾವವನ್ನು ಅಂತಸ್ಸತ್ವವನ್ನು ತಿಳಿದು ಅವುಗಳನ್ನು ಆಚರಣೆಗೆ ತರುವುದು. ಅದಷ್ಟು ಆತನಿಗೆ ಉಳಿದಿದ್ದುದು.

ಯತಿಯ ವಿದ್ಯಾಭ್ಯಾಸಕ್ರಮವು ಹೊಸರೀತಿಯಾಗಿದ್ದಿತು. ಪೆಟ್ಟಿಗೆಗಳು ತುಂಬುವಷ್ಟು ಪುಸ್ತಕಗಳಿಲ್ಲ. ಮನೆ ತುಂಬುವಷ್ಟು ಮಂದಿಯಿಲ್ಲ. ಗುರುಶಿಷ್ಯರು ಇಬ್ಬರೇ ಇಬ್ಬರು. ಮೊದಲಾರು ತಿಂಗಳು ಯತಿಯು ಶಿಷ್ಯನನ್ನು ಹೊರಕ್ಕೆ ಕಳುಹಿಸಲೇ ಇಲ್ಲ. ಗುಹೆಯ ಪಕ್ಕದಲ್ಲಿರುವ ದೋಣೆಯಲ್ಲಿಯೇ ಸ್ನಾನಾದಿಗಳು. ದಿನಕ್ಕೆ ಶಿಷ್ಯನಿಗೆ ಮೂರೇ ಕೆಲಸ. ಬೆಳ್ಳಿಯು ಏಳುವ ವೇಳೆಗೆ ಮಡಿಮಾಡಿ ಕುಳಿತು ಬೆಳಿಗ್ಗೆ ಒಂದೂವರೆ ಝಾವದವರೆಗೂ ಜಪ. ಮತ್ತೆ ಪೂಜೆ. ಅದಾದಮೇಲೆ ಏಕಾಂತ ವಾಸ. ಯತಿಯು ತಾನು ತಂದ ಗೆಡ್ಡೆಗೆಣಸುಗಳಲ್ಲಿ ಒಂದೆರಡನ್ನು ಕೊಡುವನು. ಅದೇ ಆಹಾರ. ಮೊದಮೊದಲು ಮಯೂರನಿಗೆ ಹಸಿಯ ಗೆಡ್ಡೆಗಳನ್ನು ತಿಂದರೆ ಮೈಗೆ ಆಗಲಿಲ್ಲ. ಬರುಬರುತ್ತ ಒಗ್ಗಿತು. ಮಧ್ಯಾಹ್ನದ ಮೂರು ಜಾವದ ವೇಳೆಗೆ ಒಂದೆರಡು ಗೆಡ್ಡೆ ಗೆಣಸುಗಳನ್ನು ತಿಂದರಾಯಿತು, ಮರುದಿನದ ಮಧ್ಯಾಹ್ನದವರೆಗೂ ಹಸಿವಾಗುತ್ತಿರಲಿಲ್ಲ.

ಒಂದುದಿನ ಬೆಳಗಿನ ಎರಡುಜಾವ ಕಳೆದಿರಬಹುದು. ಯತಿಯು ಶಿಷ್ಯನನ್ನು ಕರೆದು 'ಹೋಗಿ ಸ್ನಾನಮಾಡಿ ಮಡಿಯುಟ್ಟು ಬಾ' ಎಂದನು. ಶಿಷ್ಯನೂ ಹಾಗೆಯೇ ಮಾಡಿಕೊಂಡು ಬಂದನು. ಅದುವರೆಗೂ ಧ್ಯಾನಸುಖ

ಪರವಶನಾಗಿದ್ದ ಆತನು ಬಹಿರ್ಮುಖನಾಗಿ ಶಿಷ್ಯನನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು ಹೇಳಿದನು:

'ಯಾವ ಮಹತ್ಕಾರ್ಯವನ್ನು ಸಾಧಿಸಬೇಕಾದರೂ ದೈವಾನುಕೂಲತೆ ಬೇಕು. ದೈವವು ಒಲಿದಲ್ಲದೆ ಮನುಷ್ಯನು ಏನೂ ಮಾಡಲಾರನು. ಮಾನವನ ಸಂತತ ಪ್ರಯತ್ನವೂ ದೈವದ ಅನುಗ್ರಹವೂ ಸೇರಿದರೆ ವಿಜಯ ಲಕ್ಷ್ಮಿಯು ತಾನಾಗಿ ಒಲಿಯುವಳು. ಅದರಿಂದ ತಿಳಿದವರು ಮೊದಲು ದೈವದ ಪ್ರಸಾದವನ್ನು ಸಂಪಾದಿಸಬೇಕೆನ್ನುವರು. ದೈವವು ಸರ್ವವ್ಯಾಪಿಯಾಗಿರುವುದು ನಿಜ. ಆದರೂ, ಸಮುದ್ರಜಲವು ಉಪ್ಪಾಗಿದ್ದರೂ ಉಪ್ಪು ಬೇಕಾಗಿರುವವನಿಗೆ ಉಪಯೋಗಕ್ಕೆ ಬರದಂತೆ ಮಹತ್ವಾಕಾಂಕ್ಷಿಗೆ ಅಮೂರ್ತದೈವದಿಂದ ಏನೂ ಆಗದು. ನಾಮರೂಪಗಳಿಂದ ನಿಬಿಡವಾಗಿರುವ ಈ ಪ್ರಪಂಚದಲ್ಲಿ ನಾಮರೂಪಗಳಿಂದ ಅವಚ್ಛಿನ್ನವಾದ ದೈವಶಕ್ತಿಯೇ ಉಪಯೋಗಕಾರಿಯು. ಭೂಮಂಡಲವಿಷ್ಟು ವಿಶಾಲವಾಗಿದ್ದರೂ ಮನುಷ್ಯನು ತನ್ನ ವಾಸಕ್ಕೆಂದು ಅಷ್ಟಗಲದ ಭೂಮಿಯೊಂದನ್ನು ಗುರುತಿಸಿಕೊಳ್ಳುವಂತೆ, ಬೇಕಾದವನು ಭಾವಿಯನ್ನು ತೆಗೆದು ನೀರು ತುಂಬಿಕೊಳ್ಳುವಂತೆ, ಎಲ್ಲೆಲ್ಲೂ ಇರುವ ಉಷ್ಣವನ್ನು ಕಾಷ್ಠಾದಿಗಳ ಸಂಯೋಗದಿಂದ ಸ್ಫುಟಮಾಡಿ ಜ್ವಾಲೆಯೆಬ್ಬಿಸುವಂತೆ, ಜಗತ್ಪ್ರಾಣನಾಗಿರುವ ಸಮೀರಣನನ್ನು ಬೀಸಣಿಗೆಯಿಂದ ಬರಮಾಡಿಕೊಳ್ಳುವಂತೆ, ಅನಂತವಾಗಿ ಅವ್ಯಕ್ತವಾಗಿ ಈ ಬ್ರಹ್ಮಾಂಡವೆಲ್ಲವನ್ನೂ ತುಂಬಿರುವ ಪರಾಪರ ವಸ್ತುವನ್ನು ಇಷ್ಟದೇವತೆಯ ರೂಪವನ್ನು ಧರಿಸುವಂತೆ ಮಾಡಿಕೊಳ್ಳಬೇಕು. ಉಕ್ಕಿನ ಬೆಟ್ಟವೇ ಎದುರಿಗಿದ್ದರೇನು? ವೀಣೆಯ ತಂತಿಯ ಸುನಾದವನ್ನಾಗಲಿ ಕತ್ತಿಯ ಕೂರಲಗಿನ ಧಾರೆಯನ್ನಾಗಲಿ ಕಾಣಬರುವುದೇನು? ಅಗಾಧವಾದ ಮಡುಗಳಿಂದ ಕೂಡಿ ವಿಶಾಲವಾದ ಗಂಭೀರ ವಾಹಿನಿಯು ಹರಿಯುತ್ತಿದ್ದರೂ, ಮನುಷ್ಯನು ಬೊಗಸೆಯಿಂದಲ್ಲವೆ ನೀರು ಕುಡಿಯುವುದು? ಅದರಂತೆ, ಈ ಮೂರ್ತಪ್ರಪಂಚದಲ್ಲಿ ಸಕಾಮ ಕರ್ಮ ಮಾಡುವವರು ದೈವವನ್ನು ಮೂರ್ತಿರೂಪದಿಂದಲೇ ಕಾಣಬೇಕು. ಚಳಿಯಡಗುವುದಕ್ಕೆ ಬಿಸಿಲು ಸಾಕಾದರೂ ಬೆಂಕಿಯಂತೆ ಸುಡಬೇಕಾದರೆ ಭೂತಗನ್ನಡಿಯ ಉಪಾಧಿಯು ಬೇಕಲ್ಲವೆ? ಹಾಗೆಯೇ ಲೋಕದ ಸಾಮಾನ್ಯ ಸ್ಥಿತಿಗೆ ಅಮೂರ್ತವಾಗಿರುವ ದೈವದ ಸ್ಥಿತಿಯು ಸಾಕಾಗಿದ್ದರೂ

ವಿಶೇಷವಾದ ಕಾರ್ಯಗಳು ಆಗಬೇಕಾಗಿದ್ದರೆ ಅಪಾರವಾದ ದೈವಶಕ್ತಿಯ ಒಂದು ವಿಶೇಷವಾದ ಆವಿರ್ಭಾವವು ಬೇಕಾಗುವುದು. ದಿನದಿನಕ್ಕೆ ಮನೆಯಲ್ಲಿರುವ ಪದಾರ್ಥಗಳೇ ಸಾಕಾದರೂ ವಿಶೇಷ ದಿನಗಳಲ್ಲಿ ಹೊರಗಿನಿಂದ ತರಬೇಕಾಗುವುದಲ್ಲವೆ? ಅದರಂತೆ ನೀನು ಮಾಡಬೇಕಾಗಿರುವ ಈ ಮಹತ್ಕಾರ್ಯಕ್ಕೆ ದೈವಾನುಗ್ರಹದ ಬೆಂಬಲವು ಸಿಕ್ಕದೇಹೋದರೆ ನಿನ್ನ ಪ್ರಯತ್ನಗಳೆಲ್ಲವೂ ಗಾಳಿಯನ್ನು ಗುದ್ದಿದಂತಾಗುವುದು, ಬೂದಿಯಲ್ಲಿ ಹೋಮ ಮಾಡಿದಂತಾಗುವುದು, ಹೊಳೆಯಲ್ಲಿ ಹುಳಿಯನ್ನು ತೇದಂತಾಗುವುದು. ಅದರಿಂದ ನೀನೂ ಒಂದು ದೈವವನ್ನಾರಾಧಿಸಿ ಪ್ರಸಾದವನ್ನು ಪಡೆ. ಆಮೇಲೆನಿನ್ನ ಕಾರ್ಯಗಳೆಲ್ಲವೂ ಹೂವಿನ ಸರವೆತ್ತಿದಂತಾಗುವುದು' ಎಂದು ಉಪದೇಶಮಾಡಿದನು.

ಆ ವೇಳೆಗಾಗಲೇ ಯತಿಯ ಅನಿರ್ವಚನೀಯ ತೇಜಸ್ಸಿನಿಂದ ಮುಗ್ಧನಾಗಿ ಹೋಗಿದ್ದ ಮಯೂರನು ಪ್ರತಿಮಾತನಾಡದೆ ಒಪ್ಪಿಕೊಂಡನು. ಯತಿಯು ಅವನನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು, ಆಚಮನ ಮಾಡೆಂದು ಮಾಡಿಸಿ, ತನ್ನ ಕಮಂಡಲದಲ್ಲಿದ್ದ ನೀರನ್ನು ತೆಗೆದುಕೊಂಡು ಅಭಿಮಂತ್ರಿಸಿ, ಅವನ ಮುಖದ ಮೇಲೆ ಪ್ರೋಕ್ಷಿಸಿದನು. ಮಯೂರನಿಗೆ ಅದುವರೆಗೂ ಆಗದೆ ಇದ್ದ ಒಂದು ಬಗೆಯಾಗಿ, ಅಲೆತವೇ ಹುಟ್ಟು ಸುಳಿಯಾದ ಮನಸ್ಸು ತಟ್ಟನೆ ನಿಂತಿತು. ಈಜುತ್ತಿದ್ದ ಮೀನು ನೀರಿನಲ್ಲಿ ಒಮ್ಮೊಮ್ಮೆ ನಿಶ್ಚಲವಾಗಿ ನಿಲ್ಲುವಂತೆ, ಗಾಳಿಯು ಪಟಿಲ್ಲದಿರುವಾಗ ದೀಪಜ್ವಾಲೆಯು ನೇರವಾಗಿ ನಿಲ್ಲುವಂತೆ, ಮಯೂರನ ಮನಸ್ಸೊಮ್ಮೆ ನೆಟ್ಟಗೆ ನಿಂತಿತು.

ಯತಿಯು ಶಿಷ್ಯನಿಗೆ ಸ್ಕಂದಮಂತ್ರವನ್ನು ಉಪದೇಶಮಾಡಿದನು. ಅದರ ರಹಸ್ಯಗಳನ್ನೆಲ್ಲ ತಿಳುಹಿಸಿ, ಮಂತ್ರದಲ್ಲಿರುವ ಗತಿವೈಚಿತ್ರ್ಯಾದಿಗಳನ್ನೂ ಅದರ ನ್ಯಾಸ, ಪುನಶ್ಚರಣವಿಧಿಗಳನ್ನೂ ಹೇಳಿಕೊಟ್ಟನು. ಒಂದು ದೀಪದಿಂದ ಇನ್ನೊಂದು ದೀಪವು ಬರುವಂತೆ ತಪೋಧನನಾದ ಯತಿಯ ಅನುಗ್ರಹ ಸಾಮರ್ಥ್ಯದಿಂದ ಮಯೂರನೂ ತಪಸ್ವಿಯೇ ಆದನು. ಯತಿಯು ಮಾಡಿಸಬೇಕೆಂದಿದ್ದ ವಿದ್ಯಾಭ್ಯಾಸದ ಕ್ರಮವು ಪೂರ್ತಿಯಾಯಿತು.

ಯತಿಯು ಮಾತಿನಲ್ಲಿಯೂ ಸ್ವಲ್ಪಕಾಲ ಪಾಠಹೇಳಿದನು. ಅರಣಿಗಳನ್ನು ಕಡೆದು ಅಗ್ನಿಯನ್ನು ಪಡೆಯುವುದು ಲೋಕರೂಢಿ. ಆದರೆ ಅಗ್ನಿಯು ಪ್ರಜ್ವಲಿಸಿದಮೇಲೆ ಅರಣಿಗಳು ಬೇಕಾಗದೆ ಹೋಗುವಂತೆ ಮಾತಿನಲ್ಲಿ ಹೇಳಿದ ವಿದ್ಯೆಯು ಮಾಡಿ ನೋಡೆಂದು ಹೇಳಿ ತೋರಿಸಿದ ವಿದ್ಯೆಯ ಮುಂದೆ ಆನೆಯ ಮುಂದಿನ ಆಡಿನಂತಾಯಿತು. ಆದರೂ ಯತಿಯು ಹೇಳಿದ್ದುದು ಸಾಮಾನ್ಯವಿಷಯಗಳು ಮಾತ್ರವಲ್ಲ.

ಆತನು ಹೇಳಿಕೊಟ್ಟುದರಲ್ಲಿ ಮೂರು ಮುಖ್ಯವಾದವುಗಳು: ಮೊದಲನೆಯದು ಕಂಡು ಹೇಳಬೇಕಲ್ಲದೆ ಕಾಣದೆ ಹೇಳಬಾರದು; ಎರಡನೆಯದು ಹೆರರು ಹೇಳಿದುದನ್ನು ಕಾಣಲು ಯತ್ನಿಸಬೇಕು; ಕಾಣದ ಮಾತ್ರಕ್ಕೆ ಇಲ್ಲವೆನ್ನಬಾರದು; ಹಾಗೆಯೇ ಹೇಳಿದವರೆಲ್ಲರ ಮಾತನ್ನೂ ನಂಬಬಾರದು; ಲೋಕದಲ್ಲಿ ಬಾಳಬೇಕೆಂದಿರುವವನು ನಂಬಿಕೆ ಅಪನಂಬಿಕೆಗಳನ್ನು ಬೆಳಕು ಕತ್ತಲೆಗಳಂತೆ ಹವಣರಿತು ಉಪಯೋಗಿಸಿಕೊಳ್ಳಬೇಕು; ಮೂರನೆಯದು ಗುರಿಯಿಲ್ಲದ ಕೆಲಸಮಾಡಬಾರದು; ಕೇಳಿ ಹೇಳಿದರೂ ಅರಿತು ಕುರಿತು ಮಾಡಬೇಕು, ತೋರಿತೆಂದು ಆಡಿ ಮಾಡಬಾರದು.

ವಿದ್ಯಾಭ್ಯಾಸವು ಎರಡು ವರ್ಷಗಳ ಕಾಲ ಹಿಡಿಯಿತು. ಆದಷ್ಟು ಅಲ್ಪಕಾಲದಲ್ಲಿಯೇ ಮೊದಮೊದಲಲ್ಲಿಯೇ ಯತಿಯು ಶಿಷ್ಯನಿಗೆ ಬ್ರಾಹ್ಮಿ, ಮರೀಚಿಕಾ ಮೊದಲಾದ ಕಲ್ಪಗಳನ್ನೂ ಮಾಡಿಸಿದ್ದನು. ಅದರ ಮೇಲೆ ಕಾಯಿಸಿ ಸೋಸಿದ ಚಿನ್ನದಿಂದ ಒಡವೆ ಮಾಡಿ ಒಪ್ಪವನ್ನಿಕ್ಕುವಂತೆ ಶಿಷ್ಯನನ್ನು ಮಂತ್ರಸಿದ್ಧನನ್ನು ಮಾಡಿ ಅರ್ಥಶಾಸ್ತ್ರವನ್ನು ಸಾಂಗವಾಗಿ ಬೋಧಿಸಿದನು. ವಿದ್ಯಾಭ್ಯಾಸವು ಮುಗಿಯಿತು. ಕಲ್ಲನ್ನು ಸಾಣೆಗಿಕ್ಕಿ ಕಡೆದು ರತ್ನರಾಜವನ್ನು ಮಾಡಿದುದು ಆಯಿತು. ಮುಂದೆ ರಾಜನಾಗಬೇಕಾದವನಿಗೆ ಬೌದ್ಧಿಕ ದೈವಿಕ ಬಲಗಳನ್ನು ಸಂಪಾದಿಸಿ ಕೊಟ್ಟು ಮಾಡಿದ ಕೆಲಸವೆಲ್ಲವೂ ಆತ್ಮೋದ್ಧಾರಕ್ಕಾಗುವ ಮಾರ್ಗವನ್ನು ಬೋಧಿಸಿಯಾಯಿತು.

—o—

## ಹದಿನೈದನೆಯ ಪ್ರಕರಣ.

ಮಧ್ಯಾಹ್ನವು ಮುಂದುವರಿದಿದೆ. ಬಿಸಿಲು ಹಣ್ಣಾಗಿದೆ. ನೆರಳುಗಳು ನೀಳವಾಗುವುದಕ್ಕೆ ಆರಂಭವಾಗಿ ಕೊಂಚಹೊತ್ತಾಗಿದೆ.

ಯತಿಯ ಗುಹೆಯಲ್ಲಿ ಗುರುಶಿಷ್ಯರಿಬ್ಬರೇ ಕುಳಿತಿದ್ದಾರೆ. ಪಾಠಪ್ರವಚನಾದಿಗಳೆಲ್ಲ ಮುಗಿದು ಹೋಗಿವೆ. ಗುರುವು ಹಾಗೆಯೇ ಕಲ್ಲನ್ನೊರಗಿಕೊಂಡು ಧ್ಯಾನಾಸಕ್ತನಾಗಿರುವಂತೆ ತೋರುತ್ತಿದೆ. ಕಣ್ಣುಗಳು ಅರೆಮುಗಿದು ದೂರದ ಏನನ್ನೋ ನೋಡುತ್ತಿವೆ. ಹುಬ್ಬುಗಳು ಕೊಂಚ ಹತ್ತಿರಕ್ಕೆ ಬಂದಿವೆ. ಚಿಂತೆಯೂ ಇರಬಹುದು.

ಮಯೂರನೂ ಕುತೂಹಲದಿಂದ, ಏನನ್ನೋ ಕೇಳಬೇಕೆನ್ನುವ ಆಸೆಯಿಂದ, ಅಡಿಗಡಿಗೆ ಗುರುವಿನ ಮುಖವನ್ನು ನೋಡುತ್ತ ಮತ್ತೆ ಕೆಳಗೆ ನೋಡುತ್ತ ಕುಳಿತಿದ್ದಾನೆ. ಪಾಠ ಪ್ರವಚನಾದಿಗಳಾದ ಮೇಲೆ ಎದ್ದು ಹೋಗಬೇಕಾದ ಪದ್ಧತಿ. ಈವೊತ್ತು ಏಳದೆ ಕುಳಿತಿದ್ದಾನೆ.

ಶಿಷ್ಯನು ಎದ್ದು ಹೋದಾನೆಂದು ಯತಿಯೂ ಒಂದು ಗಳಿಗೆ ಸುಮ್ಮನಿದ್ದನು; ಅವನು ಏಳದೆ ಹಾಗೆಯೇ ಕುಳಿತಿರಲು, 'ಏನು? ಏನಾದರೂ ಪ್ರಶ್ನೆ ಇದೆಯೇನು?' ಎಂದು ಕೇಳಿದನು.

ಮಯೂರನು ಅತಿ ವಿನಯದಿಂದ ಭಯಭಕ್ತಿಗಳಿಂದ ಅರಿಕೆ ಮಾಡಿದನು: 'ಹಿಂದಿನ ಕಥೆಯನ್ನು ಹೇಳುವುದಾಗಿ ಅಪ್ಪಣೆಯಾಗಿದ್ದಿತು'

ಯತಿಯು ಏನೋ ಆಲೋಚಿಸಿ, 'ಹೂ, ಈಗಲೇ ಹೇಳುವೆನು' ಎಂದು ಆರಂಭಿಸಿದನು.

'ಶಾತವಾಹನನೆಂಬ ಅರಸೊಬ್ಬನು ಈ ಪ್ರಾಂತ್ಯದಲ್ಲಿ ಹಿಂದೆ ಆಳುತ್ತಿದ್ದನು. ಆತನು ಗಂಡುಮಕ್ಕಳಿಲ್ಲದೆ ಮೃತನಾಗಿ ಹೋಗಲು ರಾಜಪರಿವಾರದವರೂ ಅಧಿಕಾರಿಗಳೂ ರಾಜ್ಯವು ಅನಾಯಕವಾಯಿತೆಂದು ಚಿಂತಾಕ್ರಾಂತರಾದರು. ರಾಜ್ಯಲಕ್ಷ್ಮಿಯು ಕನಸಿನಲ್ಲಿ ರಾಜಪತ್ನಿಗೆ ಕಾಣಿಸಿಕೊಂಡು, 'ನಾಳೆಯ ದಿನ ಪಟ್ಟದಾನೆಯನ್ನು ಪೂಜಿಸಿ ಅದರ ಕೈಗೆ ಒಂದು ಪುಷ್ಪಮಾಲೆ

ಯನ್ನು ಕೊಡಿಸು. ಅದು ಯಾವನನ್ನು ಆ ಮಾಲೆಯಿಂದ ಅರ್ಚಿಸಿ ಕರೆದುಕೊಂಡುಬರುವುದೋ ಆತನಿಗೆ ಆ ಕೂಡಲೆ ರಾಜ್ಯಾಭಿಷೇಕ ಮಾಡು. ಆತನೇ ನಿಮಗೆ ಅರಸು' ಎಂದು ಹೇಳಿದಳು. ಅದರಂತೆಯೇ ಮರುದಿನ ಆಕೆಯು ಪಟ್ಟದಾನೆಯನ್ನು ಪೂಜಿಸಿ ಅದರ ಕೈಗೆ ಮಾಲೆಯನ್ನು ಕೊಟ್ಟು ಗ್ರಾಮಪ್ರದಕ್ಷಿಣಕ್ಕೆ ಕಳುಹಿದಳು.

ಇದು ಮೂರುತಲೆಯ ಹಿಂದಿನ ಮಾತು. ಆಗ ನಮ್ಮ ಮುತ್ತಾತ ನವರು ಬದುಕಿದ್ದರು. ಅವರು ಯಜ್ಞೇಶ್ವರನ ಪೂಜೆಯಲ್ಲಿ ನಿಸ್ಸೀಮರು. ಯಜ್ಞೇಶ್ವರನು ಸಾಕ್ಷಾತ್ತಾಗಿ ಬಂದು ಅವರ ಕೈಯಿಂದಲೇ ಆಹುತಿಗಳನ್ನು ಸ್ವೀಕರಿಸುತ್ತಿದ್ದನಂತೆ. ಅವರ ಹೆಸರು ಕದಂಬಶರ್ಮರು.

ಆನೆಯು ಗ್ರಾಮಪ್ರದಕ್ಷಿಣಕ್ಕೆ ಹೋದಾಗ ಒಂದು ವಿಚಿತ್ರವು ನಡೆ ಯಿತು. ನಮ್ಮ ಮುತ್ತಾತನವರು ಗಜಪೂಜೆಯನ್ನು ಮುಗಿಸಿಕೊಂಡು ಬಂದು ಮಾಧ್ಯಾಹ್ನಿಕಕ್ಕೆ ಮಡಿಯುಟ್ಟುಕೊಂಡು ದರ್ಭಾಸನದ ಮೇಲೆ ಕುಳಿತು ವಿಭೂತಿಯನ್ನು ಕಲಸುತ್ತಿದ್ದಾರೆ. ಆಗ ಬಾಗಿಲಲ್ಲಿ ಯಾರೋ 'ಸ್ವಾಮಿ! ಕದಂಬಶರ್ಮರ ಮನೆಯಿದೇಯೇ?' ಎಂದು ಗಟ್ಟಿಯಾಗಿ ಕೂಗಿದರು. 'ಬನವಾಸಿನಲ್ಲಿ ಕದಂಬಶರ್ಮರ ಮನೆಯನ್ನು ಅರಿಯದವರು ಯಾರು ಇವರು?' ಎಂದು ನಮ್ಮ ತಾತನವರೇ ಈಚೆಗೆ ಬಂದು ನೋಡಿ ದರು. ಒಬ್ಬ ಇಪ್ಪತ್ತು ಇಪ್ಪತ್ತೈದು ವರ್ಷದ ಹುಡುಗ. ಒಳ್ಳೆಯ ತೇಜಸ್ವಿ ಯಾಗಿದ್ದಾನೆ. ಬಾಗಿಲ ತುಂಬ ನಿಂತಿದ್ದಾನೆ. ಕಳೆಕಳೆಯಾಗಿದ್ದಾನೆ. ನೋಡಿದರೆ ಬಹು ಸಂತೋಷವಾಗುತ್ತದೆ.

ಕೂಡಲೇ ಅವರು, 'ದಯಮಾಡಿಸಿ. ತಾವು ಬರುವಿರೆಂದು ನನಗೆ ಗೊತ್ತು. ತಮ್ಮ ಧ್ವನಿಯಿಂದಲೇ ಗುರ್ತಿಸಬೇಕಾಗಿದ್ದಿತು. ಏನೋ ಯೋಚನೆ ಯಲ್ಲಿದ್ದೆ. ಕ್ಷಮಿಸಬೇಕು. ಒಳಕ್ಕೆ ಬನ್ನಿ' ಎಂದು ಒಳಗೆ ಕರೆದು ಒಂದು ಮಣೆಯಮೇಲೆ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಸತ್ಕರಿಸಿದರು.

ಆತನ ಕಥೆಯೂ ವಿಚಿತ್ರವಾಗಿದ್ದಿತು. ಒಬ್ಬ ಯೋಗೀಶ್ವರನು ಈತನನ್ನು ತನ್ನ ಬಳಿಯಲ್ಲಿರಿಸಿಕೊಂಡಿದ್ದನಂತೆ. 'ನನಗೊಂದು ಗಂಡಾಂ

ತರ ಬರುತ್ತದೆ. ಹದಿನೆಂಟು ದಿನಗಳು ನಾನು ಶವಪ್ರಾಯನಾಗಿ ಬಿದ್ದಿರುತ್ತೇನೆ. ಆಗ ಆ ದೇಹಕ್ಕೆ ತಕ್ಕ ಉಪಚಾರಮಾಡಿ ನನ್ನನ್ನು ಬದುಕಿಸಿದರೆ ನಿನಗೆ ಬೇಕಾದ ಕಾರ್ಯ ಮಾಡಿಕೊಡುತ್ತೇನೆ' ಎಂದು ಹೇಳಿದನಂತೆ. ಅದೇರೀತಿಯಾಗಿ ಈತನು ಆತನಿಗೆ ಒದಗಿದ ಗಂಡಾಂತರದಲ್ಲಿ ಆತನನ್ನು ಉಪಚರಿಸಿ ಬದುಕಿಸಿದನಂತೆ. ಅದರಿಂದ ತೃಪ್ತನಾದ ಆತನು ಆತನಿಗೆ ಒಂದು ಮಂತ್ರವನ್ನು ಉಪದೇಶಿಸಿದನಂತೆ, ಅದರ ಅನುಷ್ಠಾನವು ಹಿಂದಿನ ದಿವಸಕ್ಕೆ ಮುಗಿಯಿತಂತೆ. ಆ ದಿನ ಸಾಯಂಕಾಲ ಒಬ್ಬ ಬ್ರಾಹ್ಮಣನು ಬಂದು, 'ಬಾ, ನಿನ್ನನ್ನು ದೊರೆಯನ್ನು ಮಾಡಿಸುತ್ತೇನೆ' ಎಂದು ಕರೆದುಕೊಂಡು ನಮ್ಮ ಊರಿನ ಬಾಗಿಲವರೆಗೂ ಬಂದು, 'ಈ ಊರಿನಲ್ಲಿ ರಾಜಪುರೋಹಿತರು ಕದಂಬಶರ್ಮರೆಂಬ ವಿಪ್ರರಿದ್ದಾರೆ. ಅವರ ಮನೆಯ ಮುಂದೆ ಒಂದು ಈಚಲಮರವಿದೆ. ಅಲ್ಲಿಗೆ ನಡೆ. ನೀನು ಅಲ್ಲಿಗೆ ಹೋಗುವುದರೊಳಗಾಗಿ ನಾನೂ ಬರುತ್ತೇನೆ' ಎಂದು ಹೇಳಿ ಹೊರಟುಹೋದನಂತೆ. ಅದರಂತೆಯೇ ಆತನು ನಮ್ಮ ಮನೆಗೆ ಬಂದನು.

ನಮ್ಮ ತಾತನವರಿಗೆ ಬಹಳ ಸಂತೋಷವಾಗಿ, 'ಹೌದು! ಹೌದು! ಆ ಕಳ್ಳಬ್ರಾಹ್ಮಣ ನನಗೂ ಹೇಳಿದ್ದಾನೆ! ಏಳಿ. ಸ್ನಾನಸಂಧ್ಯೆಗಳಾಗಲಿ. ಆತನೂ ಬರುತ್ತಾನೆ' ಎಂದರಂತೆ. ಹಾಗೆಯೇ ಆತನು ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡರೂ ಆ ಬ್ರಾಹ್ಮಣನು ಬರದಿರಲು, ಆತನು ಬರುವವರೆಗೂ ತಾನೂ ಊಟಮಾಡುವುದಿಲ್ಲವೆಂದು ಹಟಹಿಡಿದು ಈತನು ಕುಳಿತನಂತೆ. ಆಗ ನಮ್ಮ ತಾತನವರು ಮತ್ತೊಮ್ಮೆ ಅಗ್ನಿಯನ್ನು ಹೊತ್ತಿಸಿ ಈತನನ್ನು ಕರೆದು ಹತ್ತಿರ ಕುಳ್ಳಿರಿಸಿಕೊಂಡು ಅಗ್ನಿಗೆ ಆಹುತಿಯನ್ನೀಯಲು ಕೈ ನೀಡಲು ಯಜ್ಞೇಶ್ವರನು ಬಂದನಂತೆ. ಈತನು ಆ ಬ್ರಾಹ್ಮಣನನ್ನು ಗುರುತಿಸಿದನಂತೆ.

ಇಷ್ಟೆಲ್ಲಾ ಆಗುವುದರೊಳಗಾಗಿ ಆನೆಯು ನಮ್ಮ ಬೀದಿಗೆ ಬಂದಿತು. ಮನೆಯವರೆಲ್ಲರೂ ನೋಡುವುದಕ್ಕೆ ಬಾಗಿಲಿಗೆ ಬಂದರು. ಆ ಹೊಸಬನೂ ಬಂದನು. ಆನೆಯು ನಮ್ಮ ಮನೆಯ ಬಾಗಿಲಿಗೆ ಬಂದು ಆ ಹೊಸಬನಿಗೆ ಮಾಲೆಹಾಕಿ ಆತನನ್ನೆತ್ತಿ ತನ್ನ ಕತ್ತಿನಮೇಲೆ ಕುಳ್ಳಿರಿಸಿಕೊಂಡು

ಅರಮನೆಗೆ ಕರೆದುಕೊಂಡು ಹೋಯಿತು. ಅಲ್ಲಿ ಯಥಾವತ್ತಾಗಿ ಆತನಿಗೆ ರಾಜ್ಯಾಭಿಷೇಕವಾಯಿತು. ಆತನೇ ತ್ರಿನೇತ್ರ ಕದಂಬ. ನಿಮ್ಮ ವಂಶದ ಮೂಲಪುರುಷ. ಹೀಗೆ ಆತನು ದೊರೆಯಾದುದು. ಗುರುತರಿಯದ ಪರದೇಶಿ ಯಾವನೋ ಅರಸಾದುದು ಅಂತಃಪುರದಲ್ಲಿ ಕೆಲವರಿಗೆ ಸರಿಬೀಳಲಿಲ್ಲ. ಅವರೆಲ್ಲರೂ ಈ ವಂಶವನ್ನೇ ನಿರ್ಮೂಲಮಾಡಿಬಿಡಬೇಕೆಂದು ಸಮಯ ಕಾದಿದ್ದರು.

ಅವರು ಶಾತವಾಹನನ ಮಗಳ ಸಂತತಿಯವರು. ಅವರು ನಮ್ಮ ತಾತನವರ ಬಳಿಗೂ ಬಂದರು. ಅವರು, 'ದೈವಾನುಗ್ರಹದಿಂದ ಲಭಿಸಿದ ರಾಜ್ಯ. ಇನ್ನು ಮೂರು ತಲೆಗಳವರೆಗೂ ಯಾರೇನು ಮಾಡಿದರೂ ತಪ್ಪಿಸುವುದಕ್ಕಾಗುವುದಿಲ್ಲ. ತಪ್ಪುವುದಾದರೆ ನಾಲ್ಕನೇ ತಲೆಗೇ ತಪ್ಪಬೇಕು' ಎಂದರಂತೆ. ಅವರು ಅದರಿಂದ ಹತಾಶರಾದರೂ ವಂಶಪಾರಂಪರ್ಯವಾಗಿ ಆ ದ್ವೇಷವನ್ನು ಬಿಟ್ಟು ಹೋದರು.

ಆ ವಂಶದಲ್ಲಿ ನಾಗಶ್ರೀಯೆಂಬುವಳೊಬ್ಬಳು ಆದಳು. ಅವಳು ನಾಗಕನ್ನಿಕೆಯೆಂದೇ ಹೇಳಬೇಕು. ಅಂತಹ ವಿಷಪುಚ್ಛ. ಅವಳು 'ಸಮಯ ಸಿಕ್ಕೀತೆ?' ಎಂದು ಕಾದಿದ್ದಳು.

ನಾನು ಕಾಶೀಯಾತ್ರೆಗೆ ಹೊರಟ ಸಮಯವನ್ನು ಸಾಧಿಸಿ ನಾಗಶ್ರೀಯು ಮಲೆಯಾಳದ ಮಂತ್ರಿಕರನ್ನು ಕರೆಯಿಸಿ ಮಂತ್ರಿದಳವಾಯಿಗಳಿಬ್ಬರಿಗೂ ಅಭಿಚಾರಪ್ರಯೋಗ ಮಾಡಿಸಿದಳು. ಮಂತ್ರಿಗೆ ಮನಸ್ಸು ವಿಕಲ್ಪವಾಯಿತು. ದಳವಾಯಿಗೆ ಪಾರ್ಶ್ವವಾಯು ಹೊಡೆಯಿತು. ಈ ಸಮಯವನ್ನು ಸಾಧಿಸಿ ದೊರೆಯನ್ನು ಎಂದರೆ ನಿಮ್ಮ ತಂದೆಯಾದ ಚಂದ್ರವರ್ಮನನ್ನು ಕೊಲ್ಲಿಸಿಬಿಟ್ಟಳು.

ಆಗ ನೀನು ಆರುತಿಂಗಳ ಬೊಮ್ಮಟಿ. ನಿಮ್ಮ ತಾಯಿ ಪುಷ್ಪಾವತಿಯು ತಲಕಾವೇರಿಯ ಅರಸು ಚಂದ್ರವರ್ಮನ ಮಗಳು. ಆಕೆಯು ಏನು ಮಾಡುವುದಕ್ಕೂ ತೋಚದೆ ಹೆದರಿ ಸೂರ್ಯದತ್ತನನ್ನೂ ವಿಶಾಖದತ್ತನನ್ನೂ ಕರೆದುಕೊಂಡು ತವರುಮನೆಗೆ ಓಡಿಹೋದಳು. ನಾಗಶ್ರೀಯು

ರಾಜ್ಯವನ್ನು ಸಾಧಿಸಿ ರಾಣಿಯಾದಳು. ಆಗ ಪಲ್ಲವರ ಕಡೆಯ ರಾಯಭಾರಿಯಾಗಿದ್ದ ಶೇಖರವರ್ಮನು ನಾಗಶ್ರೀಗೆ ಗುಟ್ಟಾಗಿ ಸಹಾಯಮಾಡಿದನಂತೆ.

ನಾನು ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿ ವಿಶ್ವೇಶ್ವರನ ದರ್ಶನಕ್ಕೆ ಹೋಗುತ್ತಿದ್ದರೆ, ದಾರಿಯಲ್ಲಿ ನಿಮ್ಮ ತಂದೆಯು ಎದುರಿಗೆ ಬಂದಂತಾಯಿತು. ಮನಸ್ಸಿಗೆ ಗಾಬರಿಯಾಗಿ ಅಪಾಯವಾಗಿರಬಹುದೆಂದುಕೊಂಡು ಅಲ್ಲಿಂದ ಪ್ರಯಾಗಕ್ಕೆ ಹೋದ ಶಾಸ್ತ್ರಮಾಡಿಕೊಂಡು ಮುಂದಿನ್ನೆಲ್ಲಿಯೂ ಹೋಗದೆ ನೇರವಾಗಿ ಊರಿಗೆ ಬಂದುಬಿಟ್ಟೆನು. ರಾಜಧಾನಿಗೆ ಇನ್ನೂ ನಾಲ್ಕು ಹರದಾರಿ ಇದೆ ಎನ್ನುವಾಗಲೇ ಎಲ್ಲವೂ ತಿಳಿಯಿತು: ಮಂತ್ರಿ ದಳವಾಯಿಗಳ ಮನೆಯನ್ನೂ ನಮ್ಮ ಮನೆಯನ್ನೂ ಮುಟ್ಟುಕೋಲು ಹಾಕಿ ಅರಮನೆಗೆ ಸೇರಿಸಿಕೊಂಡರೆಂತಲೂ ಮಂತ್ರಿ ದಳವಾಯಿಗಳು ಅವರವರ ಭೃತ್ಯರ ಸಾಹಸದಿಂದ ತಲೆ ತಪ್ಪಿಸಿಕೊಂಡು ಹೋದರೆಂತಲೂ ತಿಳಿಯಿತು.

ನಾನು ಯಾವುದನ್ನೂ ನಂಬಲಾರದೆ ಹೋದೆ. ಈಶಭಟ್ಟನು ಬಹಳ ಹೇಳಿದುದರ ಮೇಲೆ ನಾನು ಊರಿಗೆ ಹೋಗದೆ ನಿಂತುಬಿಟ್ಟೆ. ಕುಟುಂಬವನ್ನೆಲ್ಲ ರಾಜಧಾನಿಯಿಂದ ನೂರಾರು ಮೈಲಿಯ ದೂರದ ಹಳ್ಳಿಯಲ್ಲಿ ಬಿಟ್ಟು ನಾನೂ ಈಶಭಟ್ಟನೂ ತಲಕಾವೇರಿಗೆ ಬಂದೆವು. ಅಲ್ಲಿ ನಿಮ್ಮ ತಾಯಿಯನ್ನು ಕಂಡು ಆಕೆಯಿಂದ ವರ್ತಮಾನವೆಲ್ಲವನ್ನೂ ತಿಳಿದುದಾಯಿತು. ನೀನು ಆಗ ಒಂದು ವರುಷದ ಮಗು. ಆ ವೇಳೆಗೆ ಸರಿಯಾಗಿ ಪಲ್ಲವರ ಕಡೆಯ ಭಟರು ಅಲ್ಲಿಗೆ ನಿಮ್ಮ ತಾಯಿಯನ್ನು ಹುಡುಕಿಕೊಂಡು ಬಂದರು. ಅವರಿಗೆ ನಿಮ್ಮ ತಾಯಿಯೂ ನೀನೂ ಮೃತರಾದಿರೆಂದು ಸುಳ್ಳು ಹೇಳಿ ಅವರನ್ನು ಕಳುಹಿಸಿ ಬಿಟ್ಟುದಾಯಿತು.

ಅಲ್ಲಿಂದ ಬಹುಕಷ್ಟದಿಂದ ಮಂತ್ರಿ ದಳವಾಯಿಗಳನ್ನು ಕಂಡುಹಿಡಿದುದಾಯಿತು ಅವರಿಬ್ಬರೂ ಅಮುರಾರ್ಣವದ ತೀರದ ಬೆಸ್ತರ ಹಳ್ಳಿಯೊಂದರಲ್ಲಿ ಒಂದು ಶಿವಾಲಯದ ಮೂಲೆಯಲ್ಲಿ ಇದ್ದುಕೊಂಡು ಇದ್ದರು.

—o—

## ಹದಿನಾರನೆಯ ಪ್ರಕರಣ

ಮಂತ್ರಿ ದಳವಾಯಿಗಳಿಗೆ ಚಿಕಿತ್ಸೆ ಮಾಡುವುದು ಅಷ್ಟು ಕಷ್ಟವಾಗ ಲಿಲ್ಲ. ಗುರುದೇವನ ಅನುಗ್ರಹದಿಂದ ಮೂರು ಪಕ್ಷವೆನ್ನುವುದರೊಳಗಾಗಿ ಇಬ್ಬರಿಗೂ ಗುಣವಾಯಿತು. ಪಲ್ಲವರ ಸಹಾಯ ಪಡೆದು ಮತ್ತೆ ನಿನ್ನನ್ನು ರಾಜನನ್ನಾಗಿಮಾಡಬೇಕೆಂದು ಯತ್ನಿಸಲು ಅವರಿಬ್ಬರನ್ನೂ ಕರೆದುಕೊಂಡು ರಾಜಧಾನಿಗೆ ಬರಬೇಕು ಎಂದುಕೊಳ್ಳುವುದರೊಳಗಾಗಿ, ನಾಗಶ್ರೀಯು ಹೆತ್ತು ಮೃತಳಾದಳೆಂದೂ ಆ ಸಮಯವನ್ನು ಸಾಧಿಸಿ ಪಲ್ಲವ ರಾಯ ಭಾರಿಯು ಬನವಾಸಿ ನಾಡನ್ನು ತಮ್ಮ ರಾಜ್ಯಕ್ಕೇ ಸೇರಿಸಿಕೊಂಡುಬಿಟ್ಟ ನೆಂದೂ ತಿಳಿಯಬಂದಿತು.

ಹೀಗೆ ಪ್ರತಿಕೂಲ ದೈವದಿಂದ ಪದೇಪದೇ ಪರಾಜಿತರಾಗಿ ಏನು ಮಾಡುವುದಕ್ಕೂ ತೋರದೆ ಮತ್ತೆ ರಾಣಿಯನ್ನು ನೋಡೋಣವೆಂದು ಬಂದೆವು. ಆ ವೇಳೆಗೆ ಆಕೆಗೆ ವಿಷಮ ಶೀತಜ್ವರವು ಬಂದು ಜ್ಞಾನಾ ಜ್ಞಾನವಾಗಿ ಹೋಗಿದ್ದಿತು. ಸಾಲದೆ ಆ ಸಮಯಕ್ಕೆ ಸರಿಯಾಗಿ ನೀನು ಬದುಕಿರುವ ಸಂಗತಿಯು ಪಲ್ಲವರಿಗೆ ತಿಳಿಯಿತೆಂದೂ ಅವರು ನಿಮ್ಮ ಮಾತಾ ಮಹನ ಮೇಲೆ ಕಾರಣಾಂತರದಿಂದ ಯುದ್ಧಕ್ಕೆ ಬರುವರೆಂದೂ ಬಲವಾದ ಪ್ರವಾದವು ಹುಟ್ಟಿತು.

ಅದಕ್ಕಾಗಿ ಹೆದರಿ ನಿಮ್ಮ ತಾಯಿಯನ್ನೂ ನಿನ್ನನ್ನೂ ಗುಟ್ಟಾಗಿ ಕರೆ ದುಕೊಂಡು ಬಂದು ಸಹ್ಯಾದ್ರಿಯ ನಡುವಿರುವ ಒಂದು ಗುಪ್ತ ದೇವಾಲಯ ದಲ್ಲಿ ಇಟ್ಟೆವು. ಅಲ್ಲಿ ರಾಣಿಗೆ ಗುಣವಾಯಿತು. ಆಕೆಯು ನಮ್ಮ ಮೂವರನ್ನೂ ಕರೆದು ನಿನ್ನನ್ನು ನಮ್ಮ ಕೈಗೆ ಕೊಟ್ಟು, 'ಇದು ನಿಮ್ಮಾ ಳ್ದನ ವಂಶದಂಕುರ. ಇದನ್ನು ನೀವು ಕಾಪಾಡಿ ದೊಡ್ಡದು ಮಾಡಿ ಪ್ರಭುವಿನ ಮನೆಯನ್ನು ಬೆಳಕುಮಾಡಿ. ಇದು ನನ್ನ ಮಗುವಲ್ಲ; ನಿಮ್ಮ ಮಗು. ನಾನಿನ್ನು ಬಹಳ ದಿನ ಬದುಕಲಾರೆ. ನನ್ನೊಡೆಯನ ಹಂಬಲವು ನನಗೆ ಬಹಳವಾಗಿ ಹೋಗಿದೆ. ಬದುಕಿರುವ ಈ ಮಗನನ್ನೂ ಬಿಡಲಾರೆ; ಸತ್ತು ಸ್ವರ್ಗದಲ್ಲಿರುವ ಗಂಡನನ್ನೂ ಬಿಡಲಾರೆ. ನೀವು ದೊಡ್ಡ ಮನಸ್ಸು ಮಾಡಿದರೆ ನನ್ನ ಆಶೆಯು ತೀರುವುದು' ಎಂದು ಅಂಗಲಾಚಿಕೊಂಡಳು.

ಅರಮನೆಯ ರತ್ನದೀಪವಾಗಿ ಪ್ರಭುವಿನ ಪುಣ್ಯವಾಗಿ ಮಹಾಲಕ್ಷ್ಮಿಯಂತಿದ್ದ ಅರಸಿತಿಯು ಅಂಗಲಾಚುತ್ತಿದ್ದರೆ ಆಗದೆನ್ನುವುದಕ್ಕೆ ಯಾರಿಂದಾದೀತು? ನಾವು ಮೂವರೂ ಒಪ್ಪಿಕೊಂಡೆವು. ಅಷ್ಟೇ ಅಲ್ಲ; ಆ ತಾಯಿಗೆ ನಾವು ಮೂವರೂ, 'ಈ ಮಗುವನ್ನು ದೊರೆಯನ್ನು ಮಾಡುವೆವು. ಇವನ ಪಿತ್ರಾರ್ಜಿತವಾದ ರಾಜ್ಯವನ್ನು ಸಂಪಾದಿಸಿ ಕೊಡುವೆವು. ಪ್ರಭುವಿನ ಋಣವನ್ನು ತೀರಿಸುವೆವು' ಎಂದು ಪ್ರಮಾಣಮಾಡಿಕೊಟ್ಟೆವು.

ಇದಾದ ಕೆಲವು ದಿವಸದಮೇಲೆ ರಾಣಿಯು ಪತಿಸಾನ್ನಿಧ್ಯವನ್ನು ಸೇರಿದಳು. ಆ ವೇಳೆಗೆ ನಿನಗೆ ಇನ್ನೂ ಎರಡು ವರುಷ. ನಿನ್ನನ್ನು ಬೆಳೆಯಿಸುವುದಕ್ಕೆ ನಮ್ಮಿಂದ ಸಾಧ್ಯವಿಲ್ಲ. ಅಲ್ಲದೆ, ನಮ್ಮ ಜೊತೆಯಲ್ಲಿದ್ದರೆ ನಿನಗೆ ಅಪಾಯವು ಹೆಚ್ಚು. ಅದಕ್ಕಾಗಿ ಬ್ರಾಹ್ಮಣರ ಮನೆಯಲ್ಲಿ ಬ್ರಾಹ್ಮಣ ವೇಷದಲ್ಲಿ ಇದ್ದುಬಿಟ್ಟರೆ ಅದರಿಂದ ಹೆಚ್ಚು ಅನುಕೂಲವೆಂದು ಈಶಭಟ್ಟನ ಬಳಿಯಲ್ಲಿ ನಿನ್ನನ್ನು ಬಿಟ್ಟೆವು. ಆತನು ನಿನ್ನನ್ನು ತನ್ನ ಮಗನಂತೆಯೇ ಸಾಕಿದನು.

ನಿನ್ನನ್ನು ಕಂಚಿಗೆ ಓದುವ ನೆಪದಿಂದ ಕಳುಹಿಸಿದುದೂ ನಾವೇ! ಅಲ್ಲಿ ಕ್ಷತ್ರಿಯೋಚಿತವಾದ ವಿದ್ಯೆಯನ್ನು ಕಲಿಯಿಸಬೇಕೆಂಬುದೇ ಉದ್ದೇಶ. ಅಲ್ಲಿ ನೀನು ಕ್ಷತ್ರಿಯನೆಂಬುದನ್ನು ಚೆನ್ನಾಗಿಯೂ ತೋರಿಸಿಕೊಂಡು ಬಿಟ್ಟೆ. ಆಮೇಲೆ ನಿನ್ನನ್ನು ನನ್ನ ಬಳಿಗೆ ಕರೆಯಿಸಿಕೊಂಡೆ.

ನೀನು ನಮ್ಮ ಬಳಿಗೆ ಬರುವವರೆಗೂ ನಾವು ಮೂವರೂ ಕಣ್ಮರೆಯಾಗಿದ್ದುಕೊಂಡು ನಿನ್ನನ್ನು ನೋಡಿಕೊಳ್ಳುತ್ತಿದ್ದೆವು. ನಿನ್ನ ಸುಖದುಃಖಗಳಿರಲಿ; ನಿನಗೆ ಹಾದಿಯಲ್ಲಿ ನಡೆಯುವಾಗ ಒಂದು ಕಲ್ಲು ಒತ್ತಿತೆಂದು ತಿಳಿದರೆ ನಮಗೆ ಕಣ್ಣಿನಲ್ಲಿ ನೀರು ಬರುತ್ತಿದ್ದಿತು. ಈಶಭಟ್ಟನು ನಿನಗೆ ಯಾವ ಜನ್ಮದ ತಂದೆಯೋ? ಹಡೆದ ತಂದೆಯೂ ಮಕ್ಕಳನ್ನು ಹಾಗೆ ಬೆಳೆಸುವುದಿಲ್ಲ, ಅಷ್ಟು ಪ್ರೀತಿಯಿಂದ ಅಭಿಮಾನದಿಂದ ಹೆಚ್ಚುಕಡಿಮೆ ಇಲ್ಲದಂತೆ ನಿನ್ನ ಮುಂದಿನ ರಾಜತ್ವಕ್ಕೆ ತಕ್ಕಂತೆ ಬೆಳೆಯಿಸಿದನು. ನೀನು ಆತನಿಗೆ ಎಷ್ಟು ಜನ್ಮಗಳು ದೇಹವನ್ನು ತೇಯ್ದರೂ ಆತನ ಋಣವನ್ನು ತೀರಿಸಲಾರೆ'

ಕಥೆಯನ್ನು ಕೇಳಿ ಮಯೂರನ ಹೃದಯವು ಕರಗಿಹೋಗಿ ಕಣ್ಣಿಂದ ನೀರು ಹರಿಯುತ್ತಿದ್ದಿತು. ವಿಹ್ವಲನಾಗಿ ವಿರಸನಾಗಿ ಅನ್ಯಚಿತ್ತನಾಗಿ ಮಯೂರನು ಕೇಳಿದನು: 'ನಮ್ಮಮ್ಮನು ನೋಡುವುದಕ್ಕೆ ಹೇಗಿದ್ದಳು ?'

'ಆಕೆಯ ರೂಪವನ್ನು ಕಂಡು ಬಗೆಯು ಮೆಚ್ಚಬಲ್ಲುದಲ್ಲದೆ ಬಾಯಿ ಹೇಳಲಾರದು. ಆಕೆಯು ಆಕಾಶದಿಂದ ಇಳಿದುಬಂದ ದೇವತೆ! ಕಂಡರೆ ಕೈ ಮುಗಿಯಬೇಕೆನ್ನಿಸುವುದು. ಕಣ್ಣು ಕೋರೈಸುವುದು. ಬಲಿತ ದಂತದಮೇಲೆ ಚಿನ್ನದ ನೀರಾಡಿಸಿದಂತೆ ತೋರುವ ಮೈಬಣ್ಣ ; ನೇರಳೆಯ ಹಣ್ಣಿಗಷ್ಟು ಕಪ್ಪನ್ನು ಕೊಡುವ ಕಪ್ಪಿನ ಕೂದಲು; ವಿಸ್ತಾರವಾದ ಕಣ್ಣುಗಳು. ಅಷ್ಟೇನು ! ಹೇಗೆಹೇಗೆ ಹೇಳಿದರೂ ಆಕೆಯನ್ನು ಬಣ್ಣಿಸುವುದು ಅಸಾಧ್ಯ. ನೀನು ಸ್ಕಂದಸ್ವಾಮಿಯ ದರ್ಶನ ಮಾಡಿದಾಗ ಪಕ್ಕದಲ್ಲಿ ಮಾತೃ ದೇವತೆಗಳನ್ನೂ ಕಂಡೆಯಲ್ಲ ! ಅವರಲ್ಲಿ ಬ್ರಾಹ್ಮೀದೇವಿಯ ರೂಪವು ನಿನಗೆ ನೆನೆಪಿರುವುದೇನು ? ಆಕೆಯೂ ಹಾಗೆಯೇ ಇದ್ದಳು ಈಗೇಕೆ ಆ ಮಾತು ?'

'ನನಗೆ ಕನಸಿನಲ್ಲಿ ಆಗಾಗ ದೇವಿಯೊಬ್ಬಳ ದರ್ಶನವಾಗುತ್ತದೆ. ಆಕೆಯ ದರ್ಶನವಾದಾಗಲೆಲ್ಲ ನಾನು ಬೆಟ್ಟವನ್ನು ಹತ್ತುತ್ತಲೇ ಇರುತ್ತೇನೆ. ಆಕೆಯು ಎಡಗೈಯಲ್ಲೊಂದು ರತ್ನಮಯವಾದ ದಂಡವನ್ನೂ ಬಲಗೈಯಲ್ಲಿ ಒಂದು ಕಿರೀಟವನ್ನೂ ಹಿಡಿದುಕೊಂಡು ಮೇಲೆಮೇಲಕ್ಕೆ ಹೋಗುತ್ತ, 'ಬಾ ಕಂದಾ ! ಬಾ ! ನಿನಗಾಗಿ ಸಂಪಾದಿಸಿಟ್ಟಿರುವ ಈ ಕಿರೀಟವನ್ನೂ ದಂಡವನ್ನೂ ತೆಗೆದುಕೋ, ಬಾ' ಎಂದು ಕರೆಯುತ್ತಾ ಕರೆಯುತ್ತಾ ಮುಂದು ಮುಂದಕ್ಕೆ ಹೋಗುವಳು. ಆಕೆಯೂ ತಾವು ಹೇಳಿದಂತೆ ಬ್ರಾಹ್ಮೀದೇವಿಯಂತೆಯೇ ಇರುವಳು. ಆಕೆಯನ್ನು ಕಂಡಾಗಲೆಲ್ಲ ಆಕೆಯನ್ನು 'ಅಮ್ಮಾ !' ಎಂದು ಕೂಗಿ ಓಡಿಹೋಗಿ ತಬ್ಬಿಕೊಳ್ಳಬೇಕು ಎನ್ನಿಸುವುದು. ಎಚ್ಚರವಾದ ಮೇಲೆ ನಮ್ಮಮ್ಮನೂ ಹೀಗೆಯೇ ಇದ್ದಳೇನ್ನೋ ಎನ್ನಿಸುವುದು. ಅದಕ್ಕಾಗಿ ಕೇಳಿದೆ'

ಯತಿಯು ಅಸ್ಥಿರನಾಗಿದ್ದನು, ಮುಖದಲ್ಲಿ ವಿಷಾದವು ಒಡೆದು ಕಾಣುತ್ತಿದ್ದಿತು. ಸ್ಥಿರ ದೃಷ್ಟಿಯಿಂದ ಎತ್ತಲೋ ನೋಡುತ್ತ ಕುಳಿತಿದ್ದನು. ಕಣ್ಣಿನಲ್ಲಿ ಕೊಂಚ ನೀರಾಡುತ್ತಿದ್ದಂತೆ ತೋರುತ್ತಿದ್ದಿತು.

ಮಯೂರನು ಒಂದುಗಳಿಗೆ ತಡೆದು, 'ತಪೋಬಲವಿರುವವರು ಶತ್ರುಗಳನ್ನು ಕ್ಷಣಮಾತ್ರದಲ್ಲಿ ನಿಗ್ರಹಿಸಲಾರರೆ?' ಎಂದು ಕೇಳಿದನು.

ಯತಿಯು ನಕ್ಕು, 'ತಪಸ್ಸು ದೈವದಂತೆ, ಯಾವಾಗಲೂ ಮರೆಯಲ್ಲೇ ಇದ್ದು ಫಲವನ್ನು ಕೊಡುವುದು. ಚಿನ್ನದ ಒಡವೆಗೆ ಬೆಲೆಯುಂಟು; ಹಣವನ್ನು ತರಬಲ್ಲುದು; ಆದರೆ ಅದೇ ಹಣವಲ್ಲ. ಹಾಗೆ ತಪಸ್ಸು. ಶಾಪಾನುಗ್ರಹಗಳೆರಡರಿಂದಲೂ ತಪಸ್ಸು ವ್ಯಯವಾಗುವುದು. ಆದರೆ ಅವು ದೈವಸಮ್ಮತವಾಗಿದ್ದರೆ ಮಾತ್ರ, ತಪಸ್ಸನ್ನು ಬೆಳೆಸುವುವು. ಹಾಗಿಲ್ಲವಾದರೆ ಅವುಗಳಿಂದ ತಪೋಹಾನಿಯು ಬೇಕಾದಷ್ಟು ಆಗುವುದು. ಅದರಿಂದಲೇ ತಪೋಬಲವುಳ್ಳವರು ಎಷ್ಟು ಕೋಪಬಂದರೂ ಪ್ರೀತಿಬಂದರೂ ಕಾಲವು ಬರುವವರೆಗೂ ತಡೆದು ಬಿಡುವರು. ತಪೋವ್ಯಯದ ವಿಚಾರದಲ್ಲಿ ತಪಸ್ವಿಗಳು ಬಹು ಕೃಪಣರು' ಎಂದನು.

ಮಯೂರನು ಮುಂದೆ ಮಾತನಾಡಲಿಲ್ಲ. ಇನ್ನೊಂದು ಕ್ಷಣಕಾಲ ಅಲ್ಲಿದ್ದು ಹೊರಟು ಹೋದನು. ಆತನು ಸಂಜೆಯಲ್ಲಿ ಈಚೆಗೆ ಬಂದಿದ್ದಾಗ ಬೈರಾಗಿಯು ಸಿಕ್ಕಿದನು. ಮಯೂರನು ಅವನನ್ನು ಕಂಡು 'ನಿಮ್ಮಿಂದ ಒಂದು ಕೆಲಸವಾಗಬೇಕು. ಇಷ್ಟು ದಿನವಾದರೂ ಗುರುಗಳ ಹೆಸರೇನೆಂದು ನಾನು ಕಾಣೆ. ಇನ್ನು ಯಾರನ್ನೂ ಕೇಳಿದರೂ ತಿಳಿಯುವಂತಿಲ್ಲ' ಎಂದನು.

ಬೈರಾಗಿಯು ಅವನ ಮುಖವನ್ನು ಅಡ್ಡನೋಟದಿಂದ ನೋಡಿ ಮರುಕದ ನಗೆ ನಕ್ಕು, 'ಇವರೇ ವೀರಶರ್ಮರು. ನಿಮ್ಮ ವಂಶದ ಏಳ್ಗೆಯ ಅಡಿಗಲ್ಲು' ಎಂದನು.

ಇಬ್ಬರೂ ನಕ್ಕರು.

—— o ——

## ಹದಿನೇಳನೆಯ ಪ್ರಕರಣ.

ಬನವಾಸಿಯಲ್ಲಿ ಇಂದು ದೊಡ್ಡ ಹಬ್ಬ. ಸಮ್ರಾಜರ ವರ್ಧಂತಿ. ಪಟ್ಟಣವೆಲ್ಲವೂ ಶೃಂಗಾರವಾಗಿದೆ. ತಳಿರು ತೋರಣಗಳೂ ಪುಟ್ಟಪುಟ್ಟ ಪತಾಕೆಗಳೂ ಧ್ವಜಸ್ತಂಭಗಳೂ ರಾಜಬೀದಿಗಳಲ್ಲೆಲ್ಲ ಮೆರೆಯುತ್ತಿವೆ. ಈ ವರ್ಷದ ವಿಶೇಷವೆಂದರೆ ಸುಮಾರು ಇಪ್ಪತ್ತೈದು ವರ್ಷಗಳಿಂದಲೂ

ಹಬ್ಬ ಹರಿದಿನಗಳನ್ನೂ ಆಚರಿಸದೆ ಒಳಕೊರಗಿನಿಂದ ಸೊರಗಿದ್ದ ಹಿಂದಿನ ರಾಜನ ಪರಿವಾರದವರೂ ಉತ್ಸವದಲ್ಲಿ ಭಾಗಿಗಳಾಗಿರುವುದು. ಅವರ ಮನೆಯ ಮುಂದೆಯೂ ಸಾರಣೆ ಕಾರಣೆಗಳಾಗಿ ಮಾವಿನ ತೋರಣವು ಮೆರೆಯುತ್ತಿದೆ. ಸಣ್ಣ ಗಾಳಿಯಲ್ಲಿ ಪುಟ್ಟದೆರೆಗಳನ್ನು ಹಾರಿಸುತ್ತ ನಿಧಾನವಾಗಿ ಹರಿದುಕೊಂಡು ಹೋಗುವ ಬಯಲ ನಾಡಿನ ನದಿಯಂತೆ ಬನವಾಸಿಯು ಮನೋಹರವಾಗಿದೆ.

ನಗರದ ನಡುವೆ ಭವ್ಯವಾದ ರಾಜಪ್ರಾಸಾದ. ಪೂರ್ವಸಮುದ್ರದಿಂದ ಅಮರಾರ್ಣವವೆಂದು ಹೆಸರಾದ ಪಶ್ಚಿಮಸಮುದ್ರದವರೆಗೂ ಪಸರಿಸಿದ ಸಾಮ್ರಾಜ್ಯದ ಸಮ್ರಾಜನ ಪ್ರತಿನಿಧಿಯಾದ ಮಹಾಮಾಂಡಲಿಕೇಶ್ವರನ ಅರಮನೆ. ಸಾಮ್ರಾಜ್ಯದ ವೈಭವವನ್ನೂ ಸಮ್ರಾಜನ ಪ್ರತಿಷ್ಠೆಯನ್ನೂ ಪ್ರಭಾವವನ್ನೂ ತೋರಿಸಬೇಕೆಂದು ಕಟ್ಟಿರುವ ಒಳ್ಳೆಯ ಕಟ್ಟಡ. ನೋಡಿದವರಿಗೆ ಏಕಕಾಲದಲ್ಲಿ ಪ್ರೀತಿಯೂ ಭೀತಿಯೂ ಹುಟ್ಟುವ ಹಾಗೆ ಮಾಡುವ ಸೊಗಸಿನ ಮೂರು ಅಂತಸ್ತಿನ ಕರುಮಾಡ. ಊರಿನವರ ಉತ್ಸಾಹವು ರಾಜಗೃಹದಲ್ಲಿಯೂ ಕಾಣಬರುತ್ತಿದೆ. ಮೊದಲೇ ಸುಸಜ್ಜಿತವಾದ ಸೆಜ್ಜೆಯು ಇಂದು ಹೆಚ್ಚಿನ ವೈಭವಗಳಿಂದ ಅಲಂಕಾರಗಳಿಂದ ಒಡವೆಗಳನ್ನಿಟ್ಟು ಪೀತಾಂಬರವನ್ನುಟ್ಟು ಮೆರೆವ ಸ್ವಭಾವಸುಂದರಿಯಂತೆ ಚೆಲುವಾಗಿದೆ. ಅವಸರವಾಗಿ ಓಡಾಡುತ್ತಿರುವ ಪ್ರತೀಹಾರಿಗಳ ಸಂಭ್ರಮ. ಸಮ್ರಾಜನ ಪ್ರತಿನಿಧಿಯ ಆಸ್ಥಾನಕ್ಕೆ ಬರುವುದಕ್ಕೆ ಒಂದವಕಾಶವು ದೊರೆತು ಬಾಳಿದ ಬದುಕು ಸಾರ್ಥಕವಾಯಿತಲ್ಲ ಎಂದು ಬೀಗುತ್ತಿರುವವರ ಪ್ರಕಟಸಂತೋಷ. ತಾವು ಅರಮನೆಯ ದತ್ತಪುತ್ರರೆಂಬುದನ್ನು ತಮ್ಮ ವಸ್ತ್ರ ಭೂಷಣಗಳಿಂದಲೇ ಹೇಳಿಕೊಳ್ಳುತ್ತಿರುವ ರಾಜಾಶ್ರಿತರ ಅಹಂಕಾರ. ರಾಜಪ್ರತಿನಿಧಿಯ ಆಸ್ಥಾನಕ್ಕೆ ತಾವು ಬಂದಿರುವುದೇ ಪರಮಾನುಗ್ರಹವೆಂದು ಬಿಗಿದುಕೊಂಡಿರುವವರ ಬಡಿವಾರ. ಇವೆಲ್ಲವೂ ಸೇರಿ ವಿವಿಧ ಜೀವಾಶ್ರಯವಾದ ಸಾಗರದಂತೆ ಅರಮನೆಯೂ ಶೋಭಿಸುತ್ತಿದೆ.

ಅರಮನೆಯ ಹಿಂದುಗಡೆಯ ಮಾಡದಲ್ಲಿ ಸುಸಜ್ಜಿತವಾದ ಒಂದು ತೊಟ್ಟಿ. ರತ್ನಗಂಬಳಿಯನ್ನು ಹಾಸಿದೆ. ಅದರ ಮೇಲೆ ಶ್ರೀಗಂಧದಲ್ಲಿ ದಂತ

ವನ್ನು ಕೆತ್ತಿರುವ ಚಿನ್ನ ಬೆಳ್ಳಿಯ ಹೂಗಳಿಂದ ಚಿತ್ರಿತವಾಗಿರುವ ಮೃದುವಾದ ಮೆತ್ತೆಯಿಂದ ಭೂಷಿತವಾಗಿರುವ ಒಂದು ಉನ್ನತಾಸನ. ಅದರ ಮಗ್ಗುಲಲ್ಲಿ ಅಷ್ಟು ಭವ್ಯವಲ್ಲದಿದ್ದರೂ ಉತ್ತಮವಾದ ಇನ್ನೊಂದು ಉನ್ನತಾಸನ. ಆ ಎರಡು ಆಸನಗಳಲ್ಲಿಯೂ ಇಬ್ಬರು ಮಂಡಿಸಿದ್ದಾರೆ. ಕೌಳುಡೆಯನ್ನು ಒರಗಿಕೊಂಡು ಎಡಮಂಡಿಯಮೇಲೆ ನೀಡಿದ ಕೈಯನ್ನಿಟ್ಟುಕೊಂಡು ಕುಳಿತಿರುವವನೇ ಪಲ್ಲವ ಸಮ್ರಾಜನ ಪ್ರತಿನಿಧಿ ದಂತವರ್ಮ. ಇನ್ನೊಬ್ಬನು ಸಂಧಿವಿಗ್ರಹಿಯಾದ ಮಾಂಡಲಿಕ ನಂದಿವರ್ಮ.

ಇಬ್ಬರೂ ವಸ್ತ್ರಭೂಷಣಗಳಿಂದ ಅಲಂಕೃತರಾಗಿದ್ದಾರೆ. ಆದರೆ ಒಬ್ಬನ ಮನಸ್ಸಿನಲ್ಲಿ ಕಾತರತೆಯು, ಸಂಶಯದ ಸೋಂಕು, ಮನೆಮಾಡಿ ಇನ್ನೊಬ್ಬನಿಗೂ ಅದರ ಸೆಕೆಯು ತಟ್ಟಿದೆ. ಆದರೆ ಅದು ಹಾರಿಹೋಗುವ ಮೇಘವು ಮುಸುಕಿರುವಂತೆ. ಆತನಿಗೆ ಸಂದೇಹಕ್ಕೆ ಎಡೆಕೊಡಲು ಇಷ್ಟವಿಲ್ಲ, ನಂದಿವರ್ಮನು ಹೇಳಿದನು: 'ಪ್ರಭುಗಳವರು ಒಂದನ್ನು ಗಮನಿಸಬೇಕು: ಈ ನೀಲಕಂಠಗುಪ್ತನು ಬಂದು ಇನ್ನೂ ಎರಡು ವರ್ಷವಾಗಿಲ್ಲ; ಆಗಲೇ ಜನರ ಮನಸ್ಸನ್ನು ಇವನೆಷ್ಟು ಆಕರ್ಷಿಸಿದ್ದಾನೆ ಎಂಬುದು ಸ್ವಾಮಿಯ ಚಿತ್ತಕ್ಕೆ ವೇದ್ಯವಿರಬೇಕು. ನಿನ್ನೆಯ ದಿನ ಆದುದು ನೋಡುವುದಕ್ಕೆ ಬಲು ಸಣ್ಣ ವಿಷಯ. ಆದರೆ ಅದೊಂದು ಗುರುತು. ಜನರ ಮನಸ್ಸಿನಲ್ಲಿ ಯಾರೂ ಅರಿಯದಂತೆ ನಡೆಯುತ್ತಿರುವ ಬದಲಾವಣೆಯ ಕುರುಹು. ರಾಜಧಾನಿಯಿಂದ, ಗಂಡನು ಭಂಡನೆಂಬ ಕಾರಣದಿಂದ, ಒಬ್ಬ ಹೆಂಗಸು ತನ್ನ ಇಬ್ಬರು ಮಕ್ಕಳೊಡನೆ ಗಣಿಗಳಿಗೆ ಹೊರಟುಹೋದಳೆಂದರೆ ಏನು ಅರ್ಥ? ಸ್ವಾಮಿಯವರು ವಿಚಾರಿಸೋಣವಾಗಲಿ'

ದಂತಿವರ್ಮನು, 'ಮಂತ್ರೀಶ್ವರ! ತಾವು ಸೂಕ್ಷ್ಮಬುದ್ಧಿಗಳೆಂಬುದನ್ನು ನಾನು ಅನೇಕವೇಳೆ ಮನಗಂಡಿದ್ದೇನೆ. ತಾವು ಹೇಳುವುದನ್ನು ನಂಬಬೇಕೆಂದು ನಾನು ಎಷ್ಟು ಯತ್ನಿಸಿದರೂ ಸಫಲವಾಗಲಿಲ್ಲ. ನನಗಿದೇ ಯೋಚನೆಯಾಗಿದೆ. ತಾವು ಒಂದನ್ನು ಗಮನಿಸಿದಿರಾ? ಈ ಹೆಂಗುಸಿಗೆ ಬಾರೆಂದು ಆಹ್ವಾನವಿತ್ತವರು ಯಾರಾದರೂ ಉಂಟೇನು? ಇವಳು ಕೂಲಿನಾಲಿಮಾಡಿಕೊಂಡು ಜೀವನ ಮಾಡುವವಳು. ಅವಳಿಗೆ ಇಲ್ಲಾದ

ರೇನು? ಅಲ್ಲಾದರೇನು? ಅಲ್ಲದೆ, ಇಂತಹ ಸಂದರ್ಭದಲ್ಲಿ ಪೂರ್ವೋತ್ತರ ಗಳನ್ನೆಲ್ಲ ಸಂಪೂರ್ಣವಾಗಿ ವಿಶದವಾಗಿ ತಿಳಿಯಲಾಗುವುದಿಲ್ಲ; ತಿಳಿಯಲೂ ಬಾರದು ಎಂದು ನನ್ನ ನಂಬಿಕೆ. ತಾವೂ ವಿಮರ್ಶೆಮಾಡಿ ನೋಡಿ. ತಮಗೂ ನಂಬಿಕೆಯಾಗುತ್ತದೆ' ಎಂದನು.

ನಂದಿವರ್ಮನು ಪ್ರತಿಹತನಾಗಲಿಲ್ಲ. ತಾನು ಸರಿಯಾಗಿದ್ದರೂ ತನ್ನ ಆ ಸಿದ್ಧಾಂತವನ್ನು ಮನ್ನಿಸಲಿಲ್ಲವೆಂಬ ನಂಬಿಕೆಯಿಂದ ಹುಟ್ಟುವ ಕೋಪ ದಿಂದ ಕ್ರುದ್ಧನಾದರೂ, ಯತ್ನವಿಲ್ಲದೆ ಸಣ್ಣಗೆ ನಗುತ್ತ ಮತ್ತೆ ಹೇಳಿದನು: 'ಅವಳನ್ನು ಆಕರ್ಷಿಸಿದುದು ಕೂಲಿನಾಲಿ ಮಾಡಿಕೊಂಡು ಹೊಟ್ಟೆ ಹೊರೆ ಯಲು ಅಲ್ಲಿರುವ ಅನುಕೂಲಗಳಲ್ಲ, ಆತನು ತನ್ನ ಭೃತ್ಯರ ವಿಷಯದಲ್ಲಿ ತೋರಿಸುವ ದಯೆ. ಅವಳು ಹೊರಟಾಗ ಕುಲಸ್ವಾಮಿಗಳು ಬಂದು, 'ಇರು. ಏಕೆ ಹೋಗಬೇಕು?' ಎಂದಾಗ, 'ಇಲ್ಲಿದ್ದು ಈ ಮುಕ್ಕನೊಡನೆ ಸಂಸಾರ ಮಾಡಿ ನವೆಯುವದಕ್ಕಿಂತ ಆ ಪುಣ್ಯಾತ್ಮನ ಬಳಿಯಲ್ಲಿ ಹೊಟ್ಟೇ ಹಸಿದು ಬಿದ್ದಿರುವುದೇ ಮೇಲು; ಬಡವರ ಪಾಲಿನ ದೇವರಾಗಿ ಬಂದಿರುವ ಅಪ್ಪನ ಕೈಕಾಲು ಕಟ್ಟಿಕೊಂಡರೆ ಹೊಟ್ಟೆತುಂಬ ಅನ್ನ ಮೈತುಂಬ ಬಟ್ಟೆ ಸಿಕ್ಕುವಾಗ ಈ ಬಂಡಬಾಳೇಕೆ?' ಎಂದಳಂತೆ. ದೇಶದಲ್ಲಿ ಅಷ್ಟು ಬುದ್ಧಿವಂತರಲ್ಲದ ಹಳ್ಳಿಗಾಡಿನವರ ಬಾಯಲ್ಲಿ ಈ ಮಾತು ಬರುವುದು ಅತಿಶಯವಲ್ಲ. ರಾಜ ಧಾನಿಯಲ್ಲಿ ಹುಟ್ಟಿ ಬೆಳೆದವಳು, ಅವಳ ಬಾಯಲ್ಲಿ ಈಮಾತು ಬರುವುದೆಂದರೆ ದೇಶದ ಹೃದಯದಲ್ಲಿ ಈ ಮಾತು ವಜ್ರಲೇಪವಾಗಿರಬೇಕು. ರಾಜನೊಬ್ಬ ನಲ್ಲದೆ ಇನ್ನಾರೇ ಆಗಲಿ ಈ ರೀತಿಯಾದ ಪ್ರಜಾನುರಾಗವನ್ನು ಪಡೆಯ ಕೂಡದು. ಪಡೆದರೆ ರಾಜರು ಅದನ್ನು ಸೈರಿಸಕೂಡದು'

'ಮಂತ್ರೀಶ್ವರರ ರಾಜನೀತಿಜ್ಞತೆಯೂ ದೂರದರ್ಶಿತ್ವವೂ ಅನನ್ಯ ಸಾಧಾರಣವಾದವು. ಆದರೂ ಹೊಡೆದು ಬಡಿಯುವ ಭಂಡಗಂಡನ ಹೆಂಡತಿ ಯಾಗಿದ್ದು ನೊಂದವಳ ಮಾತಿನಿಂದ ದೇಶದ ಹೃದಯದಲ್ಲಿ ಆಳುವ ಏಳುವ ಭಾವತರಂಗಗಳನ್ನು ಅಳೆಯಲು ನಾನು ಸಿದ್ಧನಾಗಿಲ್ಲ'

'ಸ್ವಾಮಿಯ ಚಿತ್ತ. ಆದರೂ ಕೊನೆಯ ಮಾತಿದನ್ನು ಚಿತ್ತವಿಸ ಬೇಕು. ಹಿಂದಿನ ಅರಸರ ಕಡೆಯವರೆಂದು ಗುರುತಾದ ಕೆಲವರು ಇದು

ವರೆಗೂ ಈ ವರ್ಧಂತಿಯೇ ಮೊದಲಾದ ಸಂದರ್ಭಗಳಲ್ಲಿ ಅಷ್ಟು ಉತ್ಸಾಹ ವನ್ನು ತೋರ್ಪಡಿಸುತ್ತಿರಲಿಲ್ಲ. ಈ ಸಲ ಎಲ್ಲರ ಮನೆಯ ಬಾಗಿಲಲ್ಲೂ ಹಸುರು ತೋರಣ, ಬಣ್ಣ, ಸುಣ್ಣ ಇದಕ್ಕೂ ಅರ್ಥವಿಲ್ಲವೇ?'

'ಇದೇಕೆ ತಾವು ಹೀಗೆ ಹಾರುವ ಹಕ್ಕಿಯು ಉದುರಿಸಿದ ಗರಿಗಳನ್ನೆಲ್ಲ ಲೆಕ್ಕಿಸುತ್ತಿರುವಿರಿ? ನಾವೇ ಕರೆಯಿಸಿ ಅವರಿಗೆ ಸಾಮೋಕ್ತಿಗಳನ್ನು ಹೇಳಿ ಅವರನ್ನು ಒಲಿಯಿಸಿಕೊಳ್ಳಲಿಲ್ಲವೆ? ಸಚಿವರೆ! ಈ ದಿನ ಉತ್ಸವದ ಸಂಭ್ರಮದಲ್ಲಿ ಸಂತೋಷದಿಂದಿರೋಣ. ನಾಳೆಯಿಂದ ಇದ್ದೇ ಇದೆ ಯಲ್ಲ!' ಎಂದು, ದಂತಿವರ್ಮನು ಎದ್ದು ಹೊರಡಲನುವಾದನು. ನಂದಿ ವರ್ಮನು ಅಪ್ರತಿಭನಾದರೂ ಪ್ರತಿಹತನಾಗದೆ, ಸೋತರೂ ಗೆಲುವಿನ ನಗೆಯನ್ನು ನಗುತ್ತಾ, 'ಅಪ್ಪಣೆ! ನೀಲಕಂಠಗುಪ್ತನ ಕೈಯಲ್ಲಿರುವ ಉಂಗುರದ ಪರೀಕ್ಷೆಗೆ ಇಂದು ಒಳ್ಳೆಯ ಅವಕಾಶ!' ಎಂದನು.

ದಂತಿವರ್ಮನು ಮುಂದಕ್ಕೆ ಹೊರಟಿದ್ದವನು ಹಿಂದಕ್ಕೆ ತಿರುಗಿ, ತನ್ನ ಅಸಮಾಧಾನವನ್ನು ತೋರಿಸಿಕೊಳ್ಳದಿರಲು ಒಂದು ಸಣ್ಣ ನಗೆ ನಕ್ಕು, 'ತಾವೇ! ಅದಕ್ಕೆಲ್ಲ ತಾವೇಸರಿ!' ಎಂದು ಹೊರಟನು.

ನಂದಿವರ್ಮನು, 'ಇವನೇ ಸಮ್ರಾಜನ ಪ್ರತಿನಿಧಿಯಾಗಿ ಆಳುವವನು! ಇರಲಿ!' ಎಂದು ಹಲ್ಲುಕಡಿದು, ಹಿಂದು ಮುಂದೆ ನೋಡಿ ತಾನೂ ಹೊರಟು ಹೋದನು. ಆತನು ಹೋದ ಅಷ್ಟುಹೊತ್ತಿನ ಮೇಲೆ ಅಲ್ಲಿದ್ದ ನಿಲುವು ಗನ್ನಡಿಯು ಮಗ್ಗುಲಾಗಿ ಒಬ್ಬನು ಇಳಿದು ಅವಸರವಸರವಾಗಿ ಹೊರಟು ಹೋದನು.

—o—

## ಹದಿನೆಂಟನೆಯ ಪ್ರಕರಣ

ರಾಜಸಭೆಯು ನೆರೆದಿದೆ. ಇನ್ನೇನು ಕೊಂಚಹೊತ್ತಿನೊಳಗಾಗಿ ಮಾಂಡಲಿಕೇಶ್ವರರವರು ಬಂದು ಗದ್ದುಗೆಯಲ್ಲಿ ಮಂಡಿಸುವರು. ಎಲ್ಲರೂ ತಮ್ಮತಮ್ಮ ಕಾಣಿಕೆಗಳನ್ನು ನೋಡಿಕೊಂಡು ವಸ್ತ್ರಭೂಷಣಗಳನ್ನು ಸರಿ ಪಡಿಸಿಕೊಂಡು ಸಿದ್ಧರಾಗುತ್ತಿದ್ದಾರೆ. ಎಲ್ಲರೂ ಯಾರನ್ನೋ ಹುಡುಕು ತ್ತಿದ್ದಾರೆ. ಎಲ್ಲೆಲ್ಲೂ ಪಿಸಪಿಸ ಗುಸಗುಸ; 'ಹೌದು! ಬಂದಹಾಗೆ ತೋರ

ಲಿಲ್ಲ. ಆತನು ಸಮುದ್ರವ್ಯಾಪಾರ ಮಾಡಬೇಕು. ಅದಕ್ಕೆ ಹಡಗಿನ ಪಡೆ ಯಿಡಬೇಕು' ಎಂದನಂತೆ. ನಂದಿವರ್ಮನು 'ಕೂಡದು' ಎಂದನಂತೆ, ಅಂದಿನಿಂದ ಇಬ್ಬರಿಗೂ ಹಾಗೆ ಹಾಗೆಯೇ ಅಂತೆ. ಇಂದು ಸಭೆಗೂ ಬರು ವನೋ ಇಲ್ಲವೋ?'

'ಅವರಿಬ್ಬರ ಸ್ನೇಹದಲ್ಲಿ ನಂದಿವರ್ಮನ ಮಾತು ಕೇಳುವರಾರು? ಅಲ್ಲದೆ ಗುಪ್ತನು ಸ್ವಾಭಿಮಾನಿ. ಅವನು ಕೇಳಿದ್ದಾನೆಂಬುದರಲ್ಲಿಯೇ ನನಗೆ ಸಂದೇಹ! ಒಂದು ವೇಳೆ ಕೇಳಿದ್ದರೆ ಅದು ಎಂದಿಗೂ ತಪ್ಪುವುದಿಲ್ಲ ಬಂದೇ ಬರುತ್ತದೆ. ದಂತಿವರ್ಮನಿಗೆ ಪಂಚಪ್ರಾಣ ಈ ಗುಪ್ತನನ್ನು ಕಂಡರೆ!'

ಹೀಗೆ ಹಲವು ತೆರದ ಮಾತುಗಳು ಆಗುತ್ತಿರುವಾಗ ಮಹಾದ್ವಾರದಲ್ಲಿ ಏನೋ ಗದ್ದಲವಾದಂತಾಗಿ ಎಲ್ಲರ ಕಣ್ಣೂ ಅತ್ತ ತಿರುಗಿದುವು. ಉತ್ತರ ಕ್ಷಣದಲ್ಲಿ ನೀಲಕಂಠಗುಪ್ತನು ರಾಜಸಭೆಯನ್ನು ಪ್ರವೇಶಿಸಿದನು. ಆಡಂಬರ ವಿಲ್ಲದಿದ್ದರೂ ಅಣಿಯಿಂದ ಉಟ್ಟು ತೊಟ್ಟ ಉಡುಗೆತೊಡುಗೆಗಳೂ, ಇಟ್ಟ ಒಡವೆಗಳೂ ಅಂದವನ್ನು ಕಾಣಿಸಿ ಮನವನ್ನು ಮೆಚ್ಚಿಸುವಂತಿದ್ದುವು. ಕತ್ತಿ ನಲ್ಲಿ ಅನರ್ಘವಾದ ರತ್ನಹಾರವೊಂದು, ನಡುವಿನಲ್ಲಿ ಚಿನ್ನದ ಒರೆಯಲ್ಲಿದ್ದು ಹುತ್ತದಲ್ಲಿರುವ ಹಾವಿನಂತೆ ಮರೆಯಲ್ಲಿದ್ದರೂ ಮೆರೆಯುವ ಖಡ್ಗ. ಕೈಯಲ್ಲಿ ರಾಜಾರ್ಹವಾದ ಉಂಗುರಗಳು. ಕಿವಿಯಲ್ಲಿ ತಳಪಳನೆ ಮೆರೆಯುವ ವಜ್ರದ ಕಡುಕುಗಳು. ಒಟ್ಟಿನಲ್ಲಿ ಜಂಭವೆಂದು ತಿರಸ್ಕಾರವನ್ನು ಹುಟ್ಟಿಸದೆ ಗುಣ ವಂತನೆಂದು ಮನಗಾಣಿಸಿ ಮೆಚ್ಚುಗೊಳ್ಳುವ ಶೃಂಗಾರ.

ಆತನ ಹಿಂದೆಯೇ ಬಂದ ಆಳು ಒಂದು ಪೆಟ್ಟಿಗೆಯನ್ನು ತಂದಿಟ್ಟು ಅದರ ಬಾಗಿಲು ತೆಗೆದನು. ಒಳಗಿದ್ದ ವಸ್ತುವು ತನ್ನ ಪ್ರಕಾಶದಿಂದ ನೋಡಿದವರ ಕಣ್ಣನ್ನುಕುಕ್ಕಿತು. ಅದೇನೆಂದು ಮತ್ತೊಮ್ಮೆ ನೋಡ ಬೇಕೆನ್ನುವುದರೊಳಗಾಗಿ, ರಾಜಾಗಮನವನ್ನು ಸೂಚಿಸುವ ಪ್ರಹರಿಯ ದೀರ್ಘ ಗಂಭೀರ ಕಂಠಸ್ವನವು ಕೇಳಿಸಿ ಎಲ್ಲರೂ ಸುಮ್ಮನಾಗಬೇಕಾಯಿತು.

ಮತ್ತೊಂದು ಗಳಿಗೆಯೊಳಗಾಗಿ ಸಮ್ರಾಜನ ಪ್ರತಿನಿಧಿಯು ಸ್ವರ್ಣ ಸಿಂಹಾಸನವನ್ನು ಮಂಡಿಸಿದ್ದನು. ಶ್ರೀಮಂತ ನೀಲಕಂಠವರ್ಮನೂ ಎಂದಿ ನಂತೆ ಬಂದು ಕೈಮುಗಿದು ಕಾಣಿಕೆಯನ್ನೊಪ್ಪಿಸಲು ಹೋದಾಗ ನಂದಿ

ವರ್ಮನು ಬಹು ಚತುರತೆಯಿಂದ ಕೈಯನ್ನು ಹೊರಳಸಿ ಏನನ್ನೋ ನೋಡಲು ಯತ್ನಿಸಿದಂತೆ ತೋರಿತು. ಗುಪ್ತನು ಸಿದ್ಧನಾಗಿದ್ದನೋ ಏನೋ? ಕೈಯು ಹೊರಳಲಿಲ್ಲ. ಸಚಿವನ ಇಷ್ಟವು ನೆರವೇರಿದಂತೆ ತೋರ ಲಿಲ್ಲ. ಆ ಇಬ್ಬರ ಕೈಗಳಿಗೂ ಬಾಯಿದ್ದರೆ ಗುಪ್ತನ ಕೈಗಳು 'ಎಚ್ಚರಿಕೆ' ಯೆನ್ನುತ್ತಿದ್ದವೋ ಏನೋ?

ಕಾಣಿಕೆಗಳನ್ನು ಒಪ್ಪಿಸಿ ಎಲ್ಲರೂ ಸ್ವಸ್ಥಾನಗಳನ್ನು ಸೇರಿದರು. ಗುಪ್ತನು ಸಿಂಹಾಸನದ ಮುಂದೆ ಬಂದು ನಿಂತು ಅನುಪಮ ರಾಜಭಕ್ತಿಯ ಭಾರದಿಂದ ಬಗ್ಗಿದವನಂತೆ ಬಗ್ಗಿ ವಿನೀತನಾಗಿ ವಂದಿಸಿದನು. ಉತ್ತರಕ್ಷಣ ದಲ್ಲಿಯೇ ಸುಸಜ್ಜಿತವಾಗಿ ಅಲಂಕೃತವಾಗಿ ಮೆರೆಯುತ್ತಿರುವ ಸ್ವರ್ಣರಥ ವೊಂದು ತಾನಾಗಿ ಮುಂಬರಿದು ಕಿರುಗಂಟೆಗಳ ಇಂಚರದಿಂದ ಮನೋಹರ ವಾಗಿ ಮಂದಗಮನದಿಂದ ಬಂದು ಸಿಂಹಾಸನದ ಮುಂದೆ ನಿಂತಿತು. ಕೂಡಲೆ ರಥದಲ್ಲಿದ್ದ ಪ್ರತಿಮೆಯು ಕೈನೀಡಿ ಪತ್ರವೊಂದನ್ನು ಮುಂದಕ್ಕೆ ಚಾಚಿತು. ನಂದಿವರ್ಮನು ಮುಂದೆ ಬಂದು ಅದನ್ನು ತೆಗೆದುಕೊಂಡು ಹೋಗಿ ಅಧಿಕಾರಿಗೆ ಒಪ್ಪಿಸಿದನು. ಅದರಲ್ಲಿ 'ಒಳಗೊಪ್ಪಿ ಹೊರಗೊಪ್ಪಿಸಿದ ಕಾಣಿಕೆ' ಎಂದಿದ್ದಿತು.

ರಥವನ್ನು ಕಂಡು ಎಲ್ಲರೂ ಬೆರಗಾದರು. ಸೂಕ್ಷ್ಮವಾದರೂ ಸ್ಫುಟ ವಾದ ಶಿಲ್ಪಕೌಶಲದಿಂದ ಸುಂದರವಾದ ರಥ. ಅದರಲ್ಲಿ ಸಜೀವ ಪುತ್ಥಳಿ ಯಂತೆ ಕಾಣುತ್ತ ಕಣ್ಣು ಮನಗಳನ್ನು ಅಪಹರಿಸುವ ಬೊಂಬೆ. ಮಾಟವಾದ ಕಿರುಗೆಜ್ಜೆಗಳು. ಅಂತಸ್ತಂತಸ್ತಾಗಿ ಮೇಲಕ್ಕೆದ್ದಿರುವ ರಥದ ಗೋಪುರ. ಸಣ್ಣಗೆ ಹಾರಾಡುವ ಪುಟ್ಟ ಧ್ವಜ. ಸುತ್ತಲೂ ಸಣ್ಣಗೆ ಅಲೆಯುತ್ತಿರುವ ಸ್ವರ್ಣಪುಷ್ಪಮಾಲೆ. ಎಲ್ಲದಕ್ಕಿಂತಲೂ ಹೆಚ್ಚಾಗಿ ಎಡವದೆ ತಡವದೆ ತಾನಾಗಿ ನೇರವಾಗಿ ಮುಂದೆ ಬಂದು ಸಿಂಹಾಸನದ ಮುಂದೆ ನಿಂತುಕೊಳ್ಳು ವಂತೆ ವಿರಚಿಸಿರುವ ಯಾಂತ್ರಿಕ ನೈಪುಣ್ಯ. ಒಂದಕ್ಕಿಂತಲೂ ಒಂದು ವಿಚಿತ್ರ ವಾಗಿದ್ದಿತು. ಇನ್ನೊಮ್ಮೆ ನೋಡಬೇಕೆಂದುಕೊಳ್ಳುತ್ತಿರುವುದರೊಳಗಾಗಿ, ರಥವು ಮತ್ತೆ ಹೊರಟು, ಎಲ್ಲರ ಕಣ್ಣೂ ತನ್ನನ್ನೇ ಹಿಂಬಾಲಿಸುತ್ತಿರಲು ತಾನು ಮೊದಲಿದ್ದೆಡೆಗೆ ಬಂದುಬಿಟ್ಟಿತು.

ಸಭಿಕರು ಬೆರಗಾದರು. ದಂತಿವರ್ಮನು ಸಂತೋಷದಿಂದ ಕಿರುನಗೆಯನ್ನು ಕಾಣಿಸಿ ಸ್ನೇಹಾರ್ದ್ರವಾದ ದೃಷ್ಟಿಯಿಂದ ಗುಪ್ತನನ್ನು ಇದ್ದೆಡೆಯಿಂದಲೇ ಆಲಂಗಿಸಿದನು. ಗುಪ್ತನೂ ಎಲ್ಲರ ಕಣ್ಣೂ ತನ್ನಮೇಲಿರುವುದನ್ನು ತಿಳಿದು, ರಾಜದೃಷ್ಟಿಯು ಹೆಚ್ಚುತ್ತಿರುವ ಸ್ನೇಹಾವೇಗದಿಂದ ತರಂಗತರಂಗವಾಗಿ ತನ್ನನ್ನು ಅಪ್ಪುತ್ತಿರುವುದನ್ನು ಅರಿತು, ತಲೆಯನ್ನು ಬಗ್ಗಿಸಿಕೊಂಡು ನಿಂತಿದ್ದನು. ನಂದಿವರ್ಮನು ದುಂಡುಮಲ್ಲಿಗೆಯ ದಂಡೆಹಾರವೊಂದನ್ನು ತಂದು ಆತನ ಕೊರಳಿಗೆ ಹಾಕಿ, ಉತ್ತಮ ಶಾಲುಜೋಡಿಯೊಂದನ್ನು ಹೊದಿಸಿದನು: ಗುಪ್ತನು ಕುತೂಹಲಾವಿಷ್ಟನಾಗಿ ತಲೆಯೆತ್ತಿ ನಂದಿವರ್ಮನ ಕಣ್ಣುಗಳನ್ನೇ ನೋಡಿದನು. ಆತನ ನಿರೀಕ್ಷೆಯು ವಿಫಲವಾಗಲಿಲ್ಲ. ಸೂಸುತ್ತಿರುವ ಮಂದಹಾಸದೊಡನೆ ಕಿಡಿಗಣ್ಣಿನ ಕೆಟ್ಟ ನೋಟವು ಬೆರೆತಿದ್ದಿತು. ಮಲ್ಲಿಕಾಮಾಲೆಯನ್ನಿಕ್ಕುತ್ತಿರುವ ಕೈಗಳು ಕರವಾಳವನ್ನು ಕಿತ್ತೆಳೆಯಲು ಮಿಡುಕುತ್ತಿದ್ದಂತೆ ತೋರಿತು. ಗುಪ್ತನು ಕಂಡೂ ಕಾಣದಂತಿರುವ ನೀತಿಜ್ಞರ ನಯವನ್ನು ಅನುಸರಿಸಿ, ಮಾರ್ಮಿಕವಾದ ಗಂಭೀರವಾದ ಅಪಹಾಸ್ಯ ತಿರಸ್ಕಾರಗಳಿಂದ ಕೂಡಿ ಸಣ್ಣಗಿದ್ದರೂ ತೀವ್ರವಾದ ನಗೆಯನ್ನು ನಕ್ಕು, ಮಾಡಿದ ಮರ್ಯಾದೆಯನ್ನಂಗೀಕರಿಸಿದುದರ ಗುರುತಾಗಿ ತಗ್ಗಿ ಬಗ್ಗಿ ಕೈಜೋಡಿಸಿ ಸಿಂಹಾಸನಕ್ಕೆ ತಲೆಬಾಗಿ ವಂದಿಸಿದನು. ಆದರೆ ಬಲಗೈಯ್ಯು ಎಡಗೈಯನ್ನು ಮುಚ್ಚಿದ್ದಿತು. ಮತ್ತೆಯೂ ನಂದಿವರ್ಮನ ಕಣ್ಣು ಹತಾಶವಾಗಿ ಹಿಂತಿರುಗಿತು. ಪದೇಪದೇ ವಿಫಲ ಮನೋರಥನಾಗುವ ಅಭ್ಯಾಸವಿಲ್ಲದ ಆತನ ಮನಸ್ಸಿಗೆ ಆದ ಆಯಾಸವು ಗುರುತಿಟ್ಟು ಚಿತ್ರಿಸಿದಂತೆ ಕಣ್ಣಲ್ಲಿ ಕಾಣುತ್ತಿದ್ದಿತು. ಆದರೆ, ಸಭಾಸ್ಥಾನದ ಸಂಭ್ರಮದಲ್ಲಿ ಬೆರೆತವರು ಯಾರು ಅದನ್ನು ಗಮನಿಸುವರು?

ಸಭೆಯು ಮುಗಿದು ಎಲ್ಲರೂ ತಿರುಗುತ್ತಿರುವ ಹಾಗೆಯೇ, ನಾನು ತಾನೆಂದು ಸಭಿಕರೆಲ್ಲರೂ ಬಂದು ಗುಪ್ತನಿಗೆ ತಮ್ಮತಮ್ಮ ಮೆಚ್ಚನ್ನು ಸೂಚಿಸುತ್ತಿರುವ ಹಾಗೆಯೇ, ಗುಪ್ತನು ಒಳಕ್ಕೆ ಬರಬೇಕೆಂದು ರಾಜಾಜ್ಞೆಯಾಯಿತು. ಉತ್ತರಕ್ಷಣದಲ್ಲಿಯೇ ಗುಪ್ತನೂ ದಂತಿವರ್ಮನೂ ಮಾತನಾಡುತ್ತಿದ್ದರು.

ದಂತಿವರ್ಮನು ಸಂತೃಪ್ತಿಯ ಸೌಭಾಗ್ಯವನ್ನು ಸೂಚಿಸುವ ಸ್ಮಿತದಿಂದ, 'ನಾನು ತಾವು ಇಷ್ಟು ದೊಡ್ಡ ಕಾಣಿಕೆಯನ್ನು ಒಪ್ಪಿಸುವಿರೆಂದುಕೊಂಡಿರಲಿಲ್ಲ. ಈ ಕಾಣಿಕೆಯೂ ತಮ್ಮ ವಿಶ್ವಾಸದಂತೆಯೇ ಬಲು ಭಾರಿಯಾಗಿದೆ' ಎಂದನು.

ಗುಪ್ತನು ಗೆಲ್ಲುವ ಸಣ್ಣ ನಗೆಯನ್ನು ನಕ್ಕು ಅರಿಕೆಮಾಡಿದನು: 'ಕಾಣಿಕೆಯು ಒಪ್ಪಿಸಿಕೊಳ್ಳುವವರ ಅಂತಸ್ತಿಗೆ ತಕ್ಕಂತೆ ಇರಬೇಕಲ್ಲವೆ? ತಾವು ಸಮ್ರಾಜರ ಪ್ರತಿನಿಧಿಗಳು. ತಮಗಿಂತಲೂ ಭಾರಿಯೇ ಈ ಕಾಣಿಕೆ? ತಾವು ಒಪ್ಪಿಸಿಕೊಂಡುದೇ ಒಂದು ಅನುಗ್ರಹ.'

'ಗುಪ್ತರೇ! ತಮ್ಮ ಸ್ನೇಹವು ನನ್ನನ್ನು ತಮ್ಮವನನ್ನಾಗಿ ಮಾಡಿಕೊಂಡಿರಲು ನಾನೂ ತಮ್ಮ ಕೈಯಿನ ಬೊಂಬೆಯೇ ಎನ್ನಬಹುದು. ಹೀಗಿರಲು ಕಾಣಿಕೆಯೆಂದು ಬಂದುದನ್ನು ಪರಿಗ್ರಹಿಸದಿರುವುದೆಂತು? ಅದಿರಲಿ. ಅದು ನಿಜವೇ? ತಮ್ಮ ಒಂದು ಹಡಗೂ ಮೂರು ದೋಣಿಗಳೂ ಕಡಲುಗಳ್ಳರ ಪಾಲಾದುವಂತೆ. ದಿಟವೇ?'

ಗುಪ್ತನು ನೆಲದ ಕಡೆ ನೋಡುತ್ತಿದ್ದ ನೋಟವನ್ನು ಮೇಲಕ್ಕೆ ತಿರುಗಿಸಿ ರಾಜಾಧಿಕಾರಿಯ ಮುಖವನ್ನು ನೋಡಿ ಮತ್ತೆ ತಗ್ಗಿಸಿದನು. ಮುಖದ ಮುದ್ರೆಯು ಗಂಭೀರವಾಗಿದ್ದುದು ಮತ್ತೆ ಸಡಲಿ ಎಳನಗೆಗೆ ಅವಕಾಶ ಕೊಟ್ಟಿತು. ಗುಪ್ತನು ಮತ್ತೆ ತಲೆಯೆತ್ತಿ, 'ಪ್ರಭು! ದೇವರು ಈ ಕೈಯಿಂದ ಕೊಟ್ಟುದನ್ನು ಆ ಕೈಯಿಂದ ತೆಗೆದುಕೊಳ್ಳುವನೆಂಬುದಕ್ಕೆ ಇನ್ನೊಂದು ಸಾಕ್ಷ್ಯ ಒದಗಿತು' ಎಂದನು.

ದಂತಿವರ್ಮನು ಆ ಮಾತಿನರ್ಥವನ್ನು ಗ್ರಹಿಸಿದನು. ತಪ್ಪಿಸಲು ಸಾಧ್ಯವಾಗಿದ್ದ ಕೆಡಕು ಸಂಭವಿಸಿದರೆ ಅದರ ಹೊಣೆಗಾರಿಕೆಯನ್ನು ಮತ್ತೊಬ್ಬರ ಮಡುಲಿಗೆ ಕಟ್ಟುವ ಮನುಷ್ಯ ಸ್ವಭಾವವನ್ನು ತಿರಸ್ಕರಿಸಿ, ಒಮ್ಮೆ ಬಂದುದು ಇನ್ನೊಮ್ಮೆ ಹೋಗಲೇಬೇಕೆಂಬ ವೇದಾಂತದ ಮಾತನ್ನಾಡಿದ, ಆವರಿಸಿದ ನಷ್ಟದ ದುಃಖವನ್ನು ದೈವಗತಿಯೆಂದು ಬಗೆದು ಔದಾಸೀನ್ಯ ವಹಿಸಿದ ವರ್ತಕನ ವರ್ತನವು ಆತನ ಹೃದಯವನ್ನು ಸಂಗ್ರಹಿಸದೆ ಬಿಡಲಿಲ್ಲ. ತಾನೂ ನಂದಿವರ್ಮನ ಮಾತಿಗೆ ಕಿವಿ ಜೋಲು ಬಿಡದೆ ಇದ್ದಿದ್ದರೆ ತನ್ನ ಪರಮಾಪ್ತನೆಂದುಕೊಂಡಿರುವ ಗುಪ್ತನಿಗೆ ಇಂತಹ ಹಾನಿಯಾಗುತ್ತಿರಲಿಲ್ಲವೆಂಬ

ಅರ್ಥವು ಮನಸ್ಸಿಗೆ ಸ್ಪಷ್ಟವಾಗಿ ಆತನ ಬಗೆಯನ್ನು ನೋಯಿಸಿತು. ಒಂದು ಗಳಿಗೆ ಸುಮ್ಮನಿದ್ದು, 'ಮನಸ್ಸಿಗೆ ಆಯಾಸಪಟ್ಟುಕೊಳ್ಳಬೇಡಿ; ಇನ್ನೊಮ್ಮೆ ಇಂತಹ ಹಾನಿಯಾಗದಂತೆ ನೋಡಿಕೊಳ್ಳೋಣ. ಈಗಲೂ ರಾಜಾಧಿಕಾರಿಗಳು ಕಡಲುಗಳ್ಳರನ್ನು ಹಿಡಿಯಲು ಯತ್ನಿಸುತ್ತಿದ್ದಾರೆ' ಎಂದನು

ಗುಪ್ತನು ಕೂಡಲೇ, 'ಇಲ್ಲ, ನನಗಾಗಿ ಸನ್ನಿಧಾನವು ಅಷ್ಟು ಕಾತರಗೊಳ್ಳಬೇಕಾಗಿಲ್ಲ. ಇನ್ನುಮುಂದೆ ನಮ್ಮ ವ್ಯಾಪಾರವನ್ನೆಲ್ಲ ತೆಂಕಣವರಿಗೆ ವಹಿಸಿಬಿಡುತ್ತೇನೆ' ಎಂದನು.

'ಹಾಗೆಂದರೆ?'

'ನಮಗೆ ಕಡಲಪಡೆಯನ್ನು ಇಡುವ ತೊಂದರೆ ತಪ್ಪುತ್ತದೆ'

'ಉಂಟೆ? ಇಷ್ಟು ಭಾರಿಯ ವ್ಯಾಪಾರವನ್ನು ಪರಕೀಯರ ಕೈಗೆ ಕೊಡುವುದೇ? ನಾನು ಮತ್ತೆ ಸಮ್ರಾಜರಲ್ಲಿ ವಿನಂತಿ ಮಾಡುತ್ತೇನೆ. ತಾವು ಆ ವಿಚಾರವನ್ನು ನನಗೆ ಬಿಡಿ'

ಹೀಗೆ ಕೊಂಚಹೊತ್ತು ಮಾತು ನಡೆದು ಗುಪ್ತನನ್ನು ಬೀಳ್ಕೊಟ್ಟು ಮಾಂಡಲಿಕೇಶ್ವರನು ಒಳಗೆ ನಡೆದನು. ಗುಪ್ತನು ಬಂದ ದಾರಿಯಿಂದ ಹೊರಕ್ಕೆ ಹೋಗುತ್ತಿರುವಾಗ ಮತ್ತೊಂದು ಕಡೆಯ ಬಾಗಿಲು ತೆಗೆದು ಯಾರೋ ಅಲ್ಲಿಂದ ಸನ್ನೆಮಾಡಿದಂತಾಯಿತು. ಗುಪ್ತನು ಇತ್ತಕಡೆ ಬರುತ್ತಿದ್ದವನು ತಟ್ಟನೆ ತಿರುಗಿ ಆ ಬಾಗಲಲ್ಲಿ ಹೊರಟುಹೋದನು. ಹೋಗುತ್ತಿರುವಾಗ ದಾರಿಯಲ್ಲಿ ಯಾರೋ 'ಅಲ್ಲಿಯೇ ಆ ಮಾಂಡಲಿಕನು ಕಾಧಿದ್ದಾನೆ' ಎಂದು ಪಿಸಗುಟ್ಟಿದ ಹಾಗಾಯಿತು.

*　　*　　*　　*　　*

ನಂದಿವರ್ಮನು ಬಹಳ ಹೊತ್ತು ಕಾದಿದ್ದು ಮತ್ತೆ ಹತಾಶನಾಗಿ ಹೊರಟುಹೋದನು. ಆಗ ಆತನ ಮುಖದಮೇಲೆ ಭತ್ತವನ್ನು ಎರಚಿದ್ದರೆ ಅರಳಾಗುತ್ತಿದ್ದಿತು.

——o——

## ಹತ್ತೊಂಬತ್ತನೆಯ ಪ್ರಕರಣ

ಸಹ್ಯಾದ್ರಿಗೆ ಮೂಡಲಾಗಿ ತುಂಗಾನದಿಗೆ ತೆಂಕಲಾಗಿ ಬೆಟ್ಟಗಳ ನಡುವೆ ಚಿನ್ನದ ಗಣಿ. ಉತ್ತರ ದೇಶದಿಂದ ಅಪಾರವಾದ ಐಶ್ವರ್ಯವನ್ನು ತೆಗೆದುಕೊಂಡು ಇಲ್ಲಿಯೇ ನೆಲಸುವುದಕ್ಕೆ ಬಂದಿರುವ ನೀಲಕಂಠಗುಪ್ತನೇ ಅದರ ಸ್ವಾಮಿ. ಗಣಿಗಳ ಕೆಲಸವು ಬಹಳ ಸಮರ್ಪಕವಾಗಿ ನಡೆಯುತ್ತಿದ್ದಿತು ಅಥವಾ ರಾಜಾದಾಯವು ಕ್ರಮವಾಗಿ ಸಂದಾಯವಾಗುತ್ತಿದ್ದಿತು.

ಒಂದು ದಿನ ಗಣಿಗಳ ಒಡೆಯನು ತನ್ನ ಕಿರುಮನೆಯಲ್ಲಿ ಆಲೋಚನಾಮಗ್ನನಾಗಿ ಕುಳಿತಿದ್ದಾನೆ. ಆಗ ಪ್ರಹರಿಯು ಬಂದು 'ಸ್ವಾಮಿಯನ್ನು ಕಾಣಬೇಕೆಂದು ಒಬ್ಬ ಬೈರಾಗಿಯು ಬಂದಿದ್ದಾನೆ' ಎಂದು ಅರಿಕೆಮಾಡಿದನು.

ಗುಪ್ತನು ಕೇಳಿದನು : 'ಏಕಂತೆ ?'

'ಆತನ ಬಳಿಯಲ್ಲಿ ಒಂದು ಗಂಧದ ತುಂಡು ಇದೆಯಂತೆ. ಅದನ್ನು ತಮಗೆ ಕೊಟ್ಟು ಇಂದಿನ ವೆಚ್ಚಕ್ಕೆ ಏನಾದರೂ ಪಡೆಯಬೇಕಂತೆ'

'ಬರಹೇಳು'

ಉತ್ತರಕ್ಷಣದಲ್ಲಿಯೇ ಪ್ರಹರಿಯು ಒಬ್ಬ ಬೈರಾಗಿಯನ್ನು ಕರೆತಂದು ಒಳಗೆ ಬಿಟ್ಟು ಹೊರಕ್ಕೆ ಹೋದನು. ಗುಪ್ತನು ಹೃಷ್ಟಚಿತ್ತನಾಗಿ ಬೈರಾಗಿಗೆ ನಮಸ್ಕಾರಮಾಡಿ ಬರಮಾಡಿಕೊಂಡನು.

ಬೈರಾಗಿಯು ಕೇಳಿದನು: 'ಇಲ್ಲಿಯ ಕೆಲಸಗಳು ಹೇಗೆ ನಡೆಯುತ್ತಿವೆ?'

'ದೇವಸ್ಥಾನಕ್ಕೆ ಹೋಗಲು ಗುರುಗಳು ತಮ್ಮನ್ನು ಕಾದಿದ್ದಾರೆ. ನರಸಿಂಹಗುಪ್ತರ ದೇವಸ್ಥಾನದ ಕೆಲಸವು ಮುಗಿಯುತ್ತಾ ಬಂದಿದೆ. ತಾವು ಹೋಗಿದ್ದ ಕೆಲಸವೇನಾಯಿತು ?'

'ನಾಡ ಗೌಡರನ್ನೂ ಕುಲಸಭೆಗಳ ಯಜಮಾನರನ್ನೂ ಕಂಡು ಬಂದುದಾಯಿತು. ಎಲ್ಲರೂ ಹೇಳುವುದಷ್ಟೆ ! ಆದ ಮಟ್ಟಿಗೆ ರಕ್ತಪಾತವು

ಕಡಿಮೆಯಾಗಲಿ. ಯತ್ನವಿಲ್ಲದೆ ಹೋದರೆ ಬಲಿಕೊಡುವುದಕ್ಕೆ ಸಿದ್ಧರಾಗಿದ್ದೇವೆ'

'ಹೌದು. ಗುರುಗಳ ಅಭಿಪ್ರಾಯವೂ ಅಷ್ಟೆ! ಗುಪ್ತರು ಮಾತ್ರ ಹಾಗೂ ಹೀಗೂ ಇದ್ದಾರೆ. ಏನೇ ಆಗಲಿ ಬೇಕೆಂದರೆ ಕತ್ತಿ ಹಿರಿದು ಮುಂದೆ ನುಗ್ಗುವುದಕ್ಕೆ ಹತ್ತುಸಾವಿರ ಜನವಾದರೂ ಸಿದ್ಧರಾಗಬೇಕೆಂದು ಅವರ ಅಭಿಪ್ರಾಯ. ಅಲ್ಲದೆ ಸಮಯಬಂದರೆ ಒಂದು ಕಡೆಯಲ್ಲ, ಹತ್ತಾರು ಕಡೆಗಳಲ್ಲಿ ಒಂದೇ ಕಾಲದಲ್ಲಿ ಹತ್ತು ಸಾವಿರದ ಗುಂಪುಗಳು ಹತ್ತಾದರೂ ಸಿದ್ಧವಾಗಿರಬೇಕೆಂದು ಅವರ ಮತ'

'ಗುಪ್ತರು ಹಿಂದಿನ ಕಾಲದವರು. ಹೊಡೆದು ಹಿಡಿಯಲ್ಲಿ ಅಡಗಿಸಿಕೊಳ್ಳಬೇಕೆಂಬುವವರು. ಅವರದೇನೂ ತಪ್ಪಿಲ್ಲ'

'ನನಗೂ ಗುಪ್ತರ ಮಾತು ಅರ್ಧ ಒಪ್ಪಿಗೆ. ಯುದ್ಧಕ್ಕಲ್ಲದಿದ್ದರೂ ಇದೆಯೆಂದು ತೋರಿಸಿಕೊಳ್ಳುವುದಕ್ಕಾದರೂ ನಮಗೆ ಸೈನ್ಯವಿರಬೇಕು, ಲೋಕದ ಕಣ್ಣಿಗೆ ಮೊದಲು ಹಿಡಿಯುವುದು ಆಡಂಬರ'

ಬೈರಾಗಿಯು ನಕ್ಕು, 'ಹಾಗಾದರೆ ಇದನ್ನು ನೋಡಿ' ಎಂದು ತನ್ನ ಕಂತೆಯಿಂದ ಒಂದು ಕಟ್ಟಿಗೆಯ ತುಂಡನ್ನು ತೆಗೆದು ಮುಂದಿಟ್ಟನು. ನೋಡುವುದಕ್ಕೆ ಅದು ತೇದ ಗಂಧದ ತುಂಡಿನಂತಿತ್ತು. ಗುಪ್ತನು ಅದನ್ನು ತೆಗೆದುಕೊಂಡು ಹಿಂದು ಮುಂದೆ ನೋಡಿ ಸುತ್ತಮುತ್ತ ಯಾರೂ ಇಲ್ಲವೆಂದು ನಿರ್ಧರಮಾಡಿಕೊಂಡು ಅದನ್ನು ತೆಗೆದನು. ಅದರ ನಡುವೆ ಒಂದು ಸೀಳು. ಆ ಸೀಳಿಗೆ ಕೈಯಿಟ್ಟು ಆ ತುಂಡನ್ನು ಹೋಳುಮಾಡಿದರೆ ಅದರಲ್ಲಿ ಒಂದು ಕಾಗದ. ಅದರಲ್ಲಿ ಏನೂ ಹೆಚ್ಚಿಗೆ ಇಲ್ಲ; 'ಆಗಬಹುದು. ಆದರೆ ಹುಲಿ?' ಇದರ ಜೊತೆಗೆ ಬೇರೆ ಬೇರೆ ಗುರುತುಗಳು.

ಗುಪ್ತನು ಕೇಳಿದನು: 'ಇದೇನು?'

'ಅವು ನಾಡುನಾಡುಗಳ ಸಂಕೇತಗಳು. ಡೊಂಕುಡೊಂಕಾಗಿರುವುದು ನಾಗರಖಂಡ. ಈ ಕಡೆಗೆ ಬಾಗಿ ಮುಂದಕ್ಕೆ ಹೋಗಿರುವ ಕೊಂಕುಗೆರೆಯು ಕೊಡಗು ದೇಶ. ಅಲೆಗಳಂತೆ ಕಾಣುವ ಗುರುತು ಕಡಲಂಚು.

ಗುಪ್ಪೆ ಗುಪ್ಪೆಯಾಗಿ ಕಾಣುವುದು ಬೆಟ್ಟಸೀಮೆ. ಈ ನಾಲ್ಕು ನಾಡಿನವರೂ ಸಿದ್ಧರಾಗಿದ್ದಾರೆ. ಈ ನಾಲ್ಕುಕಡೆಗಳಲ್ಲಿಯೂ ಸೇರಿ ಐವತ್ತು ಸಾವಿರ ಜನರು ಸಿದ್ಧವಾಗಿದ್ದಾರೆ. ಇವರಿಗೆ ಕುದುರೆಗಳನ್ನೂ ಆಯುಧಗಳನ್ನೂ ಒದಗಿಸುವುದು ನಮ್ಮ ಭಾರ. ಈಗ ಗುರುಗಳೆಲ್ಲಿದ್ದಾರೆ?'

'ಅವರು ಕೊಡಗಿಗೆ ಹೋಗಿದ್ದಾರೆ. ಸಾಧ್ಯವಾದರೆ ಅಲ್ಲಿಂದ ಒಂದು ಆನೆಯ ಪಡೆಯನ್ನು ತರಬೇಕೆಂದು ಅವರ ಆಶೆ'

'ಯಾವಾಗ ಬರುತ್ತಾರೆ.?'

'ಇನ್ನೂ ಎಂಟು ದಿನವಾಗಬಹುದು'

'ಹಾಗಾದರೆ ಆಮೇಲೆ ಬಂದು ನೋಡುತ್ತೇನೆ'

'ತಮ್ಮಲ್ಲಿ ಹೇಳುವುದು ಇನ್ನೊಂದು ಉಳಿದಿದೆ'

ಬೈರಾಗಿಯು ಎದ್ದಿದ್ದವನು ಮತ್ತೆ ಕುಳಿತುಕೊಂಡನು. ಗುಪ್ತನು ಹೇಳಿದನು: 'ನಂದಿವರ್ಮರಿಗೆ ನಮ್ಮ ಮೇಲೆ ಅನುಮಾನ ಬಂದಂತಿದೆ' ಬೈರಾಗಿಯು ನಕ್ಕು, 'ಆ ವಿಚಾರ ನನಗೆ ದೃಢವಾಗುತ್ತಿದೆ. ಮೊದಲು ಉಂಗುರವನ್ನು ಬೇರೆಮಾಡಿ ಅವನಿಗೆ ತೋರಿಸಿ ಬನ್ನಿ, ಎಚ್ಚರವಾಗಿರಿ. ನಮ್ಮೆಲ್ಲರ ಮೇಲೂ ಅನುಮಾನವಿದೆ ಆದರೆ ಯತ್ನವಿಲ್ಲದೆ ಸುಮ್ಮನಿದ್ದಾನೆ' ಎಂದನು.

ಆ ವೇಳೆಗೆ ಪ್ರಹರಿಯು ಬಂದು ಒಂದು ಪತ್ರವನ್ನೊಪ್ಪಿಸಿ ಹೋದನು. ಅದರಲ್ಲಿ ಒಂದು ಮಕ್ಕಳ ಬರವಣಿಗೆಯಂತಿದ್ದ ಪತ್ರ. ಅದರಲ್ಲ ಪ್ರತಿಯೊಂದು ಮೂರನೆಯಕ್ಷರವನ್ನೂ ಸೇರಿಸಿ ಓದಿದರೆ ಕೆಳಗೆ ಬರೆದಿರುವಂತೆ ಆಯಿತು:

'ನೀಲಕಂಠಗುಪ್ತನ ವಿಚಾರ ಪೂರ್ವೋತ್ತರಗಳು ಸ್ಫುಟವಾಗಿಲ್ಲ. ಈ ಸಲ ಯುವರಾಜರ ವರ್ಧಂತಿಗೆ ಬರಮಾಡಿಕೊಂಡು ಅಲ್ಲಿ ಹದಿನೈದು ದಿನ ತಡೆದು ಇಟ್ಟಿದ್ದರೆ ಒಳ್ಳೆಯದು. ರಾಜಪ್ರತಿನಿಧಿಗಳಂತೂ ಅವನಿಗೆ ವಿಶ್ರೀತರಾಗಿ ಹೋಗಿದ್ದಾರೆ. ಈ ಸಲವೂ ಉಂಗುರದ ಪರೀಕ್ಷೆಯು ಸಾಧ್ಯವಾಗಲಿಲ್ಲ. ಆ ಗಣಿಯನ್ನು ಒಮ್ಮೆ ಹುಡುಕಬೇಕು. ಹಾಗೆಯೇ ಅಭಟ

ಪ್ರವೇಶವಾದ ಭಟಮಾನ್ಯದಲ್ಲಿ ಕಟ್ಟುತ್ತಿರುವ ದೇವಸ್ಥಾನದ ವಿಚಾರ ವಾಗಿಯೂ ನನಗೆ ಸಂದೇಹ. ಎರಡಕ್ಕೂ ಸಂಬಂಧವಿರುವುದಾದರೆ ಸಂದೇಹವು ಸ್ಥಿರವಾದಂತೆಯೆ! ಅಂತೂ ಹುಡುಕುತ್ತಿದ್ದೇನೆ. ನಾನು ಸ್ವತಂತ್ರಿಸಿ ಬರೆದಿರುವುದು ಯಾರಿಗೂ ತಿಳಿಯಕೂಡದು.

ಮಹಾ ಸನ್ನಿಧಾನದ ಸೇವಕ
ನಂದಿವರ್ಮ

ಇದನ್ನು ಓದಿ ಮುಗಿಸುತ್ತಿದ್ದಂತೆಯೇ ಮತ್ತೊಂದು ಪತ್ರ ಬಂದಿತು. ಅದಕ್ಕೆ ರಾಜಮುದ್ರೆಗಳಿದ್ದು ಅದರಮೇಲೆ ಶ್ರೀಮಂತ ನೀಲಕಂಠಗುಪ್ತರಿಗೆ ಎಂದು ಬರೆದಿದ್ದಿತು. ಅದನ್ನು ರಾಜದೂತನೇ ತಂದಿದ್ದನು. ಅದರ ಒಕ್ಕಣೆಯು ಹೀಗಿದ್ದಿತು:

'ಆಪ್ತಮಿತ್ರರಿಗೆ. ತಮ್ಮ ನಾವೆಗಳೂ ದೋಣಿಗಳೂ ಪರಭಾರಿ ಯಾಯಿತು ಎಂದು ಕೇಳಿದಂದಿನಿಂದ ಮನಸ್ಸಿಗೆ ವ್ಯಥೆಯಾಗಿದೆ. ಈ ಪತ್ರದ ಜೊತೆಯಲ್ಲಿರುವ ಪ್ರತಿಯನ್ನು ನೋಡಿ ನನ್ನ ಮನಸ್ಸಿನ ಕೊರಗು ದಿಟವೋ ಸಟೆಯೋ ತಾವೇ ತಿಳಿದುಕೊಳ್ಳಿ. ಹೆಚ್ಚಿಗೆ ಹೇಳಬೇಕೆ?

ದಂತಿವರ್ಮ

ಜೊತೆಯಲ್ಲಿದ್ದ ಪ್ರತಿಯಲ್ಲಿ ಹೀಗಿದ್ದಿತು:

'ಪೂರ್ವಾಪರಾಂತ ಕ್ಷಿತೀಶ ಸಾರ್ವಭೌಮ ಪಟ್ಟಾಂಚಿತೇತ್ಯಾದಿ ಬಿರುದಾಲಂಕೃತ ಪಲ್ಲವ ಚಕ್ರವರ್ತಿಗಳ ಪಾದಪದ್ಮಸನ್ನಿಧಾನದಲ್ಲಿ, ವೈಜಯಂತೀ ಮಹಾಮಾಂಡಲೀಕೇಶ್ವರ ದಂತಿವರ್ಮನ ಸಾಷ್ಟಾಂಗ ನಮಸ್ಕಾರ ಪೂರ್ವಕ ವಿಜ್ಞಾಪನೆಗಳು ಶ್ರೀಮಂತ ನೀಲಕಂಠಗುಪ್ತರಿಗೆ ಸಮುದ್ರ ವ್ಯಾಪಾರವನ್ನು ರೂಢಿಸಲು ಅನುಕೂಲವಾಗುವಂತೆ ಕಡಲಪಡೆಯನ್ನು ಇಟ್ಟುಕೊಳ್ಳುವದಕ್ಕೆ ಸನ್ನಿಧಿಯಿಂದ ಅಪ್ಪಣೆಯಾಗಬೇಕೆಂದು ಹಿಂದೆ ಪ್ರಾರ್ಥಿಸಿದ್ದಿತು. ಈ ಸಲದ ವರ್ಧಂತಿಯಲ್ಲಿ ಆತನು ರಾಜಭಕ್ತಿ ಭರದಿಂದ ಒಪ್ಪಿಸಿರುವ ಸ್ವರ್ಣರಥದ ಕಾಣಿಕೆಯನ್ನು ಮಹಾಪಾದಗಳಿಗೆ ಕಳುಹಿಸುವ ಈ ಅವಸರದಲ್ಲ ಮತ್ತೊಮ್ಮೆ ಇದಿಷ್ಟನ್ನು ವಿಜ್ಞಾಪಿಸಲು ಅಪ್ಪಣೆಯಾಗ

ಬೇಕು. ಸದ್ಯದಲ್ಲಿ ಮಿತ್ರರಾಗಿರುವವರನ್ನು ಅವರು ಬೇಡಿದುದನ್ನು ಕೊಟ್ಟು ಭಕ್ತರನ್ನಾಗಿ ಮಾಡಿಕೊಳ್ಳುವುದು ಶ್ರೇಯಸ್ಕರವು. ಅಲ್ಲದೆ, ದೇಶದಲ್ಲಿ ಆತನು ಇನ್ನೂ ಅನೇಕ ಔದ್ಯೋಗಿಕ ಸಂಸ್ಥೆಗಳನ್ನು ಸ್ಥಾಪಿಸುವವನಾಗಿ ಇರುವುದರಿಂದ ಈ ಉತ್ತೇಜನಕೊಡುವುದು ಅನೇಕ ದೃಷ್ಟಿಗಳಿಂದ ಸಾಧುವು. ಇಲ್ಲವಾದರೆ ಅವನು ತನ್ನ ಕಡಲು ವ್ಯಾಪಾರವನ್ನೆಲ್ಲ ದಾಕ್ಷಿಣಾತ್ಯರಿಗೆ ವಹಿಸುವನು. ಅದರಿಂದ ಆಗುವ ನಷ್ಟವಿಷ್ಟು ಎಂಬುದನ್ನು ಮಹಾಪಾದದಲ್ಲಿ ಅರಿಕೆಮಾಡಬೇಕಾಗಿಲ್ಲ. ಅಲ್ಲದೆ, ನಮ್ಮ ತೀರಗಳಿಗೆ ಹೊರಗಣಿಂದ ಬಂದ ಹಡಗುಗಳ ಮೇಲೆ ನಾವೆಷ್ಟು ಕಣ್ಣಿಟ್ಟಿದ್ದರೂ ಅನಿಷ್ಟಗಳು ಸಂಭವಿಸದಿರುವುದು ಅಪರೂಪ. ಹೇಳಿರುವುದಿಷ್ಟಾದರೂ ಹೇಳದಿರುವ ಹೇಳಬಾರದ ಇತರ ಕಾರಣಗಳನ್ನೂ ಮಹಾಸನ್ನಿಧಾನವು ಮನಗಂಡು ಈ ಕೂಡಲೇ ಅಪ್ಪಣೆಯನ್ನು ಕೊಡಬೇಕಾಗಿ ಅತ್ಯಂತ ವಿನಯದಿಂದ ಪ್ರಾರ್ಥಿಸಿಕೊಳ್ಳುವ, ಮಹಾಪಾದದ ಸೇವಕ,

ದಂತಿವರ್ಮ

ಮಹಾಮಾಂಡಲೀಕೇಶ್ವರ.

ಬೈರಾಗಿಯೂ ಓದಿ, 'ಸರಿ, ಕಾಲ ಒದಗಿದೆ ಎಂದು ತೋರುತ್ತದೆ. ದೈವಚಿತ್ತ. ಇನ್ನು ಎಂಟುದಿನಕ್ಕೆ ನಾವೆಲ್ಲರೂ ನರಸಿಂಹಗುಪ್ತನ ದೇವಸ್ಥಾನದಲ್ಲಿ ಸೇರಿ ಮುಂದಿನ ಯೋಚನೆಯನ್ನು ಮಾಡೋಣ' ಎಂದು ಹೊರಟನು.

ಭಂಡಾರಿಗೆ ಒಂದು ಚೀಟಿಯು ಬಂದಿತು. ಅದರಲ್ಲಿ, 'ಗಂಧದ ತುಂಡಿನ ಬೆಲೆಯಾಗಿ ಎರಡು ವರಹಗಳು' ಎಂದು ಬರೆದು ನೀಲಕಂಠಗುಪ್ತನ ರುಜುವಾಗಿದ್ದಿತು. ಭಂಡಾರಿಯು ಚೀಟಿಯನ್ನು ತಂದು ಬೈರಾಗಿಯನ್ನು ಕಂಡು ಕಣ್ಣಿನಲ್ಲಿ ಉಕ್ಕುತ್ತಿರುವ ನೀರನ್ನು ಒರೆಸಿಕೊಂಡು ಹಣವನ್ನು ಕೊಟ್ಟು, 'ಸೇವಕನ ಮನೆಯಲ್ಲಿ ಭಿಕ್ಷೆಯನ್ನು ಪರಿಗ್ರಹಿಸಿ ಮುಂದೆ ಹೋಗಬೇಕು' ಎಂದು ಪ್ರಾರ್ಥಿಸಿದನು.

ಬೈರಾಗಿಯು ಗಟ್ಟಿಯಾಗಿ ನಿರ್ದಾಕ್ಷಿಣ್ಯವಾಗಿ ಹೇಳಿದನು: 'ಸಾಧ್ಯವಿಲ್ಲ. ನಾನು ಗ್ರಾಮಪ್ರವೇಶ ಮಾಡುವುದಿಲ್ಲ'

'ಹಾಗಾದರೆ ತಾವಿರುವ ಕಡೆಗೇ ಭೈಕ್ಷ್ಯವು ಬರುವುದು. ಗ್ರಹಿಸ ಬಹುದಲ್ಲ ? '

'ನಮಗೆ ಬೇಕಾದುದು ಆರುಮುಷ್ಟಿಯನ್ನ. ಸೊಪ್ಪಾದರೂ ತೀರಿತು. ತಮಗೆ ವೃಥಾಕಷ್ಟ! ತಮ್ಮಿಷ್ಟ! ಆದರೆ ನನ್ನ ಹೊತ್ತಿಗೆ ಬರದಿದ್ದರೆ ನನ್ನ ತಪ್ಪಿಲ್ಲ'

ಆ ಮೂಲೆಯಲ್ಲಿ ನಿಂತಿದ್ದವನೊಬ್ಬನು ಸಂಭಾಷಣೆಯನ್ನು ಕೇಳಿ, 'ಈ ಬೈರಾಗಿಯು ಕಪಟಿಯೆಂದರೇನು ? ' ಎಂದುಕೊಂಡು ಅತ್ತ ಹೋದನು. ಅದನ್ನು ಕಂಡು ಬೈರಾಗಿಯು, 'ಅವನು ನಂದಿವರ್ಮನ ಕಡೆಯವನು' ಎಂದನು. ಭಂಡಾರಿಯೂ 'ಬಲ್ಲೆ' ಎಂದನು.



## ಇಪ್ಪತ್ತನೆಯ ಪ್ರಕರಣ

ಮಾಂಡಲಿಕ ನಂದಿವರ್ಮನು ತನ್ನ ಕಾರ್ಯಸ್ಥಾನದಲ್ಲಿ ಚಿಂತಾ ಕ್ರಾಂತನಾಗಿ ಕುಳಿತಿದ್ದಾನೆ. ಒಮ್ಮೊಮ್ಮೆ, 'ವೇತನಗ್ರಾಹಿಯಾಗಿ ರಾಜ್ಯದ ಸೂತ್ರಗಳನ್ನು ಹಿಡಿದು ಆಳುವ ಇವನಿಗೇ ಬೇಡವಾದುದು ನನಗೇಕೆ ? ಯಾವುದು ಎತ್ತ ಹೋದರೇನು ? ' ಎನ್ನಿಸುತ್ತದೆ. ಇನ್ನೊಮ್ಮೆ, 'ಹಾಗಲ್ಲ. ಸಮ್ರಾಜನುಪ್ಪುತಿಂದಿದ್ದು ಸಾಮ್ರಾಜ್ಯದ ವಿನಾಶವನ್ನು ನೋಡಿಕೊಂಡಿರು ವುದೆಂತು ? ಅದಾಗದು. ಈ ರಹಸ್ಯವನ್ನು ಭೇದಿಸಿಯೇ ಬಿಡಬೇಕು' ಎಂದು ಸಿದ್ಧಾಂತವಾಗುತ್ತದೆ. ಆಗ ಅಧಿಕಾರಿಗಳಿಗೆ ಸಹಜವಾದ ರಜೋ ಗುಣದ ಆವೇಶವು ಅವನಿಗೆ ಬಂದು ಆ ಆವೇಶದಲ್ಲಿ ಏನೇನೋ ಕಲ್ಪಿಸಿ ಕೊಳ್ಳುತ್ತಾನೆ. ಒಮ್ಮೊಮ್ಮೆ, 'ದಂತಿವರ್ಮನೇ ಬೇಕಾಗಿ ಹೀಗೆ ಮಾಡು ತ್ತಿರಬಹುದೋ ? ಅವನೂ ಸೇರಿ ಏನಾದರೂ ಒಂದು ಅಭೇದ್ಯವಾದ........' ಅವನ ಮನಸ್ಸೇ ಒಪ್ಪದು. 'ದಂತಿವರ್ಮನು ಅಷ್ಟು ಕೃತ್ರಿಮಿಯಲ್ಲ. ಅಲ್ಲದೆ ಅವನ ರಾಜಭಕ್ತಿಯೂ ಅಕೃತ್ರಿಮವಾದುದು' ಎಂದು ಮನಸ್ಸು ಖಂಡಿತ ಮಾಡುತ್ತದೆ. ಏನು ಮಾಡಿದರೂ ಅವನ ಮನಸ್ಸು ಆ ನೀಲಕಂಠ ಗುಪ್ತನ ಮೇಲಿನ ಸಂದೇಹವನ್ನು ಮಾತ್ರ ಬಿಡಲೊಲ್ಲದು.




ಈ ಭೂಪಟವು ಕಥೆಯಲ್ಲಿನ ಅಂಶಗಳನ್ನು ತಿಳಿದುಕೊಳ್ಳಲು ಸಹಾಯವಾಗಲೆಂದು ಮಾತ್ರ ಸೇರಿಸಿದುದು.

ಹೀಗೆ ಆತನ ಮನಸ್ಸು ಎದ್ದು ಬಿದ್ದು ಅಳಿದು ತುಂಬಿ ಸುರಿಯುತ್ತಿರುವಾಗ ಪ್ರಹರಿಯು ಬಂದು ಅರಿಕೆ ಮಾಡಿದನು: 'ಶ್ರೀಮಂತ ನೀಲಕಂಠ ಗುಪ್ತರು ಬರುತ್ತಿದ್ದಾರೆ'

ನಂದಿವರ್ಮನಿಗೆ ಅದು ಗೊತ್ತು. ಆ ದಿನ ಅಷ್ಟುಹೊತ್ತಿಗೆ ಬರಬಹುದೆಂದು ತಾನೇ ಗೊತ್ತುಮಾಡಿದ್ದನು. ಆದರೂ ಮನಸ್ಸು ಹುಳು ಹೊಡೆದ ಹೂವಿನಂತೆ ಆಗಿ ಕೊರತೆಯನ್ನು ಬಿಡದು. ನಂದಿವರ್ಮನು ಅಂತಹ ಸಂದೇಹವಿದ್ದರೂ ಅದನ್ನು ಮುಚ್ಚಿಕೊಂಡು ಬಂದವನನ್ನು ಸಾದರ ಗೌರವಗಳಿಂದ ಬರಮಾಡಿಕೊಳ್ಳಲು ಸಿದ್ಧನಾದನು. ರಾಜಸಭೆಯನ್ನು ನಡೆಸುವವನಲ್ಲವೇ ನಂದಿವರ್ಮ? ಈ ವೇಷಗಳನ್ನು ಹಾಕಿಕೊಳ್ಳುವುದನ್ನು ಅವನಿಗೆ ಕಲಿಸಿಕೊಡಬೇಕೆ?

ಗುಪ್ತನು ಒಳಗೆ ಬಂದನು. ಪ್ರಹರಿಯು ತೆರೆಯನ್ನು ತೆಗೆದು ರಾಜಾಧಿಕಾರಿಯ ದರ್ಶನವನ್ನು ಮಾಡಿಸಿದನು. ಆತನು ಸಾದರದಿಂದ 'ದಯಮಾಡಿಸಬೇಕು' ಎನ್ನುತ್ತ ಆಸನವನ್ನು ಬಿಟ್ಟೆದ್ದು ಬಂದು ಹಸ್ತಲಾಘವವನ್ನಿತ್ತು ಕರೆದೊಯ್ದು ಸಮೀಪದ ಭವ್ಯಾಸನದ ಮೇಲೆ ಕುಳ್ಳಿರಿಸಿಕೊಂಡನು. ಇಬ್ಬರಿಗೂ ಕುಶಲಪ್ರಶ್ನೆಗಳಾಯಿತು.

'ಇಲ್ಲಿಯವರೆಗೂ ತಾವು ದಯಮಾಡಿಸೋಣವಾಯಿತು. ಕಾರ್ಯಗೌರವವೇನೋ?'

'ಸನ್ನಿಧಾನದ ಮನಸ್ಸಿಗೆ ಬಂದರೆ ಅದೇನು ಅಷ್ಟು ಮಹತ್ಕಾರ್ಯವಲ್ಲ. ರಾಜಧಾನಿಯ ಬಳಿಯಲ್ಲಿ ಇರುವ ಚಂದ್ರಗುತ್ತಿಯಲ್ಲಿ—'

'ಬಳಿಯಲ್ಲಿ ಎಲ್ಲಿ? ಒಂದು ಯೋಜನದ ಮೇಲಿದೆಯಲ್ಲವೇ!'

'ಹೌದು. ಅಲ್ಲಿ ಒಂದು ಪುರಾತನ ದೇವಾಲಯವು ಇದೆಯೆಂದು ವರ್ತಮಾನವು ತಿಳಿಯಿತು. ದೇವಾಲಯ, ಮಠ, ಎಂದರೆ ಆದಷ್ಟು ಸೇವೆಸಲ್ಲಿಸಿ ಕೃತಾರ್ಥನಾಗಬೇಕೆಂದು ನನ್ನ ಆಸೆ. ಅದಕ್ಕಾಗಿ ಸನ್ನಿಧಾನದಲ್ಲಿ ಬಿನ್ನವಿಸಿಕೊಳ್ಳಲು ಬಂದೆ'

'ಮಹಾಸನ್ನಿಧಾನದಲ್ಲಿಯೇ ಬಿನ್ನವಿಸಬಹುದಾಗಿತ್ತಲ್ಲ?'

'ನನಗೆ ಇಲ್ಲಿಗೂ ಅಲ್ಲಿಗೂ ಏನೂ ಭೇದ ತೋರಲಿಲ್ಲ'

ನಂದಿವರ್ಮನಿಗೆ ಬೇಡವಾದರೂ ಆತನ ಮನಸ್ಸು ಸ್ತುತಿಗರ್ಭವಾದ ಆ ಮಾತಿನ ಆ ಸರಳತನವನ್ನು ಮೆಚ್ಚಿಕೊಂಡು ಕೊಂಚ ಮಿದುವಾಯಿತು: ಅವರೂ ಲೋಕ್ಯವನ್ನು ಹಿಡಿದು ಆಡಿದನು: 'ಉಂಟೆ? ಅಲ್ಲಿನ ರೀತಿಯೇ ಬೇರೆ. ಅಲ್ಲದೆ ಮಹಾಸನ್ನಿಧಾನದ ವಿಶೇಷಾನುಗ್ರಹಕ್ಕೆ ಪಾತ್ರರು ತಾವು!'

ಗುಪ್ತನೂ ಎಳೆಮಗುವಿನ ಎಳೆ ನಗುವನ್ನು ನಕ್ಕು, ಹೇಳಿದನು: 'ಆದರೂ ರಾಜಾನುಗ್ರಹವು ಲಭಿಸಿತೆಂದು ಅದನ್ನು ಉಪಯೋಗಿಸುವುದೇ? ಅಲ್ಲದೆ, ಈ ಪ್ರಾರ್ಥನೆಯು ಸಫಲವಾಗುವುದೂ ವಿಫಲವಾಗುವುದೂ ತಮ್ಮನ್ನೇ ಸೇರಿರಲು ನಾನು ಅಲ್ಲಿಯೇಕೆ ಇಲ್ಲದ ಆಯಾಸವನ್ನು ಉಂಟು ಮಾಡಬೇಕು ಎಂದುಕೊಂಡೆ'

ನಂದಿವರ್ಮನು ಸಮಾಧಾನ ನಗುವನ್ನು ನಕ್ಕು ನುಡಿದನು: 'ಅದಕ್ಕೇನಂತೆ! ತಾವೊಂದು ಪತ್ರವನ್ನು ಬರೆಯಿರಿ. ನಾನೊಮ್ಮೆ ಆ ಸ್ಥಳದ ವಿದ್ಯಮಾನಗಳನ್ನು ವಿಚಾರಿಸಿ ಎಷ್ಟು ಮಾಡುವುದಕ್ಕೆ ಸಾಧ್ಯವೋ ಅಷ್ಟು ಮಾಡುವೆನು'

ನೀಲಕಂಠಗುಪ್ತನು ಏನೋ ಹೇಳುವುದಕ್ಕೆ ಆರಂಭಿಸಿದ್ದವನು ಅಲ್ಲಿಗೇ ಬಿಟ್ಟನು. ಹಾಗೆಯೇ ತನ್ನ ಕೈಯನ್ನು ನೋಡಿಕೊಳ್ಳುತ್ತ ಆ ಉಂಗುರವನ್ನು ಉಜ್ಜಿಕೊಳ್ಳುತ್ತ, 'ಇನ್ನೊಂದು ವಿಚಾರವಿದ್ದಿತು. ಅಪ್ಪಣೆಯಾದರೆ–' ಎಂದು ಆರಂಭಿಸಿದನು.

ನಂದಿವರ್ಮನ ಕಣ್ಣು ಒಂದು ಗಳಿಗೆಯೊಳಗಾಗಿ ಸತೃಷ್ಣವಾಗಿ ಆ ಉಂಗುರವನ್ನು ನೋಡಿತು. ಅಷ್ಟರಲ್ಲಿಯೇ ತನ್ನ ಕಿವಿಗೆ ಬಿದ್ದ ಶಬ್ದದ ಕಡೆಗೆ ಮನಸ್ಸನ್ನು ಕೊಟ್ಟು, 'ಅಗತ್ಯವಾಗಿ ಅದೇನು? ಅಪ್ಪಣೆಯಾಗಲಿ' ಎಂದನು.

ಗುಪ್ತನು ಏನೋ ಹೇಳುವುದಕ್ಕೆ ತಲೆಯೆತ್ತಿದವನಂತೆ ಎತ್ತಿ ವರ್ಮನ ಕಣ್ಣು ತನ್ನ ಉಂಗುರದ ಮೇಲಿಂದ ಅತ್ತ ಕಡೆಗೆ ಹೊರಳುವುದರೊಳಗಾಗಿ ಅದನ್ನು ಸಂಧಿಸಿ, ತಟ್ಟನೆದ್ದು, 'ಈ ಉಂಗುರವನ್ನು ನೋಡಬೇಕೇನು?

ಇದೋ!' ಎಂದು ಅದನ್ನು ತೆಗೆದು, ನಂದಿವರ್ಮನು ಬೇಕುಬೇಡವೆನ್ನುವುದರೊಳಗಾಗಿ ಅದನ್ನು ಆತನ ಮುಂದಿದ್ದ ಕಾಲುಮಣೆಯ ಮೇಲಿಟ್ಟನು.

ಆತನೂ ಕೊಂಚ ಉಪಚಾರ ಹೇಳಿಸಿಕೊಂಡು ಅದನ್ನು ಕೈಗೆ ತೆಗೆದುಕೊಂಡು ಅದರ ಮಾಟವನ್ನು ಪರೀಕ್ಷಿಸುವ ನೆಪದಿಂದ ಕಣ್ಣಿಟ್ಟು ನೋಡಿದನು ಅದರ ಮೇಲಿನ ಮುದ್ರೆಯನ್ನೂ ನೋಡಿದನು. ಏನೋ ಅನುಮಾನ ಉಳಿದಂತೆ ತೋರಿತು. ಆದರೂ ಉಪಚಾರದ ಮಾತು ಆಡುತ್ತ 'ಒಳ್ಳೆಯ ಉಂಗುರ, ಶ್ರೇಷ್ಠವಾದ ರತ್ನ, ಮಾಟವಾದ ಕಟ್ಟಡ' ಎಂದು ಹಿಂದಕ್ಕೆ ಕೊಟ್ಟು ಹೇಳಿದನು: 'ಅದೇನೋ ಅಪ್ಪಣೆಯಾಗಲಿ'

ಗುಪ್ತನೂ ಸಂದೇಹದಲ್ಲಿ ಸಿಕ್ಕಿಕೊಂಡವನಂತೆ, ಅನುಗ್ರಹವನ್ನು ಯಾಚಿಸುವವನಂತೆ, ನುಡಿದನು. 'ಆ ಹಡಗುಪಡೆಯ ವಿಚಾರ, ಅದಿಲ್ಲವೆಂದುದೇ ನನಗೆ ಸಮಾಧಾನವಾಗಿದೆ. ನಾನು ಆಗಲೇ ಆ ವ್ಯಾಪಾರವನ್ನೆಲ್ಲ ತೆಂಕಣವರಿಗೆ ವಹಿಸುವ ಯೋಚನೆ ಮಾಡಿದ್ದೇನೆ'

'ಆ ವಿಚಾರವೇ? ಆ ಸಂಬಂಧವಾಗಿ ಇನ್ನೂ ವ್ಯವಹಾರ ನಡೆಯುತ್ತಿದೆ. ಶೀಘ್ರವಾಗಿ ತಮಗೆ ಅಪ್ಪಣೆಬರುವಂತಿದೆಯಲ್ಲ?'

'ಈಗಾಗಲೇ ಈ ಖನಿಗಳ ಕಾರ್ಯಕಲಾಪವೇ ಬೆಟ್ಟದಷ್ಟಾಗಿದೆ. ಇನ್ನು ಅದನ್ನೂ ಯಾರು ಕಟ್ಟಿಕೊಂಡಾರು? ಅದರಿಂದ ಅದನ್ನು ತಾವು ಅಲ್ಲಿಗೇ ಬಿಟ್ಟರೆ ನಾನು ತಮಗೆ ಬಹಳ ಕೃತಜ್ಞನಾಗಿರುತ್ತೇನೆ'

'ಆ! ಉಂಟೆ? ಹಾಗಲ್ಲ. ಆಯಿತು, ನಾನೂ ತಮ್ಮನ್ನು ಒಂದು ವಿಚಾರ ಕೇಳಬಹುದೇ?'

'ಅಗತ್ಯವಾಗಿ'

'ನಾನು ತಮ್ಮ ಗಣಿಗಳನ್ನು ಒಮ್ಮೆ ನೋಡಬೇಕೆಂದಿದ್ದೇನೆ'

'ಸನ್ನಿಧಾನವು ಯಾವಾಗ ಬೇಕಾದರೂ ದಯಮಾಡಿಸಬಹುದು.'

ನಂದಿವರ್ಮನು ಆ ಉತ್ತರಕ್ಕೆ ಸಿದ್ಧನಾಗಿರಲಿಲ್ಲ. ಗುಪ್ತನು ತನ್ನ ಮಾತಿನ ಫಲವು ಏನಾಯಿತು ಎಂಬುದನ್ನು ತಿಳಿದು ಮುಂದೆ ಹೇಳಿದನು:

'ತಾವು ಮುಂದಾಗಿ ತಿಳುಹಿಸಿದರೆ ರಾಜಪ್ರತಿನಿಧಿಗಳಿಗೆ ತಕ್ಕ ಮರ್ಯಾದೆ ಯಿಂದ ಎದುರುಗೊಳ್ಳಲು ಸಿದ್ಧವಾಗಿರುವೆವು. ಹಾಗಿಲ್ಲದೆ ತಮಗೆ ದಯ ಬಂದಾಗ ಹೊರಟುಬಂದು ದರ್ಶನಕೊಟ್ಟು ಬಡತನ ಅತಿಥ್ಯ ಅಂಬಲೀ ತುಂಬೆಯ ಸೊಪ್ಪು ಪರಿಗ್ರಹಿಸಿ ತೃಪ್ತರಾದರೆ ಅದೂ ಸಂತೋಷ. ಹೇಗಾ ದರೂ ಆಗಬಹುದು'

ನಂದಿವರ್ಮನು ಕ್ಷಣಕಾಲ ಯೋಚಿಸಿ ಹೇಳಿದನು: 'ನಾನು ತಮಗೆ ಆ ವಿಚಾರ ತಿಳಿಸುವೆನು'

ಸಚಿವನು ಇನ್ನೊಂದು ಗಳಿಗೆ ಉಪಚಾರದ ಮಾತನಾಡುತ್ತಿದ್ದು ಕೇಳಿದನು: 'ತಾವು ಪುಣ್ಯವಂತರು. ದೇವಸ್ಥಾನ ಮಠ ಮಂಟಪವೆಂದರೆ ಸಾಕು, ಧಾರಾಳವಾಗಿ ಸಹಾಯಮಾಡುವಿರಿ. ನಿಮ್ಮ ಗಣಿಗಳಿಗೆ ಪಶ್ಚಿಮ ವಾಗಿ ಆ ಅಭಟಪ್ರವೇಶ ಸ್ಥಾನದಲ್ಲಿ ಕಟ್ಟುತ್ತಿರುವ ದೇವಸ್ಥಾನಕ್ಕೂ ತಮಗೂ ಸಂಬಂಧವುಂಟೆ?'

ಈಗ ಗುಪ್ತನು ಅವಾಕ್ಕಾದನು. ಆ ಪ್ರಶ್ನೆಯು ಬಂದೀತೆಂದು ಕೊಂಡಿರಲಿಲ್ಲವಾಗಿ ಒಂದು ರೆಪ್ಪೆಹೊಯ್ಯುವಷ್ಟು ಹೊತ್ತು ತಡವರಿಸು ವಂತಾಯಿತು. ಅದನ್ನು ಮುಚ್ಚಿಕೊಳ್ಳುವುದಕ್ಕೊಮ್ಮೆ ಸಣ್ಣಗೆ ನಕ್ಕು ಹೇಳಿದನು: 'ಪ್ರಭುಗಳವರು ದಾಸನ ವಿಚಾರದಲ್ಲಿ ಅತ್ಯಂತ ಬಹುಮಾನ ಮಾಡಿದಂತಾಯಿತು. ನಾನು ಅಲ್ಲಲ್ಲಿ ಸಣ್ಣ ಪುಟ್ಟ ಜಾತ್ರೆಗಳಲ್ಲಿ ಯಾತ್ರಿಕ ರಿಗೆ ಸಹಾಯವಾಗಲೆಂದು ಅನ್ನಸತ್ರಗಳನ್ನೂ ಕೃತಕ ಮಂಟಪವನ್ನೂ ನಿರ್ಮಿಸುವುದುಂಟು. ಅವಕಾಶವಿದ್ದು ಅನುಕೂಲವಾದರೆ ದೇವಸ್ಥಾನಗಳ ಜೀರ್ಣೋದ್ಧಾರವನ್ನು ಕೈಗೊಳ್ಳುವುದೂ ಉಂಟು. ಆದರೆ, ಬೇರೆಯವರು ಕಟ್ಟುತ್ತಿರುವ ಕಟ್ಟುವ ದೇವಸ್ಥಾನಗಳಿಗೆ ನಾನು ಕೈಹಾಕುವುದಿಲ್ಲ. ಅಲ್ಲದೆ ಅವರು ಯಾರೋ ನನ್ನ ಬಳಿಗೆಂದೂ ಬಂದಿಲ್ಲ. ಅಂತೂ ಅಲ್ಲಿ ಸಾವಿರಾರು ಜನರು ಕೆಲಸಮಾಡುತ್ತಿರುವುದಾಗಿ ವದಂತಿ'

ನಂದಿವರ್ಮನು 'ಹಾಗೆಯೇ?' ಎಂದನು. ಆದರೆ ಅವನ ಸಂಶ ಯವೂ ಸ್ಥಿರವಾಯಿತು.

'ಹಾಗಾದರೆ ತಾವು ಯಾವಾಗ ದಯಮಾಡುವುದು?'

'ಹೇಳಿದೆನಲ್ಲ? ನಾನು ತಿಳಿಸುತ್ತೇನೆ'

'ಅಪ್ಪಣೆ! ಚಂದ್ರಗುಪ್ತಿಯ ವಿಚಾರವಾಗಿ ನೆನೆಪು ಕೊಡಲೆ?'

'ತಾವು ಬರೆಯೋಣವಾಗಲಿ! ನಾನು ಖಂಡಿತವಾಗಿ ನೋಡುತ್ತೇನೆ'

ಇಬ್ಬರಿಗೂ ಮರ್ಯಾದೆಯ ಹಸ್ತಲಾಘವಗಳಾಗಿ ಗುಪ್ತನು ಬೀಳ್ಕೊಂಡನು. ನಂದಿವರ್ಮನು ಬಾಗಿಲುವರೆಗೂ ಬಂದು ಅವನನ್ನು ಕಳುಹಿಸಿಕೊಟ್ಟನು.

'ಗುಪ್ತನು ಬಲು ಠಕ್ಕ, ದೇವಸ್ಥಾನಕ್ಕೂ ಅವನಿಗೂ ಸಂಬಂಧವಿರಬೇಕು' ಎಂದಿತು ಒಂದು ಮನಸ್ಸು. 'ಸರಿ. ಕಂದನಂತೆ ನಿರ್ಮಲ ಹೃದಯದವನು' ಎಂದಿತು ಇನ್ನೊಂದು ಮನಸ್ಸು. ಹೀಗೆ ಎರಡಕ್ಕೂ ಹೋರಾಟವಾಗಿ ಮೊದಲನೆಯ ಮನಸ್ಸೇ ಗೆದ್ದು, ಇನ್ನೊಂದು ಗಳಿಗೆಯೊಳಗಾಗಿ, 'ದೇವಸ್ಥಾನದ ಹತ್ತಿರದ ಗೂಢಚಾರರ ಪಡೆಯು ಜಾಗರೂಕವಾಗಿದ್ದು ನೀಲಕಂಠಗುಪ್ತನು ಅಲ್ಲಿಗೆ ಬರುವನೇ ಎಂದು ಮೈಯ್ಯೆಲ್ಲ ಕಣ್ಣಾಗಿ ಕಾಯಬೇಕು. ಬಂದ ಕೂಡಲೇ ವರ್ತಮಾನ ಕೊಡಬೇಕು' ಎಂದು ಅಪ್ಪಣೆಯಾಯಿತು.

ನಂದಿವರ್ಮನು ಹೊರಡಬೇಕೆಂದು ಸಿದ್ಧವಾಗಿರುವಾಗ ರಾಯಸದವನು ಬಂದು ಕಾಣಿಸಿಕೊಂಡನು. ಅವನ ಅರಿಕೆಯು ವಿಚಿತ್ರವಾಗಿದ್ದಿತು: 'ಕಂದಾಚಾರದವರು ಒಂದು ಗುಂಪು ತಿರುಪದವರನ್ನು ಹಿಡಿದಿದ್ದಾರೆ. ಅವರು ಯಾರು ಎಂಬುದನ್ನು ಹೇಗೆ ಹೇಗೆಯೂ ಗೊತ್ತುಮಾಡಲು ಸಾಧ್ಯವಿಲ್ಲ. ಅವರನ್ನು ಹೊಡೆದು ಬಡಿದು ನೋಡಿಯಾಯಿತು: ಉಪವಾಸ ಕೆಡವಿಯಾಯಿತು. ಕಳ್ಳಬಂಟರು ತಮ್ಮ ಬುದ್ಧಿಯನ್ನೆಲ್ಲ ವೆಚ್ಚಮಾಡಿ ನೋಡಿದರೂ ಸಾಧ್ಯವಾಗಲಿಲ್ಲ. ಅವರು ಹಗಲಿರುಳೂ ಹಾಡು ಹೇಳಿಕೊಂಡು ತಿರುಪವನ್ನೆತ್ತುವರು. ಅವರು ಹಾಡುವ ಹಾಡೂ ಅಷ್ಟೇ ವಿಚಿತ್ರವಾದುದು. 'ಹಿಂದೆ ಚಂದ್ರವರ್ಮನು ಎಂಬರಸು ರಾಜ್ಯವಾಳುತ್ತಿದ್ದನು. ಸರ್ವಪ್ರಯತ್ನಮಾಡಿ ಮೋಸದಿಂದ ನಾಗಶ್ರೀಯು ಆತನಿಂದ ರಾಜ್ಯವನ್ನು

ಅಪಹರಿಸಿದಳು. ಆ ನಾಗಶ್ರೀಗೂ ಅದು ಉಳಿಯಲಿಲ್ಲ, ಪರಕೀಯರ ಪಾಲಾಯಿತು. ಈಗ ಮತ್ತೆ ಅದು ಪರರ ಕೈಸೇರುವ ಹೊತ್ತು ಬಂದಿದೆ' ಎಂಬುದು ಅದರ ಅರ್ಥ. ಅವರನ್ನು ಏನು ಮಾಡಬೇಕೋ ತಿಳಿಯದೆ ಸನ್ನಿಧಾನಕ್ಕೆ ಬಿನ್ನವಿಸಿಕೊಂಡಿದ್ದೇವೆ'

ನಂದಿವರ್ಮನ ಹುಬ್ಬು ಗಂಟಿಕ್ಕಿತು. ಒಂದು ಗಳಿಗೆ ಹಾಗೇ ಯೋಚಿಸಿ, 'ಅವರನ್ನು ಬಿಟ್ಟುಬಿಡಿ. ಅವರೆತ್ತ ಹೋಗುವರು ಏನು ಮಾಡುವರು ಎಂಬುದನ್ನು ಪರೀಕ್ಷಿಸುತ್ತಿರಿ. ಅವರು ಕಣ್ಮರೆಯಾಗಬಾರದು. ಹಾಗೆ ನೋಡಿಕೊಳ್ಳಿ' ಎಂದನು.

ರಾಯಸದವನು ಅಪ್ಪಣೆಯೆಂದು ಕೈಮುಗಿದು ಹೊರಟನು. ನಂದಿವರ್ಮನು ಮತ್ತೆ ಅವನನ್ನು ಕರೆದು, 'ಅವರು ಹೇಳುವ ಹಾಡನ್ನು ಗುರ್ತಿಸಿಕೊಂಡು ಅದನ್ನು ಸೀಮೆಯಲ್ಲೆಲ್ಲ ಕಳುಹಿಸಿ ಈ ಹಾಡನ್ನು ಹಾಡುವವರು ಇನ್ನೂ ಇದ್ದಾರೆಯೇ? ಇದ್ದರೆ, ಅವರು ಅದೇ ಸುತ್ತಮುತ್ತಲಿನವರೇ ಅಥವಾ ಹೊರಗಿನಿಂದ ಬಂದವರೇ? ಎಂಬ ಸಮಾಚಾರವನ್ನು ಪೂರ್ತಿಯಾಗಿ ವಿಚಾರಿಸಿ ತಿಳಿಸಬೇಕು ಎಂದು ಅಲ್ಲಲ್ಲಿನ ಕ್ಷುದ್ರಮಾಂಡಲಿಕರಿಗೆ ತಿಳಿಸು. ಹಾಗೆಯೇ ಈ ಎರಡು ವರ್ಷದಿಂದ ಹಿಂದಿನ ಅರಸು ಚಂದ್ರವರ್ಮನ ಹೆಸರಿನಲ್ಲಿ ನಡೆದಿರುವ ಧರ್ಮಗಳೆಷ್ಟು? ಅದನ್ನು ನಡೆಸಿರುವವರಾರಾರು? ಆ ವಿಚಾರವೂ ನನಗೆ ಬೇಕು' ಎಂದನು.

ರಾಯಸದವನು ಬೀಳ್ಕೊಂಡು ಹೋದನು. ನಂದಿವರ್ಮನಿಗೆ ಪ್ರಬಲವಾದ ಸಂಶಯವು ಬಂದಿತು. ಆದರೂ ಅದರ ಸಾಧಕ ಬಾಧಕಗಳನ್ನೆಲ್ಲ ಒಂದು ಗಳಿಗೆ ವಿಚಾರಿಸಿ, 'ಮುಡುಕಬಾರದು ಇರಲಿ' ಎಂದುಕೊಂಡನು.

———:———

## ಇಪ್ಪತ್ತೊಂದನೆಯ ಪ್ರಕರಣ

ತುಂಗಾತೀರದಲ್ಲಿ ಒಂದು ದೇವಸ್ಥಾನ. ಅಲ್ಲಿ ಇಂದು ಜಾತ್ರೆ. ಪರಿಷೆಯು ಬೇಕಾದ ಹಾಗೆ ಸೇರಿದೆ. ಎತ್ತುಗಳನ್ನು ವ್ಯಾಪಾರ ಮಾಡುವವರೂ, ದೇವರಿಗೆ ಹರಿಕೆಗಳನ್ನು ಸಲ್ಲಿಸುವವರೂ, ಜನ ನೋಡುವುದಕ್ಕೆ

ಬಂದವರೂ ಎಲ್ಲರೂ ಸೇರಿದ್ದಾರೆ. ಈಚೀಚೆಗೆ ಆ ಸುತ್ತುಮುತ್ತಲಿನಲ್ಲಿ ನಡೆಯುವ ಜಾತ್ರೆಗಳಲ್ಲಿ ವಿಶೇಷವೆಂದರೆ ನೀಲಕಂಠಗುಪ್ತನ ಅನ್ನದಾನ. ಗುಪ್ತನ ಕಡೆಯವರು ಜಾತ್ರೆಗೆ ಒಂದು ವಾರ ಮುಂಚಿತವಾಗಿ ಬಂದು, ಒಂದು ಅನ್ನಛತ್ರ, ಒಂದು ಅರವಟ್ಟಿಗೆ, ಒಂದು ವೈದ್ಯಶಾಲೆ, ಇಷ್ಟನ್ನು ಕಟ್ಟುವರು. ಜಾತ್ರೆಗೆ ಬಂದವರನ್ನು ದೇವರು ಅನುಗ್ರಹಿಸುತ್ತಿದ್ದನೋ ಇಲ್ಲವೋ? ಅಂತೂ ಜಾತ್ರೆಗೆ ಬಂದವರು ಮಾತ್ರ ಗುಪ್ತನ ಮೇಲೆ ಸಂಪೂರ್ಣಾನುಗ್ರಹ ಮಾಡುವರು. ಬರುಬರುತ್ತ ರಾಜಾದಾಯದಲ್ಲಿ ನಡೆಯಿಸುತ್ತಿದ್ದ ಛತ್ರಗಳೆಲ್ಲವೂ ನಿಂತುಹೋಗಿ ಗುಪ್ತನ ಛತ್ರಗಳು ಮಾತ್ರ ನಡೆಯುವಂತಾಯಿತು. ರಾಜಾಧಿಕಾರಿಗಳಿಗೆ ಒಂದೇ ಸಂಕಟ: ನಿತ್ಯವೂ ಸಂಜೆಯ ಹೊತ್ತಿನಲ್ಲಿ ಛತ್ರದಲ್ಲಿ ರಸವತ್ತಾದ ಪುರಾಣ ಶ್ರವಣವಾಗುವುದು. ಅದನ್ನು ಕೇಳುವುದಕ್ಕೆ ನೂರಾರು ಜನರು ಬರುವರು. ಪುರಾಣಿಕನು ಪುರಾಣವನ್ನು ಹೇಳುವ ರಭಸದಲ್ಲಿ ಇನ್ನೂ ಅನೇಕ ಶಾಸ್ತ್ರಗಳನ್ನೆಲ್ಲ ಅದರಲ್ಲಿ ಸೇರಿಸಿ ಹೇಳುತ್ತಾ ವರ್ಣಾಶ್ರಮಗಳನ್ನು ಕುರಿತು ಹೇಳುವನು. ಅದೇ ಸಂದರ್ಭದಲ್ಲಿ 'ಧರ್ಮಾಭಿಮಾನಿಯಲ್ಲದ ರಾಜನು ಇರುವುದೆಂದರೆ ಧರ್ಮ ಸಾಂಕರ್ಯಕ್ಕೆ ಅಕ್ಷತೆ ಕೊಟ್ಟು ಕರೆದಂತೆ' ಎನ್ನುವನು. ಕೇಳಿದ ಜನರು ಮೇಲಿನ ಮನಸ್ಸಿನಲ್ಲಿ ಏನೆಂದುಕೊಂಡರೂ ಅವರ ಒಳಾಒಳಗಿನ ಮನಸ್ಸು 'ಅಹುದಹುದು' ಎನ್ನುವುದು. ಸಾಮಾನ್ಯವಾಗಿ ಬೌದ್ಧರಾದ ರಾಜ ಪುರುಷರಿಗೆ ಅದೊಂದು ಮಹತ್ತರ ಸಂಕಟ. ಅದೊಂದು ವಿನಾ ಮಿಕ್ಕೆಲ್ಲದರಲ್ಲಿಯೂ ಗುಪ್ತನ ಛತ್ರಗಳು ತಮ್ಮ ಛತ್ರಗಳಿಗಿಂತ ನೂರಾರು ಪಾಲು ಹೆಚ್ಚು ಎಂದು ಅವರೇ ಒಪ್ಪಿಕೊಳ್ಳುವರು.

ಗುಪ್ತನ ಅನ್ನದಾನದ ಪ್ರಭಾವವೋ ಅಥವಾ ಪ್ರಜೆಗಳಲ್ಲಿ ಹೆಚ್ಚುತ್ತಿರುವ ದೈವಭಕ್ತಿಯ ಪ್ರಭಾವವೋ ಅಂತೂ ಜಾತ್ರೆಗಳು ಹೆಚ್ಚಾಗುತ್ತ ಬಂದುವು. ಅದು ಯಾರು ಜಾತ್ರೆಯನ್ನು ಮೊದಲಿಡುವರೋ? ಅದು ಹೇಗೆ ಗುಪ್ತನ ಕಡೆಯವರಿಗೆ ತಿಳಿಯುವುದೋ? ಅದೊಂದು ರಾಜರಹಸ್ಯ. ಅಂತೂ ಹದಿನೈದು ದಿನಕ್ಕೆ ಒಂದು ಕಡೆ ತಪ್ಪದೆ ಜಾತ್ರೆಯಾಗುವುದು. ಜಾತ್ರೆ ಜಾತ್ರೆಯಲ್ಲಿಯೂ ಹಳೆಯ ಹುಲಿಗಳು ಬಂದು ರಣಕೌಶಲವನ್ನು ಮರೆಯಿಸುವರು. ಕೃತ್ರಿಮವಾದ ನಿಸ್ಸತ್ವ ಆಯುಧಗಳನ್ನು ಇಟ್ಟುಕೊಂಡು

ಕಪಟಯುದ್ಧಗಳ ಆಟವನ್ನು ಆಡಿದರೆ ರಾಜಾಧಿಕಾರಿಗಳು ಬೇಡವೆನ್ನುವುದೆಂತು ? ಹಾಗೂ ಒಂದೆರಡು ಸಲ ಬೇಡವೆಂದರು. ಅವರೂ ಅಷ್ಟಕ್ಕೇ ನಿಲ್ಲಿಸಿಬಿಟ್ಟರು. ಅವರು ಮತ್ತೊಮ್ಮೆ ಆರಂಭಿಸಿದರು. ಇವರು ಮತ್ತೆಯೂ ನಿಲ್ಲಿಸಿದರು. ಅವರು ಬೇಡವೆಂದಾಗ ನಿಲ್ಲಿಸುವುದು. ಸುಮ್ಮನಿದ್ದಾಗ ಆಡುವುದು, ಹೀಗಾಗಿ ಅಧಿಕಾರಿಗಳಿಗೂ ಅದರಲ್ಲಿ 'ಇದೊಂದು ಆಟ' ಎನ್ನುವಷ್ಟು ಉದಾಸೀನತೆಯು ಹುಟ್ಟಿತು.

ಎಲ್ಲರೂ ಹೀಗೆ ಜಾತ್ರೆಗೆ ಸೇರಿ ಜಾತ್ರೆಯ ಆಟಪಾಟಗಳಲ್ಲಿ ಮಗ್ನರಾಗಿರುತ್ತಿರುವಾಗ, ಅಲ್ಲಿಗೆ ಕೊಂಚದೂರದಲ್ಲಿ ಒಂದು ಮರದ ಕೆಳಗೆ ಒಬ್ಬನು ಯೋಗಿಯ ವೇಷವನ್ನು ಹಾಕಿಕೊಂಡು ಭಂಗಿಯನ್ನು ಸೇದುತ್ತಾ ಕುಳಿತಿದ್ದಾನೆ. ಅವನ ಸುತ್ತಲೂ ನಾಲ್ಕು ಜನ ಭಂಗಿಯ ಭಂಟರು ಸೇರಿಕೊಂಡಿದ್ದಾರೆ. ಹೀಗೆಯೇ ಕೊಂಚ ಹೊತ್ತು ಅವರಿವರನ್ನೆಲ್ಲ ಸೇರಿಸಿಕೊಂಡಿದ್ದು ಸುಮಾರು ಸಂಜೆಯ ಹೊತ್ತಿಗೆ ಯೋಗಿಯು ಅವರನ್ನೆಲ್ಲ ಓಡಿಸಿದ್ದಾನೆ. ಅವನಿಗೆ ಪರಮಾಪ್ತರಾದವರು ಒಂದಿಬ್ಬರು ಮಾತ್ರ ಕುಳಿತ್ತಿದ್ದಾರೆ. ಯೋಗಿಯು ಅಥವಾ ಜಟಾಧಾರಿಯು ಏನೋ ಮಾತನಾಡಬೇಕೆಂದು ಕೊಂಡಿದ್ದಾನೆ. ಆದರೆ ಬಂದು ಹೋಗುವವರ ಗದ್ದಲದಲ್ಲಿ ಏನು ಮಾಡಲೂ ಅವಕಾಶವಿಲ್ಲ.

ಕೊನೆಗೊಬ್ಬನು, 'ಕಂದಾಚಾರದವರ ಕೋಣೆಗೆ ಹೋಗೋಣ' ವೆಂದನು. ಜಟೆಯವನು 'ಉಂಟೆ ? ಅಲ್ಲಿ ಇನ್ನೂ ತೊಂದರೆ. ಈ ಕಂದಾಚಾರಿಗಳನ್ನು ನಂಬುವವರು ಯಾರು ? ಮೂರುದೋಸೆ ಕೊಟ್ಟರೆ ಅತ್ತೆಯಕಡೆ ಆರು ದೋಸೆ ಕೊಟ್ಟರೆ ಸೊಸೆಯಕಡೆ ಎಂದಹಾಗೆ. ಇಲ್ಲಿಯೇ ಮುಗಿಸೋಣ. ಈ ಗದ್ದಲದಲ್ಲಿ ನಮ್ಮ ಸುದ್ದಿ ಕೇಳುವುದಕ್ಕೆ ಬರುವರಾರು?' ಎಂದು ಹೇಳ ತೊಡಗಿದನು.

'ಹಿಂದೆ ಗೊತ್ತಾಗಿದ್ದ ಸಭೆಯು ಸೇರಲಿಲ್ಲ. ಆ ಸಭೆಯು ಬರುವ ಸೋಮವಾರದ ದಿನ ಅಲ್ಲಿ ಕಟ್ಟುತ್ತಿರುವ ಆ ಹೊಸ ಗುಡಿಯಲ್ಲಿ ಸೇರುವುದು. ಅಲ್ಲಿಗೆ ನೀಲಕಂಠಗುಪ್ತನೂ ಬರುವನೆಂದು ವದಂತಿಯಿದೆ. ಇದನ್ನು ಮಾಂಡಲಿಕರಿಗೆ ತಿಳಿಸು. ಅಲ್ಲಿ ಈಗ ಸುಮಾರು ಹತ್ತುಸಾವಿರ ಜನರು

ಕೆಲಸ ಮಾಡುತ್ತಿದ್ದಾರೆ. ಅಲ್ಲಿ ಕಾಡುಮೃಗಗಳ ಭೀತಿಯೆಂಬ ಹೆಸರಿನಿಂದ ಹೊರಗೆ ಬಯಲಿನಲ್ಲಿ ಕೆಲಸ ಹೆಚ್ಚಾಗಿ ನಡೆಯುವುದಿಲ್ಲ. ನಡೆಯುವ ಕೆಲಸ ವೆಲ್ಲ ಗುಹೆಗಳಲ್ಲಿ. ಭೂಗರ್ಭದಲ್ಲಿ ಕೊರೆದಿರುವ ಒಂದು ಕಲ್ಲಿನ ಗಣಿಯಲ್ಲಿ ಇನ್ನೊಂದು ವಿಶೇಷವೆಂದರೆ, ಅಲ್ಲಿರುವ ಕೂಲಿಗಾರರಲ್ಲಿ ಒಬ್ಬನೊಬ್ಬನ ಹತ್ತಿರವೂ ಉತ್ತಮವಾದ ಆಯುಧಗಳಿವೆ. ನಾನು ಬಹಳ ಯತ್ನಮಾಡಿದೆ. ಆಯುಧಗಳು ಎಲ್ಲಿಯವು ಎಂಬುದನ್ನು ಕಂಡುಹಿಡಿಯಲಾಗಲಿಲ್ಲ'

ಇನ್ನೊಬ್ಬನು ನಡುವೆ ಬಾಯಿಹಾಕಿ ಮಾತನಾಡಿದನು: 'ಯಾವನಾದ ರೊಬ್ಬನನ್ನು ಹಿಡಿದು ಆಯುಧವನ್ನು ಅಡು ಇಡಸಿಕೊಳ್ಳಬೇಕಾಗಿತ್ತು'

'ಅದು ಅಲ್ಲಿ ಸಾಧ್ಯವಿಲ್ಲ. ಆ ಆಯುಧವೇ ಅಲ್ಲಿನ ಕೂಲಿಗಾರರಿಗೆ ಕೊಟ್ಟಿರುವ ಗುರುತಿನ ಚೀಟಿ. ಅದಿಲ್ಲದಿದ್ದರೆ ಅವನನ್ನು ಒಳಕ್ಕೇ ಬಿಡುವು ದಿಲ್ಲ. ಒಳಗೂ ಅಷ್ಟೇ! ಯಾವನೇ ಆಗಲಿ. ಆಯುಧವನ್ನು ಒಂದು ಗಳಿಗೆಯೂ ತೊರೆದಿರಕೂಡದು ಎಂದು ಅಲ್ಲಿಯ ಕಟ್ಟಪ್ಪಣೆ. ನಿದ್ದೆ ಯಲ್ಲಿಯೂ ಆಯುಧವನ್ನು ಅಪ್ಪಿಕೊಂಡೇ ಮಲಗಿರಬೇಕಂತೆ! ಅಲ್ಲಿ ಒಂದಕ್ಕೆ ಎರಡಾಗಿ ಸಲ್ಲುವ ಕೂಲಿಯ ಆಸೆಯಿಂದ ಅವರು ಹೇಳಿದ ಹಾಗೆ ಇವರು ಕೇಳುತ್ತಾರೆ, ಅಲ್ಲಿ ಜೂಜಿಲ್ಲ; ಕುಡಿತವಿಲ್ಲ; ಹಾದರದ ಹೆಸರಿಲ್ಲ. ಹೀಗಿರಲು ಅಲ್ಲ ನಾವು ಹೇಗೆ ಬಾಲವನ್ನು ಬೀಸುವುದು? ಸಾಧ್ಯವಿಲ್ಲ. ಅಂತೂ ಈಗ ಸದ್ಯಕ್ಕೆ ಇದಿಷ್ಟು ತಿಳಿಸು. ಮುಂದಕ್ಕೆ ನೋಡೋಣ'

ಇನ್ನೊಬ್ಬನು ಮಾತನಾಡಿದನು: 'ಮಾಂಡಲಿಕರು ಬಂದಾಗ ಅವರೇ ನೋಡಬಹುದಲ್ಲ?'

'ಅದೂ ಆಗಬಹುದು. ಆದರೆ ಅದು ಅಷ್ಟು ಚೆನ್ನಾಗಿರುವುದಿಲ್ಲ ಅಷ್ಟೆ!'

'ನನಗೊಂದು ಯೋಚನೆ. ಈ ಮಾಂಡಲಿಕರಿಗೆ ಇದೇನು ಇಷ್ಟು ಹುಚ್ಚು? ಇನ್ನು ಯಾವ ರಹಸ್ಯಭೇದನಕ್ಕೂ ಇಷ್ಟು ದೊಡ್ಡ ಬಹುಮಾನ ವಿರಲಿಲ್ಲ. ಅಲ್ಲವೆ?'

'ಇಲ್ಲ. ಹಿಂದೆ ಇನ್ನೊಂದು ಸಂದರ್ಭದಲ್ಲಿ ಇಷ್ಟು ಭಾರಿಯ ಬಹು ಮಾನವಿತ್ತು. ನಾವೂ ಅನೇಕರು ಯತ್ನಿಸಿದೆವು. ನಮಗೆ ಯಾರಿಗೂ

ಸಿಕ್ಕಲಿಲ್ಲ. ಆ ಯುವರಾಜರ ಮೇಲೆ ಕುಸ್ತಿ ಮಾಡಿದ ಹುಡುಗನನ್ನು ಹಿಡಿದುಕೊಟ್ಟವರಿಗೆ ಇದಕ್ಕಿಂತಲೂ ಭಾರಿಯ ಬಹುಮಾನ ಸಿಕ್ಕುತ್ತಿತ್ತು'

'ಕೊನೆಗೂ ಅವನು ಸಿಕ್ಕಲೇ ಇಲ್ಲ ಅಲ್ಲವೇ ?'

'ಅವನು ಶ್ರೀಪರ್ವತದಲ್ಲಿ ಎಲ್ಲಿಯೋ ಹುಲಿಗಳ ಪಾಲಾಗಿರಬೇಕು. ಅಥವಾ ಬದುಕಿದ್ದರೂ ಎಲ್ಲಿ ಭಿಕ್ಷಾನ್ನಮಾಡಿಕೊಂಡಿದ್ದಾನೋ? ಅವನ ಸಮಾಚಾರ ಏಕೆ ಈಗ ? ನಾನು ಹೇಳಿದುದನ್ನು ಮಾಂಡಲಿಕರಿಗೆ ತಿಳಿಸಿ ಬಾ'

'ಆಯಿತು. ನಮ್ಮ ಸುದ್ದಿಯೇನಾದರೂ ಬೇಕೋ ಬೇಡವೋ ?'

'ಹೂ, ಹೇಳಿ ಮತ್ತೆ! ಹೊತ್ತಾಯಿತು. ನಾನು ಅಂಗಡಿಗೆ ಹೋಗಬೇಕು'

'ಗುಪ್ತನ ಗಣಿಯಲ್ಲಿ ಭಂಗಾರ ತೆಗೆಯುವುದರ ಜೊತೆಗೆ ಯುದ್ಧದ ಸಿದ್ಧತೆಯೂ ನಡೆದಿದೆ. ಒಳಗೆ ಮೂಲೆ ಮೂಲೆಯಲ್ಲಿಯೂ ಕುದುರೆಯ ಲಾಯಗಳಿವೆ'

'ಸರಿ ಹಾಗೆಂದರೇನಯ್ಯ! ನಮ್ಮ ಗುಡಿಯಲ್ಲಿಯೂ ಇವೆ. ಅವೆಲ್ಲ ಕಲ್ಲು ಎಳೆಯುವುದಕ್ಕೆ ಕಟ್ಟುವ ಕುದುರೆಗಳು. ಇತರರಾದರೆ ಕೆಲಸಕ್ಕೆ ಬಾರದ ಕುದುರೆಗಳನ್ನು ಇಡುತ್ತಿದ್ದರು. ಇವರು ಉತ್ತಮವಾದ ಕುದುರೆಗಳನ್ನು ಇಟ್ಟಿದ್ದಾರೆ. ಅಷ್ಟೆ ವ್ಯತ್ಯಾಸ!'

'ಇಲ್ಲಯ್ಯ! ಸೈನಿಕರು ಉಪಯೋಗಿಸುವ ಕುದುರೆಗಳನ್ನು ಕಲ್ಲಿನ ಗಾಡಿಗೆ ಕಟ್ಟುವರೆ? ನನಗೇನೋ ಅನುಮಾನ! ನಾನಂತೂ ಮಾಂಡಲಿಕರಿಗೆ ತಿಳಿಸಿದೆ'

'ಏನೆಂದರು ?'

'ನಾನು ಕಣ್ಣಾರೆ ಕಾಣುವವರೆಗೂ ದುಡುಕುವುದಿಲ್ಲ ಎಂದರು'

'ಆಯಿತು. ಇಷ್ಟೆಲ್ಲಾ ಮಾಡುವುದಕ್ಕೆ ಕಾರಣವೇನು ?'

'ಹುಚ್ಚ! ನಾವೆಲ್ಲರೂ ಮಾಂಡಲಿಕನ ಆಟದಲ್ಲಿ ದಾಂಡುಗಳು ಚೆಂಡುಗಳು. ದಾಂಡಿಗೂ ಚೆಂಡಿಗೂ ಹೊಡೆಯುವುದೇಕೆ ಓಡುವುದೇಕೆ ಎಂಬುದು ತಿಳಿಯುವುದೆ? ನಾವೂ ಹಾಗೆಯೇ! ನಾವೇಕೆ ಹೀಗೆ ಮಾಡುವೆವು ಎಂಬುದು ನಮಗೆ ತಿಳಿಯಲು ಸಾಧ್ಯವಾಗಿದ್ದರೆ ನಾವೂ ಮಾಂಡಲಿಕ

ರಾಗುತ್ತಿದ್ದೆವು. ಈಗ ಆ ಯೋಚನೆಯೇಕೆ? ಪಾಯಸ ತಿನ್ನುವಾಗ, ಈ ಬೆಲ್ಲ ಮಾಡಿದ ಕಬ್ಬು ಎಷ್ಟುದ್ದವಿತ್ತು ಎನ್ನುವ ಹಾಗೆ ಆ ಮಾತು. ಅದನ್ನು ಬಿಡು. ನನ್ನ ಈ ಸುದ್ದಿಯು ನಾಳಿನ ದಿನ ಸಂಜೆಯೊಳಗಾಗಿ ಮಾಂಡಲಿಕರಿಗೆ ಮುಟ್ಟಬೇಕು. ನಾನು ಈ ರಾತ್ರಿ ದೇವಸ್ಥಾನಕ್ಕೆ ಹೊರಟುಹೋಗುತ್ತೇನೆ'

ಅಲ್ಲಿಗೆ ಸಭೆಯು ಮುಗಿಯಿತು. ಜೋಗಿಯು ಅವಸರವಸರವಾಗಿ ಭಂಗಿಸೇದಿದ ಶಾಸ್ತ್ರವನ್ನು ಮಾಡಿ ಮುಗಿಸಿದನು. ಮಿಕ್ಕವರೂ ಕೊಳವಿಯನ್ನು ಹಿಡಿದು ಮುಗಿಸಿದರು. ಅವರು ಕೊಳವಿಯನ್ನು ಆರಿಸಬೇಕೆಂದಿರುವಷ್ಟರಲ್ಲಿ ಇನ್ನೊಬ್ಬನು ಬಂದು ಕುಳಿತನು. ಆ ಸಭೆಯ ಮರ್ಯಾದೆಗೆ ಅನುಸಾರವಾಗಿ ಅವನೂ ತನ್ನ ಭಂಗಿಯ ಪೊಟ್ಟಣವನ್ನು ಜಟಾಧಾರಿಯ ಮುಂದಿಟ್ಟು ಕೈಮುಗಿದು ಕುಳಿತನು. ಮಿಕ್ಕವರು ಯೋಗೀಶ್ವರನ ಸನ್ನೆಯರಿತು ಹೊರಡಲು ಅನುವಾದರು. ಹೊಸಬನು ಆ ಕಾಲದೇಶಗಳಿಗೆ ಸಾಧಾರಣವಾದ ಸ್ವಾತಂತ್ರ್ಯವನ್ನು ವಹಿಸಿ ಅವರೆಲ್ಲರನ್ನೂ ಕುಳಿತುಕೊಳ್ಳುವಂತೆ ಬಹಳವಾಗಿ ಬಲಾತ್ಕರಿಸಿದನು. ಆದರೂ ಅವರು ನಿಲ್ಲಲಿಲ್ಲ.

ಹೊಸಬನೂ ಅವರು ಹೋಗಲಿ ಎಂದುಕೊಂಡೇ ಇದ್ದನೇನೋ? ಅಂತೂ ಅವರೆಲ್ಲರೂ ಹೋಗಿ ತಾವಿಬ್ಬರೇ ಆದಮೇಲೆ ಪೊಟ್ಟಣವನ್ನು ಬಿಚ್ಚಿದನು. ಅದನ್ನು ಪರುಠವಣೆಯಿಂದ ಉಜ್ಜಿ ತೊಳೆದು ಸಿದ್ಧಮಾಡಿ ಕೊಳವಿಯಲ್ಲಿಟ್ಟು ಭಯಭಕ್ತಿಯಿಂದ ಜೋಗಿಗೆ ಒಪ್ಪಿಸಿದನು. ಜೋಗಿಯೂ ಕೆಂಡವನ್ನು ಅದರ ಮೇಲಿಟ್ಟು ಅದನ್ನು ಸೇದುವುದರಲ್ಲಿದ್ದಾನೆ. ಕೊಳವೆಯ ಬುಡಕ್ಕೆ ಬಾಯಿಟ್ಟು ಒಂದು ಸಲ ಸೇದಿಯೂ ಇದ್ದಾನೆ. ಆಗ ಹೊಸಬನು ಮುಂದೆ ಬಿದ್ದಿದ್ದ ಬೆಂಕಿಯನ್ನು ಏನೋ ಊದಿ ಬೆಳಕುಮಾಡುವನಂತೆ ಪ್ರವೃತ್ತನಾಗಿದ್ದವನು ತಟ್ಟನೆ ತಿರುಗಿ ವಿದ್ಯುತ್ತಿನ ವೇಗದಿಂದ ಅವನ ಮೇಲೆ ಬಿದ್ದು ಅವನ ದಾಡಿಮೀಸೆಗಳನ್ನು ಬಲವಾಗಿ ಜಗ್ಗಿಸಿ ಎಳೆದನು. ಅಂಟಿಸಿದ್ದ ಗಡ್ಡ ಮೀಸೆಗಳು ಎದ್ದುಬಂದುವು: ಬೆಳಕಿನಲ್ಲಿ ಮುಖದ ಪರಿಚಯವಾಯಿತು. ಹೊಸಬನು 'ಓ! ನೀನೇ!' ಎಂದು ಏನೂ ತಿಳಿಯದವನಂತೆ, ಏನೂ ಆಗದಿರುವಾಗ ಎದ್ದು ವಿರಾಮವಾಗಿ ನಡೆದುಹೋಗುವಂತೆ, ಎದ್ದು ಹೊರಟುಹೋದನು.

ಜೋಗಿಗೆ ಗಡ್ಡ ಮೀಸೆಗಳು ಬಲವಾಗಿ ಅಂಟಿಕೊಂಡಿದ್ದುವು. ಅವನ್ನು ಝಾಡಿಸಿ ಕಿತ್ತಾಗ ಆದ ನೋವು, ಹೊಸ ಭಂಗಿಯ ಅಮಲು, ಎರಡೂ ಸೇರಿ ಮಂಕುಹಿಡಿದು ಹೋಗಿದ್ದಿತು. ಹೊಸಬನು ಯಾರು ಎಂಬುದನ್ನು ವಿಚಾರಿಸಬೇಕು ಎಂಬ ಅರಿವೂ ಇಲ್ಲದವನಾಗಿ ಹಾಗೆಯೇ ಬಿದ್ದುಕೊಂಡನು.

——o——

## ಇಪ್ಪತ್ತೆರಡನೆಯ ಪ್ರಕರಣ

ಸಹ್ಯಾದ್ರಿಯ ಪರ್ವತಶ್ರೇಣಿಯಲ್ಲಿ ತಾನೇತಾನಾಗಿ ಬೆಳೆದಿರುವ ಸ್ಥೂಲೋನ್ನತ ವೃಕ್ಷಗಳ ನಿಬಿಡವಾದ ನೆರಳಿನಿಂದ ಕತ್ತಲುಗವಿದಿರುವ ಒಂದು ಮೂಲೆಯಲ್ಲಿ ಬೆಟ್ಟದ ಹೊಟ್ಟೆಯೊಳಕ್ಕೆ ಕೊರೆದಿರುವ ಒಂದು ಗವಿ. ಅಲ್ಲಿ ಆರುಜನರಿಗಿಂತ ಹೆಚ್ಚಿಗೆ ಯಾರೂ ಸೇರುವಂತಿಲ್ಲ. ಯತಿ ಬೈರಾಗಿ ದತ್ತ ಗುಪ್ತರು ಕುಳಿತು ಮಾತನಾಡುತ್ತಿದ್ದಾರೆ.

ಯತಿ:—ಹಾಗಾದರೆ ರಾಜಧಾನಿಗೆ ಹೋಗಲೇಬೇಕು?

ಗುಪ್ತ:—ಹೋಗದಿರುವುದು ಹೇಗೆ? ಹೋಗದಿದ್ದರೆ ಮಾಂಡಲಿಕನ ಸಂದೇಹವು ಬಲಿತು ನಂಬಿಕೆಯಾಗುವುದು. ಮುಂದಿನ ಕೆಲಸಗಳೆಲ್ಲ....

ಯತಿ:—ಹೌದು.

ಬೈರಾಗಿ:—ಒಂದು ಉಪಾಯವಿದೆ. ಗುಪ್ತನ ಬದಲು ಗುಪ್ತನಾಗಿ ಇನ್ನಾರಾದರೂ ಹೋಗಿ ಬರಬೇಕು.

ದತ್ತ:—ಆಗಬಹುದು ಆದರೆ ಯೋಚಿಸೋಣವಾಗಲಿ. ಒಂದೆರಡು ದಿನವಲ್ಲ, ಅಲ್ಲಿಗೆ ಹೋಗಿ ಬರುವಷ್ಟು ದಿನವೂ ಈ ವೇಷವನ್ನು ಕಟ್ಟುವುದೆಂದರೆ ಸಾಮಾನ್ಯವಲ್ಲ. ಅಲ್ಲದೆ ರಾಜಾಸ್ಥಾನ. ಮಾನ ಮರ್ಯಾದೆಗಳಲ್ಲಿ ಹೆಚ್ಚು ಕಡಿಮೆಯಾಗಬಾರದು.

ಬೈರಾಗಿ:—ಒಬ್ಬನಾದರೆ ಎಲ್ಲವೂ ಸಾಧ್ಯ. ಆದರೂ ಏನಾದರೂ ಎಳ್ಳಷ್ಟು ಲೋಪಬಂದು ಅಚಾತುರ್ಯವು ನಡೆದುಹೋದರೆ ಅದಕ್ಕೆ ನಾವಿಲ್ಲಿ ಸಿದ್ಧರಾಗಿರಬೇಕು.

ಅದುವರೆಗೂ ಯತಿಯು ಯೋಚಿಸುತ್ತಿದ್ದು ಸ್ಥಿರ ಗಂಭೀರ ಕಂಠದಿಂದ ಹೇಳಿದನು: 'ಬೈರಾಗಿಗಳ ಅಭಿಪ್ರಾಯವೇ ಸರಿಯೆಂದು ತೋರುತ್ತದೆ. ಜಟ್ಟಿಗೆ ಗುಪ್ತನ ವೇಷವನ್ನು ಅಳವಡಿಸಿ ಕಪ್ಪಕಾಣಿಕೆಗಳೊಡನೆ ಕಳುಹಿಸ ಬೇಕು. ಅದೇ ಸಮಯವನ್ನು ಸಾಧಿಸಿ ನಾವು ನಿಧಿಯನ್ನು ಸಾಧಿಸಿಕೊಂಡು ಬರಬೇಕು. ಒಂದು ನಡೆಯಿಂದ ಎರಡು ಕಡೆ ಫಲವಾಗಬೇಕು'

ದತ್ತ:—ಅಲ್ಲಿಗೆ ನಾವು ಸರ್ವಸ್ನಾಹವನ್ನೂ ಮಾಡಿಕೊಂಡೇ ಇರಬೇಕೆಂದು ಆಯಿತು.

ಯತಿ:—ಹೌದು. ಸಂದೇಹವೇ ಇಲ್ಲ.

ದತ್ತ:—ಆಯಿತು. ಅವನು ಹೋಗುವ ದಾರಿಯಲ್ಲಿ ನಾಗರಖಂಡ ದವರು ಬಂದು ಕಾಣುವರಲ್ಲ? ಅದು ಹೇಗೆ?

ಯತಿಯು ಬೈರಾಗಿಯ ಮುಖವನ್ನು ನೋಡಿದನು. ಬೈರಾಗಿಯು ನಕ್ಕು ಹೇಳಿದನು: 'ಅದೇನು ಅಷ್ಟು ದೊಡ್ಡವಿಷಯವೇ ದತ್ತರೇ? ನೀಲ ಕಂಠ ಗುಪ್ತನು ಶ್ರೀಮಂತ. ಬೇಕಾದಷ್ಟು ದಾನ ಧರ್ಮ ಮಾಡಿದವನು. ಅದರಿಂದ ಗ್ರಾಮಪ್ರಮುಖರು ಬಂದು ಅವನನ್ನು ಕಂಡು ಮಾತನಾಡು ವರು. ಅದರಲ್ಲಿ ಸಂದೇಹಕ್ಕೇನೂ ಕಾರಣವಿಲ್ಲ. ಆದರೂ ಮಾಂಡಲಿಕನಿಗೆ ಎಳ್ಳುವೊನೆಯಷ್ಟೂ ಅನುಮಾನ ಹುಟ್ಟದ ಹಾಗೆ ನೋಡಿಕೊಳ್ಳಬೇಕು. ಇನ್ನೊಂದು ಮಾತು. ಗುಪ್ತನು ಹೊರಡುವ ವೇಳೆಗೆ ಕೊಂಚ ಮುಂಚೆ ಯಾಗಿ ನಾಗರಖಂಡದ ಸುತ್ತಮುತ್ತಲಿನಲ್ಲಿ ಭಾರಿಯ ದಾರಿಗಳ್ಳರ ಗುಂಪು ಎರಡುಮೂರು ಕಾಣಿಸಿಕೊಳ್ಳುವುದು. ಅದೇ ಕಾರಣಮಾಡಿಕೊಂಡು ಗುಪ್ತನು ಮಾಂಡಲಿಕನನ್ನು ಸೇನೆಯ ಸಹಾಯವನ್ನು ಕೇಳುವನು. ಮಾಂಡಲಿಕನು ಏನಾದರೂ ಕಾರಣದಿಂದ ಹೇಗೂ ತನ್ನ ಗೂಢಚಾರರನ್ನು ನೀಲಕಂಠಗುಪ್ತನ ಹಿಂದೆ ಕಳುಹಿಸಲೇ ಕಳುಹಿಸುವನು. ನಾವು ಹೀಗೆ ಮಾಡಿದರೆ ಅದೂ ತಪ್ಪಿ ಅನುಕೂಲವಾದರೂ ಆಗಬಹುದು'

ಯತಿ:—ಹೌದು. ತಮ್ಮ ಸಲಹೆಯು ಅತ್ಯುತ್ತಮವಾದುದು. ಅದರ ಜೊತೆಗೆ ನಾವು ಎಂದುಕೊಂಡಿರುವಂತೆ ಜೋತಿಷ್ಯದ ಫಲವೂ ಬೆರೆತುಬಿಡಲಿ. ಸಾಮುದ್ರಿಕ ಜ್ಯೋತಿಶ್ಶಾಸ್ತ್ರಗಳಲ್ಲಿ ನಿಪುಣನಾದವನೊಬ್ಬನು ಈಗಲೇ ಹೋಗಿ

ಕಂಚಿಯನ್ನು ಸೇರಿ ಅಲ್ಲಿ ಪ್ರಸಿದ್ಧನಾಗಿರಲಿ. ಅವನು ಗುಪ್ತನು ಅಲ್ಲಿಗೆ ಬಂದ ಸಮಯವನ್ನು ಸಾಧಿಸಿ, ಗುಪ್ತನು ವೈಶ್ಯಕರ್ಮವನ್ನು ಮಾಡುತ್ತಿದ್ದರೂ ಕ್ಷತ್ರಿಯನೆಂದೂ ಅವನಿಗೆ ಸದ್ಯದಲ್ಲಿಯೇ ಅಪಾರ ನಿಧಿಯು ದೊರೆತು ದೊರೆಗಿಂತ ಶ್ರೀಮಂತನಾಗುವನೆಂದೂ ದೊರೆಯ ಮಗಳನ್ನು ಮದುವೆಯಾಗಿ ಹತ್ತಾರು ದೊರೆಗಳಿಗೆ ಸಮನಾಗಿ ಬಾಳುವನೆಂದೂ ಭವಿಷ್ಯವನ್ನು ಹೇಳಲಿ. ಆ ಫಲಾಫಲಗಳು ಅರಮನೆಯವರೆಗೂ ತಿಳಿದು ರಾಜಧಾನಿಯಲ್ಲಿರುವ ಇತರ ರಾಜ ಪ್ರತಿನಿಧಿಗಳಿಗೂ ತಿಳಿಯಬೇಕು. ಮತ್ತು ಇಲ್ಲಿಂದ ಹೋಗಿರುವವರೆಗೂ ಮೊದಲು ತಿಳಿಯಬೇಕು. ಇದೂ ಒಂದು ಆಗಲಿ.

ದತ್ತ:—ಇದು ಫಲಿಸಿದರೆ ಇನ್ನೂ ಒಂದು ಕಾರ್ಯವಾಗುವುದು. ಹೋಗಿಬರಲು ಹೇಗಾದರೂ ಮೂರು ಪಕ್ಷಗಳು ಬೇಕು. ಅಷ್ಟರಲ್ಲಿ ಉಪಚಾರ ಪ್ರತ್ಯುಪಚಾರಗಳಿಂದ ಜೊತೆಯಲ್ಲಿ ಬಂದ ಸೈನಿಕರನ್ನೆಲ್ಲ ತಣಿಸಿ ತೃಪ್ತಿಗೊಳಿಸಿ ಅವರ ಹೃದಯವನ್ನು ಕೈಸೆರೆ ಹಿಡಿದರೆ ಅದರಿಂದ ಮುಂದಿನ ಭೇದೋಪಾಯಕ್ಕೆ ಸಂಚಾಗುವುದು. ಅಲ್ಲದೆ ಶ್ರೀಶೈಲದ ವಿಚಾರಕ್ಕೂ ಸಹಾಯವಾಗುವುದು.

ಬೈರಾಗಿ:—ಅದೂ ಸಾಧ್ಯ. ಅಲ್ಲದೆ ಜಟ್ಟಿಗೆ ಎಲ್ಲಾ ಗುಣಗಳೂ ಇವೆ. ಗುಪ್ತನ ಪ್ರತಿನಿಧಿಯಾಗಿ ಹೋಗಲು ತಕ್ಕವನೇ! ಆದರೆ ರಾಜಧಾನಿಯು ಅವನು ಹುಟ್ಟಿದೂರು. ತಂದೆತಾಯಿಗಳನ್ನು ನೋಡಿ ಸುಮಾರು ಆರುವರ್ಷಗಳಾಗಿದೆ. ಅವರನ್ನು ನೋಡಬೇಕೆಂಬ ಆಸೆ ಬರಬಹುದು. ಜೊತೆಗೆ ಅರಮನೆಯಲ್ಲಿ ಆಡಿ ಬೆಳೆದವನು. ಯಾರಾದರೂ ಗುರ್ತಿಸಬಹುದು.

ಯತಿ:—ಮತ್ತು ಈ ಸಮಯವನ್ನು ಸಾಧಿಸಿ ಅಲ್ಲಿನವರು ರಾಜಭಕ್ತಿಯ ಪ್ರಮಾಣವನ್ನು ಸಿಂಹಾಸನದ ಎದುರಾಗಿ ಮಾಡಿಸಿದರೆನ್ನಿ. ಆಗ ನಿಜವಾದ ಗುಪ್ತನೇ ಇದ್ದರೆ ಹೇಗೆ? ಜಟ್ಟಿಯಾದರೆ ಎಷ್ಟಾದರೂ ಅಲ್ಲಿನ ಉಪ್ಪುತಿಂದವನು. ಹೊಳೆಯ ನೀರು ಹೊಳೆಗೆ ಹರಿದಂತಾಗುವುದು. ಅದರಿಂದ ಅವನನ್ನೇ ಕಳುಹಿಸಬೇಕು.

ಬೈರಾಗಿ:—ಆಯಿತು, ಒಂದು ವಿಚಾರ ಮುಗಿಯಿತು. ಇನ್ನೊಂದು ವಿಚಾರ. ನಾವು ಆ ನಿಧಿಗೆ ಯಾವಾಗ ಹೋಗುವುದು?

ಯತಿ:—ರಥಸಪ್ತಮಿಗೆ ಪೂರ್ವವೇ ಆಗಬೇಕು.

ಗುಪ್ತ:—ಹೌದು. ಇಲ್ಲದಿದ್ದರೆ ಹುಲ್ಲು ಒಣಗಿ ನಡೆದ ದಾರಿಯ ಗುರುತು ಸಿಕ್ಕುವುದು. ಅಲ್ಲದೆ ಒಂದು ಕೆಂಡವಿಟ್ಟು ಊದಿದರೆ ಸಾಕು. ಎಲ್ಲವೂ ಒಂದೇ ಸಲ ಹತ್ತಿಕೊಳ್ಳುವುದು.

ಬೈರಾಗಿ:—ಎಲ್ಲರೂ ಸಿದ್ಧವಾಗಿದ್ದಾರೆಯೇ?

ಯತಿ:—ನಿಧಿಯ ಹಾದಿಯಲ್ಲಿ ಏನೂ ವಿಘ್ನವಿಲ್ಲ.

ಗುಪ್ತ:—ಮಿಕ್ಕ ಅರಸರು?

ಯತಿ:—ಅವರು ಹೇಳುವುದು ನ್ಯಾಯವಾಗಿದೆ. ನಮ್ಮ ಬಲಾಬಲಗಳನ್ನು ಅವರು ಕಾಣರು. ಹೀಗಿರುವಾಗ ಬಲಿಷ್ಠರೂ ಪ್ರತಿಷ್ಠಿತರೂ ಆದವರೊಡನೆ ಅದು ಹೇಗೆ ಪ್ರಕಟವಾಗಿ ವಿರೋಧವನ್ನು ಕಟ್ಟಿಕೊಳ್ಳುವುದು? ಅದಕ್ಕಾಗಿ ನಾವು ಮೊದಲ ಏಟು ಹೊಡೆದು ನಮ್ಮ ರಾಜಧಾನಿಯನ್ನು ಹಿಡಿಯಬೇಕು. ಅನಂತರ ಪಲ್ಲವರು ಬಂದು ಅದನ್ನು ಮತ್ತೆ ಕಿತ್ತುಕೊಳ್ಳುವಂತೆ ಅವರು ಸಹಾಯರಾಗುವರು.

ದತ್ತ:—ಅವರ ಅಭಿಪ್ರಾಯವು ಬಹಳ ಸರಿಯಾದುದು.

ಯತಿ:—ತಾವೇನು ಮಾಡಿರುವಿರಿ?

ದತ್ತ:—ಇಲ್ಲಿ ದೇವಸ್ಥಾನದಲ್ಲಿ ಇಂದಿಗೆ ಎರಡು ಲಕ್ಷ ಸೈನಿಕರಿಗೆ ಬೇಕಾಗುವ ಕವಚಾದಿಗಳೂ ಶಸ್ತ್ರಾದಿಗಳೂ ಸಿದ್ಧವಾಗಿವೆ. ನನ್ನ ಬಳಿ ಕೆಲಸದಲ್ಲಿರುವ ಪ್ರತಿಯೊಬ್ಬನಿಗೂ ರಣದೀಕ್ಷೆಯನ್ನು ಕೊಟ್ಟು ಒಂದು ಕಹಳೆಯ ಕೂಗಿನೊಳಗಾಗಿ ಕೆಳಕ್ಕಿಳಿಯುವಷ್ಟು ಸಿದ್ಧನನ್ನು ಮಾಡಿದ್ದೇನೆ. ಒಬ್ಬೊಬ್ಬನೂ ಒಂದೊಂದು ಹೆಬ್ಬುಲಿ.

ಯತಿ:—ಮುಂದೆ?

ದತ್ತ:-ಇನ್ನು ಆರು ತಿಂಗಳಲ್ಲಿ ಒಂದುಲಕ್ಷ ಸೈನ್ಯವು ಸಿದ್ಧವಾಗುವುದು.

ಯತಿ:—ಸಾಧ್ಯವಿಲ್ಲ. ಆಗಲೇ ಮಾಘಮಾಸವು ಬಂದಿತು. ಈ ಮಲೆನಾಡಿನಲ್ಲಿ ಜ್ಯೇಷ್ಠದಲ್ಲಿಯೇ ಮಳೆಯು ಪ್ರಾರಂಭಿಸುವುದು. ಈಸಲವಂತೂ ಮೃಗಶಿರೆಯಲ್ಲಿಯೇ ದೊಡ್ಡ ಮಳೆ ಹಿಡಿಯುವುದರಲ್ಲಿದೆ. ಅದರಿಂದ ನಾವು ಮೃಗಶಿರಾರ್ಧದಲ್ಲಿಯೇ ಹಿಡಿದು ಮುಗಿಸಬೇಕು.

ದತ್ತ:—ಆಗಬಹುದು ನಾಳೆಯ ದಿನ, ಕೊನೆಗೆ ಈಗಲೇ ಅಪ್ಪಣೆ ಯಾದರೆ ನಾನೂ ಈಗಲೇ ಸಿದ್ಧ.

ಯತಿ:—ಆಯಿತು, ಸೈನಿಕರನ್ನೂ ಸಲಕರಣೆಗಳನ್ನೂ ಸಿದ್ಧಪಡಿಸಿದಿರಿ. ಆದರೆ ಬರಿಯ ಪದಾತಿಗಳಿಂದ ಯುದ್ಧವನ್ನು ಗೆದ್ದವರು ಇದುವರೆಗೂ ಇಲ್ಲ

ದತ್ತ:—ಅಲ್ಲದೆ ಸಹ್ಯಾದ್ರಿಯಲ್ಲಿರುವ ಅರಮನೆಯ ಆನೆಗಳ ಗುಂಪನ್ನೂ ವಶಪಡಿಸಿಕೊಳ್ಳುವ ಪ್ರಯತ್ನವನ್ನೂ ಮಾಡಲಾಗಿದೆ. ಅದರ ಜೊತೆಗೆ ಕುದುರೆಗಳಿಗೂ ಏರ್ಪಾಡು ನಡೆದಿದೆ. ನೆಪನೆಪಗಳಿಂದ ಆನೆ ಗಳನ್ನು ಹಿಡಿಸಿ ಕುಶಲರಾದ ಮಾವಟಿಗಳಿಂದ ಅವಕ್ಕೆ ರಣಶಿಕ್ಷೆಯನ್ನು ಕೊಡಿಸಲಾಗಿದೆ. ಆದರೂ ಅವನ್ನು ಈ ಕೂಡಲೇ ನೆಚ್ಚಲಾಗುವುದಿಲ್ಲ. ಕುದುರೆಗಳಿಗೆ ಮಾತ್ರ ಬೇಕಾದಷ್ಟು ಶಿಕ್ಷೆಯಾಗಿದೆ. ಇಲ್ಲಿ ಗಣಿಯಲ್ಲಿಯೂ ದೇವಸ್ಥಾನದಲ್ಲಿಯೂ ಸೇರಿ ಐದುಸಾವಿರ ಕುದುರೆಗಳಿವೆ. ಇನ್ನು ಹತ್ತು ಸಾವಿರದಷ್ಟು ಕುದುರೆಗಳನ್ನು ಜನರಲ್ಲಿ ಹಂಚಿದ್ದೇವೆ. ಒಂದು ದಿನದೊಳಗಾಗಿ ಎರಡು ಸಾವಿರ ರಥಗಳು ಸಿದ್ಧವಾಗುತ್ತವೆ.

ಯತಿ:—ಆಯುಧಗಳನ್ನು ಹಂಚುವುದಕ್ಕೆ ಏನು ಉಪಾಯ ಮಾಡಿದ್ದೀರಿ ?

ದತ್ತ:—ಸೌದೆಯ ಗಾಡಿಗಳಲ್ಲಿಟ್ಟು ಕಳುಹಿಸುವುದು. ಗಾಡಿಯನ್ನು ಹಿತ್ತಲಿಗೆ ಹೊಡಿಸಿಕೊಂಡು ಹೋಗಿ ಅಲ್ಲಿ ಅವರು ಗಾಡಿಕೀಳುವಾಗ ಅವರು ತೆಗೆದುಕೊಳ್ಳುವುದು.

ಯತಿ:—ಆಯಿತು. ಹಾಗಿದ್ದರೆ ನಿಧಿಗೆ ಹೊರಡುವ ಪ್ರಯತ್ನ ಮಾಡಬಹುದಲ್ಲ ?

ದತ್ತ:—ಅಪ್ಪಣೆ.

ಯತಿ:—ಸರಿ ಹುಣ್ಣಿಮೆಯಾಗಲಿ, ಹೊರಡೋಣ.

ಸಭೆಯು ಮುಗಿಯಿತು. ಎಲ್ಲರೂ ಯತಿಯನ್ನು ಬೀಳ್ಕೊಂಡರು. ಗುಪ್ತನೂ ದತ್ತನೂ ಈಚೆಗೆ ಒಂದು ತಮ್ಮ ಕುದುರೆಗಳನ್ನು ಹುಡುಕಿ ಕೊಂಡು ಹೋದರು. ಕುದುರೆಗಳು ಇರಬೇಕಾದ ಕಡೆಯಲ್ಲಿ ಇರಲಿಲ್ಲ.

ಸಿಳ್ಳಿನ ಸದ್ದಿನಂತಹ ಸದ್ದಾಯಿತು. ತಿರುಗಿನೋಡುವುದರೊಳಗಾಗಿ ಎರಡು ಬಾಣಗಳು ಬಂದುವು. ಒಂದು ನೀಲಕಂಠಗುಪ್ತನ ಪಕ್ಕದಲ್ಲಿ ಸವರಿ ಕೊಂಡಂತೆ ಹೋಗಿ ಅಲ್ಲಿಯೇ ಇದ್ದ ಮರದಲ್ಲಿ ನೆಟ್ಟುಕೊಂಡಿತು. ಇನ್ನೊಂದು ನರಸಿಂಹದತ್ತನ ತಲೆಗೆ ಬಡಿದು ಧರಿಸಿದ್ದ ಶಿರಸ್ತ್ರಾಣವನ್ನು ಭೇದಿಸಲಾರದೆ ಕೆಳಗೆ ಬಿದ್ದಿತು.

ದತ್ತನು ಉತ್ತರಕ್ಷಣದಲ್ಲಿಯೇ ಜಾಗ್ರತನಾಗಿ ಬಾಣವು ಬಂದ ಹಾದಿಯನ್ನು ಹಿಡಿದು ಹೋದನು. ಇನ್ನೊಂದು ಗಳಿಗೆಯೊಳಗಾಗಿ ಧನುರ್ಬಾಣ ಧಾರಿಯೊಬ್ಬನು ದತ್ತನ ದೃಢಮುಷ್ಟಿಯ ಪ್ರಭಾವವನ್ನು ಸವಿಯುತ್ತಾ ಬಂದು ನೀಲಕಂಠಗುಪ್ತನ ಮುಂದೆ ನಿಂತನು.

ಮೊದಮೊದಲು ಅವನು ತಾನು ಯಾರು ಎಂಬುದನ್ನು ಹೇಳಲಿಲ್ಲ. ಕೊನೆಗೂ ಪ್ರತಿ ಪಕ್ಷದವರ ಹಿಂಸೆಯು ಬಲವಾಗಿ ಯತ್ನವಿಲ್ಲದೆ ಇಷ್ಟವಿಲ್ಲದೆ ಹೇಳಿದನು : 'ಮಾಂಡಲಿಕನ ಅಪ್ಪಣೆಯೆಂದು ತನಗಾದ ಅಪ್ಪಣೆಯನ್ನು ನೆರವೇರಿಸಲು ಬಂದವನು. ಈ ಇಬ್ಬರ ತಲೆಯನ್ನು ತೆಗೆದುಕೊಳ್ಳಲು ಹನ್ನೆರಡು ಜನರು ಹೊರಟಿದ್ದಾರೆ.'

ಗುಪ್ತನೂ ದತ್ತನೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಯಾರೂ ಏನೂ ಮಾತನಾಡಲಿಲ್ಲ. ಇಬ್ಬರೂ ಬೇರೆ ಬೇರೆ ಹಾದಿಗಳನ್ನು ಹಿಡಿದು ಹೋದರು. ಅಪರಾಧಿಯು ಚೆನ್ನಾಗಿ ಬದ್ಧನಾಗಿ ನರಸಿಂಹದತ್ತನ ಮುಂಗಡೆಯೇ ಆತನ ಕುದುರೆಯ ಮೇಲೆಯೇ ಕುಳಿತು ಸವಾರಿಮಾಡಿ ಕೊಂಡು ಹೋದನು.

—o—

## ಇಪ್ಪತ್ತಮೂರನೆಯ ಪ್ರಕರಣ

ಬನವಾಸಿಯ ಸೈನ್ಯಾಧ್ಯಕ್ಷ ಗೋಪುರವರ್ಮನು ತನ್ನ ಪ್ರಾಸಾದದಲ್ಲಿ ವಿರಾಮಾಸನದಲ್ಲಿ ಕುಳಿತು ಕವಚಾದಿಗಳನ್ನು ಬಿಚ್ಚಿಸಿಕೊಳ್ಳುತ್ತಿದ್ದಾನೆ. ಒಂದು ಝಾಮಕ್ಕಿಂತಲೂ ಹೆಚ್ಚಾಗಿ ಕುದುರೆಯ ಮೇಲೆ ಕುಳಿತಿದ್ದು ಮೈಯ್ಯೂ ಕೊಂಚ ಬಳಲಿದೆ. ಆದರೂ ಉತ್ಸಾಹವು ಮಾತ್ರ ತಗ್ಗಿಲ್ಲ. ಒಂದು ಸಲ ಮೈಮುರಿದೆದ್ದು 'ಹೊಂ ಮುಂದೆ' ಎನ್ನುವಷ್ಟು ಅಲ್ಪಾಯಾಸ

ವಾಗಿದೆ. ಏನೋ ದೀರ್ಘಯೋಚನೆಯಲ್ಲಿ ಮನಸ್ಸು ಮುಳುಗಿದೆ. ಆಗ ಬಾಗಿಲವನು ಬಂದು 'ಅವಂತಿ ಭಟ್ಟರು ದಯಮಾಡಿಸಿದ್ದಾರೆ' ಎಂದು ಅರಿಕೆ ಮಾಡಿದನು.

ಗೋಪುರವರ್ಮನು ಭಟ್ಟರನ್ನು ವಿಶ್ವಾಸದಿಂದ ಬರಮಾಡಿಕೊಂಡು ಮರ್ಯಾದೆಯಿಂದ ಆಸನಾದಿಗಳನ್ನು ಇತ್ತು ಉಪಚರಿಸಿದನು. ಭಟ್ಟರ ಮುಖವೂ ಗಂಭೀರವಾಗಿದ್ದು ಸೇನಾನಿಯ ಚಿಂತೆಯನ್ನು ಇಮ್ಮಡಿಸಿತು. ಸೇನಾನಿಯು ಒಂದುಗಳಿಗೆ ಹಾಗೆಯೇ ಇದ್ದು, 'ದೈವಜ್ಞರಿಗೆ ಇಂದೇಕೆ ಹೀಗೆ ಮ್ಲಾನವದನ?' ಎಂದನು.

'ಪ್ರಭು! ಭಕ್ತರ ಉಪಚಯಾಚಯಗಳು ಪ್ರಭುವಿನ ಭಾಗ್ಯವನ್ನೇ ಆಶ್ರಯಿಸಿರುತ್ತವೆ. ಅದಕ್ಕಾಗಿ'

ಸೇನಾನಿಯ ಮುಖವು ಗಂಟಿಕ್ಕಿತು: ವಿಚಾರಿಸಿದನು: 'ಹಾಗೆಂದರೆ?'

'ಸಂತೋಷದ ಸುದ್ದಿಯಾದರೆ ವಿಸ್ತಾರವಾಗಿ ಹೇಳಬಹುದು. ಅನ್ಯಥಾ ಆಗಿರುವಾಗ ಆದಷ್ಟು ಬೇಗ ಮುಗಿಯಿಸುವುದು ಒಳ್ಳೆಯದು. ಒಂದೇ ಮಾತಿನಲ್ಲಿ ಹೇಳಬೇಕು ಎಂದರೆ, ತಾವು ಇನ್ನೊಂದು ವರ್ಷ ವೇಷಾಂತರ ಧರಿಸಿ ತೀರ್ಥಯಾತ್ರೆಯಲ್ಲಿ ಇರುವುದು ಒಳ್ಳೆಯದು. ತಮ್ಮ ಗ್ರಹಚಾರವು ನೆಟ್ಟಗಿಲ್ಲ, ಶತ್ರುಗಳ ಭೀತಿಯುಂಟು'

ದಳವಾಯಿಯು ಅಪಾಯವನ್ನು ಅವಹೇಳನ ಮಾಡುವ ಸಣ್ಣನಗುವನ್ನು ನಗುತ್ತಾ ಕೇಳಿದನು: 'ಹಾಗಾದರೆ ದೇಹಾಪಾಯ ಉಂಟೇನು?'

'ತಮಗೆ ಉಂಟಾಗಬಹುದು'

'ನನ್ನ ತಲೆಯುರುಳಬೇಕಾದರೆ ಈ ರಾಜ್ಯದಲ್ಲಿ ದೊಡ್ಡ ಯುದ್ಧವೇ ಆಗಬೇಕು'

'ಅದೇ ಆಶ್ಚರ್ಯ! ಯುದ್ಧವಾಗುವುದಿಲ್ಲ. ಆದರೆ ಇನ್ನು ಆರು ತಿಂಗಳೊಳಗಾಗಿ ತಮಗೆ ವಿಪತ್ತು ಬರುವುದು. ಈ ಎರಡನ್ನೂ ಬೆಸೆದು ನೋಡುವುದು ಕಷ್ಟವಾಗಿದೆ'

'ಹಾಗಾದರೆ ಏನುಮಾಡಬೇಕು ಎನ್ನುತ್ತೀರಿ?'

'ಪ್ರಭು! ನನ್ನ ಮಾತನ್ನು ತಾವು ನಂಬಿರುವವರು. ತಮ್ಮ ಯಶೋಲಾಭವೂ ಶ್ರೇಯಸ್ಸೂ ನಮ್ಮ ಭಾಗ್ಯವೆಂದು ನಂಬಿರುವವನು ನಾನು. ನನ್ನ ಮಾತನ್ನು ತಾವು ಕೇಳಿ. ಸರ್ವ ಪ್ರಯತ್ನದಿಂದಲೂ ಅನುಕೂಲಪಡಿಸಿಕೊಂಡು ತಾವು ಒಂದು ವರ್ಷ ತೀರ್ಥಯಾತ್ರೆಯನ್ನು ಮಾಡಿಕೊಂಡು ಬನ್ನಿ.'

'ಭಟ್ಟರೆ! ಮಾಂಡಲಿಕನ ಊಹೆಗಳೆಲ್ಲ ನಿಜವಾದರೆ ನಾನೂ ಮಾಂಡಲಿಕನೂ ಇನ್ನಾರು ತಿಂಗಳು ಇರಲಿ, ಒಂದುವರ್ಷ ಸರಿಯಾಗಿ ನಿದ್ದೆ ಮಾಡುವುದಕ್ಕೂ ಅವಕಾಶವಾಗುವುದೋ ಇಲ್ಲವೋ ಹೇಳಲಾರೆ'

'ಪ್ರಭು! ಅಪಾಯವನ್ನು ತಿಳಿದು ಉಪಾಯವನ್ನು ಸೂಚಿಸುವುದಕ್ಕೆ ಈ ಜ್ಯೋತಿಶ್ಶಾಸ್ತ್ರವಿರುವುದು. ಅದನ್ನು ತಾವು ಬಲ್ಲಿರಿ. ನಮ್ಮ ಗುಣಿತದಲ್ಲಿ ತಪ್ಪಾಗಿ ಫಲವು ಹೆಚ್ಚು ಕಡಿಮೆಯಾಗುವುದು ಉಂಟು. ನಾನು ಅದನ್ನು ಇಲ್ಲವೆನ್ನುವುದಿಲ್ಲ. ಆದರೆ ಈಗ ನನ್ನ ಗುಣಿತವು ಸರಿಯಾಗಿದೆಯೆಂದು ಸಂಪೂರ್ಣ ನಂಬುಗೆಯು ನನಗೆ ಇದೆ. ಅಲ್ಲದೆ ತಮ್ಮ ಜಾತಕದಲ್ಲಿಯೂ ಈ ಗಂಡದ ವಿಚಾರ ಬಂದಿದೆ'

ಸೇನಾನಿಯೊಂದುಗಳಿಗೆ ಮನದೊಳಗೇ ಏನೇನೋ ಗುಣಿಸಿಕೊಂಡು ಹೇಳಿದನು: 'ಅದು ಸಾಧ್ಯವಿಲ್ಲ ಭಟ್ಟರೆ! ಈ ಕ್ಷೇತ್ರಕ್ಕೆ ಬೇರೆ ಮಾಂಡಲಿಕೇಶ್ವರರು ಬರುವರು. ಈ ಸಂದರ್ಭದಲ್ಲಿ ಸಂಧಿವಿಗ್ರಹಿಯೂ ಸೇನಾನಿಯೂ ಬದಲಿಸುವುದೆಂದರೆ ಸಾಧ್ಯವೇ ಇಲ್ಲ. ಶಸ್ತ್ರಜೀವಿಗಳಿಗೆ 'ನಿತ್ಯಂ ಸನ್ನಿಹಿತೋ ಮೃತ್ಯುಃ' ಅದಕ್ಕಾಗಿ ವ್ಯಸನವೇಕೆ? ರಾಜಸೇವೆಯನ್ನು ಒಪ್ಪಿಕೊಳ್ಳುವುದು ಎಂದರೆ ಎಳೆನಾಗರದ ಹುತ್ತಕ್ಕೆ ಕೈಯಿಕ್ಕಿದಂತೆ! 'ಭವಿತವ್ಯಂ ಭವತ್ಯೇವ' ಅಲ್ಲವೆ?'

ಭಟ್ಟರು ನಿರುತ್ತರವಾಗಿ ಕುಳಿತಿದ್ದರು. ಸೇನಾನಿಯೂ ವೀರವಾದಗಳನ್ನು ಆಡುತ್ತಿದ್ದರೂ ಆತನ ತೇಜಸ್ಸೂ ಒಂದು ಬಣ್ಣ ಕಡಿಮೆಯಾಗಿದ್ದಿತು. ಇಬ್ಬರಿಗೂ ಒಬ್ಬರ ಸಮ್ಮುಖದಲ್ಲಿ ಒಬ್ಬರು ಇರುವುದು ಬೇಡ. ಆದರೆ ಒಬ್ಬರನ್ನು ಒಬ್ಬರು ತಟ್ಟನೆ ಬೀಳ್ಕೊಡುವ ಸ್ಥಿತಿಯಲ್ಲಿ ಇರಲಿಲ್ಲ. ಪ್ರಹರಿಯು ಬಂದು 'ಮಾಂಡಲಿಕರು ದಯಮಾಡಿಸುತ್ತಿದ್ದಾರೆ' ಎಂದು ಅರಿಕೆಮಾಡಿದನು. ಇಬ್ಬರಿಗೂ ಮನಸ್ಸು ನಿರಾಳವಾಗಿ ಭಟ್ಟರು ಬೀಳ್ಕೊಂಡು ಹೋದರು.

ಮಾಂಡಲಿಕನೂ ಬಂದನು. ಸೇನಾನಿಯು ಉಪಚರಿಸಿ ಏಕಾಸನದಲ್ಲಿ ಕುಳ್ಳಿರಿಸಿಕೊಂಡನು. ಸೇನಾನಿಯು ಮೊದಲಿನಂತೆ ದಿಟ್ಟವಾಗಿರಲು ಎಷ್ಟೋ ಪ್ರಯತ್ನಿಸುತ್ತಿದ್ದರೂ ಅದು ಸಾಧ್ಯವಾಗಲಿಲ್ಲ. ಮಾಂಡಲಿಕನು ಆ ತೇಜೋಹೀನತೆಯನ್ನು ಕಂಡು ಕೇಳಿದನು: 'ಸೇನಾನಿಗಳು ಏನೋ ಮನಸ್ಸಿನಲ್ಲಿದ್ದಾರೆ. ನಾನು ಹೇಳಬೇಕೆಂದಿರುವ ವಿಷಯವನ್ನು ಸದ್ಯದಲ್ಲಿ ಹಾಗೇ ಇಡೋಣವೋ?'

'ಉಂಟೇ? ಆಕಾಶದಲ್ಲಿ ಮೋಡ ಕವಿಯಿತೆಂದು ಸೂರ್ಯನು ಮುಂದುವರಿಯದೆ ಇರುವುದು ಉಂಟೆ? ನಾವಿರುವವರೆಗೂ ನಮ್ಮ ನಮ್ಮ ಕಷ್ಟಸುಖಗಳು ಇದ್ದೇ ಇರುತ್ತವೆ. ಅವು ತಪ್ಪುವುದು ಯಾವಾಗ? ಅಪ್ಪಣೆಯಾಗಲಿ. ರಾಜಕಾರ್ಯ ಮೊದಲು, ಆಮೇಲೆ ನಮ್ಮ ಕಾರ್ಯ!'

'ಏಕೆ? ಏನಾಗಿದೆ? ಕುಟುಂಬದಲ್ಲಿ ಎಲ್ಲರೂ ಆರೋಗ್ಯವೇ ತಾನೇ?

'ಏನೂ ಇಲ್ಲ. ಅದೇನು ಅಷ್ಟು ದೊಡ್ಡ ವಿಷಯವಲ್ಲ. ಆಯಿತು ತಾವು ದಯಮಾಡಿಸಿದುದು?'

'ಈ ಪತ್ರವನ್ನು ನೋಡಿ. ಆಮೇಲೆ ಮುಂದಿನ ಮಾತನಾಡೋಣ'

ಸೇನಾನಿಯು ಓದಿದನು: 'ನವಿಲು ಕಾಡಿನ ಜಂತು. ಊರಿಗೆ ಬಂದರೆ ನಾಯಿಗಳು ಬಿಟ್ಟಾವೆ? ನಾಯಿಗಳು ಬಿಟ್ಟರೂ ಅರಸನ ರತ್ನಪಂಜರವು ತಪ್ಪುವುದೇ? ಅದರಿಂದ ತೆಪ್ಪಗೆ ನರಿಗಳಿಂದ ತಪ್ಪಿಸಿಕೊಂಡು ಮಳೆಗಾಲದವರೆಗೂ ಬದುಕಿದರೆ ಗುಡುಗಿನೊಡನೆ ಕುಣಿಯಬಹುದು'

'ಅರ್ಥವಾಯಿತೆ?'

'ಇಲ್ಲ'

'ಇದು ರಾಜಧಾನಿಯಿಂದ ಬಂದಿರುವ ಪತ್ರ'

'ಯಾರಿಗೆ'

'ನೀಲಕಂಠಗುಪ್ತನಿಗೆ!

ಸೇನಾನಿಯು ಬೆಚ್ಚಿದನು: ಸಂಧಿವಿಗ್ರಹಿ ನಂದಿವರ್ಮನಲ್ಲದೆ ಇನ್ನು ಯಾರು ಈ ಮಾತು ಹೇಳಿದ್ದರೂ ಆತನು ನಂಬುತ್ತಿರಲಿಲ್ಲ. ಈಗ ಯತ್ನವಿಲ್ಲದೆ ನಂಬಿದನು.

'ಬರೆದವರು ಯಾರು? ಇದೆಲ್ಲಿ ಸಿಕ್ಕಿತು?'

'ಬರೆದವರು ಯಾರೋ ಗೊತ್ತಿಲ್ಲ. ಇದು ನಿನ್ನೆಯ ದಿನ ನನ್ನ ಕೈಗೆ ಬಂದಿತು. ಗಿಡಗನಿಂದ ಪೆಟ್ಟುತಿಂದ ಒಂದು ಪಾರಿವಾಳವು ಬಂದು ನಮ್ಮ ಭವನೋದ್ಯಾನದಲ್ಲಿ ಬಿದ್ದಿತು. ಆಳುಗಳು ಅದಕ್ಕೆ ಉಪಚಾರ ಮಾಡಲು ಹಿಡಿದುಕೊಂಡು ತೂತಾಗಿದ್ದ ಅದರ ಹೊಟ್ಟೆಗೆ ಔಷಧವನ್ನು ತುಂಬ ಬೇಕೆಂದು ಯತ್ನಿಸುವಾಗ ಈ ಕಾಗದವು ಸಿಕ್ಕಿತಂತೆ! ಅದು ನನ್ನ ಕೈಗೆ ಬಂದಿತು'

'ಇವರ ಪೂರ್ವೋತ್ತರಗಳೇನೋ ನನಗೆ ತಿಳಿಯಲಿಲ್ಲ.'

'ಇದು ಹೀಗೆ! ಹಿಂದೆ ಚಂದ್ರವರ್ಮನ ಮಗನು ರಾಜಧಾನಿಯಲ್ಲಿ ಬ್ರಾಹ್ಮಣವೇಷಧಾರಿಯಾಗಿದ್ದು ಯುವರಾಜನೊಡನೆ ಹೋರಾಡಿ ಓಡಿ ಹೋದುದನ್ನು ಬಲ್ಲಿರಷ್ಟೆ?'

'ಹೌದು, ಆರೇಳು ವರ್ಷವಾಯಿತು'

'ಅವನ ಹೆಸರು ಮಯೂರ!'

'ಹೌದು'

'ಅವನೇ ಈ ನೀಲಕಂಠಗುಪ್ತನಿರಬೇಕೆಂದು ನನಗೆ ಸಂದೇಹ. ಇವನು ದಾನಧರ್ಮಗಳೆಂಬ ಹೆಸರಿನಲ್ಲಿ ಮಾಡುತ್ತಿರುವ ಕಾರ್ಯಗಳೆಲ್ಲವೂ ಸಿಂಹಾಸನವನ್ನೇರಬೇಕೆಂದು ಸಿದ್ಧಪಡಿಸಿಕೊಳ್ಳುತ್ತಿರುವ ಪಾವಟಿಗೆಗಳು ಹಂತಗಳು ಎಂದು ನನ್ನ ಭಾವನೆ. ಇದಕ್ಕಾಗಿಯೇ ಏನಾದರೂ ಸಂಧಾನ ಮಾಡಾನು ಎಂದು ಅವನಿಗೆ ಹಡಗಿನ ಪಡೆಗೆ ಅಪ್ಪಣೆ ಕೊಡಿಸಲಿಲ್ಲ. ಅವನೇ ಏನೋ ಕೃತ್ರಿಮ ಮಾಡುತ್ತಿರುವನೆಂದು ನನಗೆ ಪ್ರಬಲವಾದ ಸಂದೇಹ ಬಂದಿದೆ. ಅವನ ಗುರುತು ಕಂಡವರು ಇಲ್ಲಿ ಯಾರೂ ಇಲ್ಲ. ಅವನು ಮತ್ತೆ ಯುವರಾಜರ ದರ್ಶನ ಮಾಡಿದ್ದಾಗ ಅವರು ಅವನಿಗೆ ಒಂದು ಮುದ್ರೆ ಯುಂಗರವನ್ನು ಕೊಟ್ಟುದಾಗಿ ವದಂತಿಯಷ್ಟೆ! ಅದು ಅವನ ಕೈಯಲ್ಲಿರ ಬಹುದೆಂದು ನಾನು ಅದನ್ನು ಉಪಾಯವಾಗಿ ನೋಡಲು ಯತ್ನಿಸಿದೆ. ಕೊನೆಗೆ ಅದಲ್ಲವೆಂದು ಗೊತ್ತಾಯಿತು. ಆ ಪ್ರಯತ್ನವನ್ನು ಬಿಡಬೇಕೆಂದು ಕೊಳ್ಳುವುದರೊಳಗಾಗಿ ಇನ್ನೇನೋ ಕಾರಣಗಳು ಒದಗಿ ಆ ಸಂದೇಹವು

ಮತ್ತೆ ಬಲವಾಯಿತು. ಅದಕ್ಕಾಗಿ ರಾಜಧಾನಿಗೆ ಬರೆದು ಯುವರಾಜರ ವರ್ಧಂತಿಗೆ ಬಂದೇ ಬರಬೇಕು ಎಂದು ನಿರೂಪವನ್ನು ಇವನಿಗೆ ಬರೆಸಿದೆ. ಇವನೂ ಈ ದಶಮಿ ಹೊರಡುವುದಕ್ಕೆ ಸಿದ್ಧನಾಗಿದ್ದಾನೆ. ಅಲ್ಲಿ ಇವನನ್ನು ಏನಾದರೊಂದು ನೆಪದಿಂದ ದೀರ್ಘಕಾಲ ನಿಲ್ಲಿಸಿಕೊಳ್ಳುವ ಹಾಗೆಯೂ ಬರೆದಿದ್ದೆ. ಆ ಸಮಯವನ್ನು ಹಿಡಿದು ಇಲ್ಲಿ ಇವನ ಗಣಿಯನ್ನು ಶೋಧಿಸಬೇಕೆಂದು ನನ್ನ ಉದ್ದೇಶ. ಇಷ್ಟೆಲ್ಲ ಆಗಿರುವಾಗ ಈ ಪತ್ರವು ಪಾರಿವಾಳದ ಮೂಲಕ ಬಂದಿದೆ. ಅಕಸ್ಮಾತ್ತಾಗಿ ಅದು ನನ್ನ ಕೈಗೆ ಬಿದ್ದಿದೆ. ಈ ಪತ್ರದಲ್ಲಿ ನಿರೂಪಿತವಾಗಿರುವ ನವಿಲು ನೀಲಕಂಠಗುಪ್ತ ಅಥವಾ ಮಯೂರ. ನಾಯಿಗಳು ನನ್ನ ಸಂಧಾನವನ್ನು ನಡೆಸುವ ಭಟರು. ರತ್ನಪಂಜರ ಸಮ್ರಾಜರ ಆತಿಥ್ಯವನ್ನು ಸ್ವೀಕರಿಸುತ್ತ ಭವನಾಂತರಾಳದಲ್ಲಿ ಚಿನ್ನದ ಸಂಕಲೆಯ ರಾಜಬಂದಿಯಾಗುವುದು. ಈ ಮಳೆಗಾಲದ ನರ್ತನವೂ ಮುಂದಿನ ಗುರುತೇ ಆದರೆ ಮುಂದೆ ವರ್ಷಕಾಲದ ವೇಳೆಗೆ ಈ ಪ್ರಾಂತದಲ್ಲಿ ಯುದ್ಧವಾಗಬಹುದು’

‘ಈಗ ತಾನೇ ನಮ್ಮ ಜೋಯಿಸರು ಬಂದಿದ್ದರು. ಯುದ್ಧವಾಗುವದಿಲ್ಲವಂತೆ!’

‘ಅದು ಸಾಧ್ಯವಿಲ್ಲ. ಈಗ ನಾನೆಂದುಕೊಂಡಿರುವಂತೆಯಾದರೆ ಯುದ್ಧವಾಗಿಯೇ ತೀರಬೇಕು. ಬನವಾಸಿಯನ್ನು ವಾಯದಿಂದ ಸಾಧಿಸುವುದು ಸಾಧ್ಯವಿಲ್ಲ. ಈಗ ನಮ್ಮಲ್ಲಿರುವ ಐವತ್ತುಸಾವಿರದ ಸೇನೆಯನ್ನು ಸೋಲಿಸಿ ತೆಗೆದುಕೊಳ್ಳಬೇಕಾದರೆ ಪ್ರತಿಕಕ್ಷಿಗೆ ಒಂದು ಲಕ್ಷವಾದರೂ ಸೈನ್ಯವಿರಬೇಕು. ಈಗ ನಾನು ಅನುಮಾನ ಪಟ್ಟಿರುವಂತೆ ಗಣಿಯಲ್ಲಿಯೂ ಆ ದೇವಸ್ಥಾನದಲ್ಲಿಯೂ ಸೇನೆಯೇ ಇದೆ ಎಂದುಕೊಂಡರೂ ಐದುಸಾವಿರದ ಮೇಲೆ ಇರಲಾರದು’

‘ಐದುಸಾವಿರದ ಸೇನೆಯ ಬಲದಿಂದ ನಮ್ಮ ಮೇಲೆ ಬೀಳುವುದು ಎಂದರೆ ಅದಕ್ಕಿಂತಲೂ ಹುಚ್ಚಿಲ್ಲ. ಆದರೆ ಇನ್ನೆಲ್ಲಿಯಾದರೂ ಗುಪ್ತ ದುರ್ಗಗಳಿದ್ದರೆ ಆ ಮಾತು ಬೇರೆ. ಈ ದೇಶದಲ್ಲಿನ ಕಲ್ಲುಮರಗಳನ್ನೆಲ್ಲ ನಾನು ಬಲ್ಲೆ. ಇಲ್ಲೆಲ್ಲಿಯೂ ಗುಪ್ತದುರ್ಗವಿಲ್ಲ. ಸಹ್ಯಾದ್ರಿಯ ಸಾಲಿನಲ್ಲಿ ಉಂಟು. ಆದರೆ, ಅಲ್ಲಿಂದ ಈಚೆಗೆ ಬರಬೇಕಾದರೆ ಬಹಳ ಶ್ರಮ. ಅಲ್ಲದೆ,

ಚಂದ್ರಗುತ್ತಿಯಲ್ಲಿ ನಮ್ಮ ಕಟಕವಿದೆ. ಈ ದಕ್ಷಿಣ ಪಶ್ಚಿಮಗಳಿಂದ ಎತ್ತಲೂ ನಮಗೆ ತಿಳಿಯದೆ ಒಂದು ನೊಣ, ಒಂದು ಸೊಳ್ಳೆ, ಒಂದು ಇರುವೆ ಕೂಡ ಚಲಿಸುವಂತಿಲ್ಲ'

'ತಾವು ಸ್ಥೂಲದುರ್ಗಗಳನ್ನು ಹೇಳೋಣವಾಯಿತು. ಆದರೆ ಒಂದನ್ನು ತಾವು ಮರೆತಿರಿ. ಜನರು ಹಿಂದಿನ ಅರಸರ ಹೆಸರಿನಲ್ಲಿ ಭಾರಿಯ ಧರ್ಮಗಳನ್ನು ನಡೆಸುತ್ತಿರುವುದು ತಮಗೆ ಗೊತ್ತೇ? ಈ ಕಳೆದ ಒಂದು ವರ್ಷದಲ್ಲಿ ಈ ಬನವಾಸಿ ನಾಡಿನಲ್ಲಿ ಎಳೆಯ ಮಕ್ಕಳಿಗೆ ಹಾಲು ಕೊಡಲು ಒಂದುನೂರು ಇಪ್ಪತ್ತೆಂಟು ಕರುಹಟ್ಟಿಗಳಾಗಿವೆ. ಬಲ್ಲಿರಾ? ನಲವತ್ತು ವೈದ್ಯಶಾಲೆಗಳು. ಇಪ್ಪತ್ತನಾಲ್ಕು ದೇವಸ್ಥಾನಗಳಿಗೆ ನೀಲಕಂಠಗುಪ್ತನ ನೇರವಾದ ಪ್ರಕಟವಾದ ಧರ್ಮ. ಎಲ್ಲೆಲ್ಲಿಯೂ ಜಾತ್ರೆಗಳನ್ನು ನಡೆಸುವವನು ಅವನು. ಉಳಿದ ಧರ್ಮಗಳೆಲ್ಲ ಚಂದ್ರ ಅಥವಾ ಆ ಅರ್ಥಬರುವ ಇನ್ನೇನಾದರೂ ಶಬ್ದಗಳಿಂದ ಆರಂಭವಾಗುವ ಹೆಸರಿನಲ್ಲಿ. ಒಂದೆಡೆ ಚಂದರಸರ ಕಂದನ ಶಾಲೆ. ಇನ್ನೊಂದೆಡೆ ಚಂದ್ರಕಿರಣ ವೈದ್ಯಶಾಲೆ. ಇವೆಲ್ಲವೂ ನಿರುದ್ದೇಶಗಳೇ? ಮುಂದಿನ ಅರಸಾಗುವನು ತನ್ನ ದುರ್ಗಗಳನ್ನು ಕಟ್ಟುವುದು ಇಲ್ಲ. ಈ ದುರ್ಗವನ್ನೆಂತು ಗೆಲ್ಲುವುದು?'

'ಅಪ್ಪಣೆಯಾಗಲಿ ಕೇಳುತ್ತಿದ್ದೇನೆ'

'ಗುಪ್ತನಿಗೂ ಈ ಧರ್ಮಗಳಿಗೂ ಸಂಬಂಧವು ಪ್ರಕಟವಾಗಿ ಕಂಡು ಬಂದಿದ್ದರೆ ಆದುದಾಗಲಿ ಎಂದು ಅವನನ್ನು ಹಿಡಿದುಬಿಡುತ್ತಿದ್ದೆ. ಈಗ ನಿಷ್ಕಾರಣವಾಗಿ ಹಿಡಿಯಲು ಸಾಧ್ಯವಿಲ್ಲ. ಅಲ್ಲದೆ ದಂತಿವರ್ಮನು ಅವನ ಪ್ರಾಣಾಪ್ತ. ಇಂತಹ ಭಾರಿಯ ವರ್ತಕನನ್ನು ಹಿಡಿಯಬೇಕಾದರೆ ಮಾಂಡಲಿಕೇಶ್ವರರ ಅಪ್ಪಣೆಯಿಲ್ಲದೆ ನಾವು ಹಿಡಿಯುವುದು ತಾನೇ ಎಂತು? ದುಡುಕಿ ಹಿಡಿದರೂ ಈ ಗುಪ್ತನು ಮಾಡಿರುವ ಅಪರಾಧವೇನು? ಅದರಿಂದ ಪ್ರತ್ಯಕ್ಷವಾಗಿ ಏನು ಮಾಡಲೂ ಸಾಧ್ಯವಿಲ್ಲ'

'ಸರಿ'

'ಪರೋಕ್ಷವಾಗಿ ಮುಗಿಸಿಬಿಡೋಣ, ಬೆಣ್ಣೆತಿಂದ ಬೆಕ್ಕಿನ ಹಾಗೆ ಮಾಡೋಣ ಎಂದು ಅದಕ್ಕಾಗಿಯೂ ಯತ್ನಿಸಿದೆ. ಹನ್ನೆರಡು ಜನ ಭಟರನ್ನು

ಕಳುಹಿಸಿದೆ. ಅವರೆಲ್ಲ ಚತುರರು. ಅವರ ಮೇಲೂ ಬಲವಾದ ಕಾವಲಿದ್ದಿತು. ಆದರೂ ಅವರು ಅದೃಶ್ಯರಾಗಿದ್ದಾರೆ. ಏನಾದರೆಂಬ ಗುರುತೂ ಇಲ್ಲ'

'ಅಲ್ಲಿಗೆ ಪ್ರತಿಪಕ್ಷವೊಂದಿದೆ ಎಂದಾಯಿತು'

'ಅದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಆ ಪ್ರತಿಪಕ್ಷಿಯು ಗುಪ್ತನೇ ಎಂದು ಪ್ರತ್ಯಕ್ಷ ಮಾಡಿಕೊಳ್ಳಬೇಕು'

'ಅದಕ್ಕಾಗಿ ತಾವು ಏನುಮಾಡಬೇಕು ಎನ್ನುವಿರಿ?'

'ಈಗ ಈ ಹಕ್ಕಿಗೆ ಇನ್ನು ಎರಡುದಿನದಲ್ಲಿ ಗುಣವಾಗುವುದು. ಈ ಹಕ್ಕಿಯನ್ನು ಮತ್ತೆ ನಾವು ಬಿಟ್ಟರೆ ನನ್ನ ಊಹೆಯು ಸರಿಯಾದರೆ ಇದು ನೇರವಾಗಿ ಅಲ್ಲಿಗೆ ಹೋಗಬೇಕು. ಈ ಚೀಟಿಯನ್ನು ನೋಡಿದ ಮೇಲೆ ಗುಪ್ತನು ತನ್ನ ರಾಜಧಾನಿಯ ಪ್ರಯಾಣವನ್ನು ನಿಲ್ಲಿಸಬೇಕು'

'ಒಂದು ವೇಳೆ ಹೊರಟರೆ?'

'ಆಗ ಇನ್ನೂ ಅನುಕೂಲ. ಈಗ ಆಗಲೇ ನಾಗರಖಂಡದ ಪ್ರಾಂತದಲ್ಲಿ ದೀವಟಿಗೆ ಕಳ್ಳರು ತಲೆಯೆತ್ತಿ ನಾಲ್ಕೈದು ಸಲ ಹಾದಿ ಹೋಕರನ್ನು ಅಡ್ಡಗಟ್ಟಿದ್ದಾರೆ. ಇವನನ್ನು ಒಂದು ಭಾರಿಯ ಗುಂಪು ಅಡ್ಡಯಿಸಿ ಮುಗಿಸುವುದು'

'ಅವನ ರಕ್ಷಣೆಗೆ ನಮ್ಮ ಸೈನಿಕರಿರುವರಲ್ಲ'

'ಸಾಮ್ರಾಜ್ಯದ ಯೋಗಕ್ಷೇಮಕ್ಕಾಗಿ ಒಂದು ತುಂಡು ಸೈನ್ಯವು ಹೋದರೆ ನಷ್ಟವೇನು?'

'ನಿಜ. ಒಂದು ತುಂಡು ಅಲ್ಲ ಒಂದು ಸಾವಿರ ಹೋದರೂ ಚಿಂತೆಯಿಲ್ಲ. ಆದರೆ ನಾನು ತಿಳಿದುತಿಳಿದೂ ಅವರ ನಾಶವನ್ನು ತಪ್ಪಿಸಲಿಲ್ಲವೆಂಬುದು ಪ್ರಕಟವಾದರೆ ಸೈನ್ಯದಲ್ಲಿರುವ ಬಿಗಿಯು ತಪ್ಪಿಹೊಗುವುದು'

'ನಿಜ ಪ್ರಕಟವಾದರೆ ಅಲ್ಲವೆ? ಸಂಧಿವಿಗ್ರಹಿ ಸೇನಾನಿಗಳು ತಾವು ಮಾಡುವ ಕಾರ್ಯವನ್ನು ಗುಪ್ತವಾಗಿ ಮಾಡಬಲ್ಲರು. ಆ ಗುಪ್ತಕಾರ್ಯವು ಬೆಳಕಿಗೇ ಬರದಂತೆ ಆ ಕಾರ್ಯದ ಪೂರ್ವೋತ್ತರಗಳನ್ನೆಲ್ಲ ಅಳಿಸಿಯೂ ಬಿಡಬಲ್ಲರು. ಅಲ್ಲವೆ?'

'ತಾವು ದೊಡ್ಡವರು. ನಾನು ಪ್ರತಿಯಾಡಬಾರದು. ಆದರೂ ಈ ಕಾರ್ಯದಲ್ಲಿ ತಾವು ಸ್ವತಂತ್ರಿಸಿ ಮಾಡಿದ್ದರೆ ಚೆನ್ನಾಗಿದ್ದಿತು. ಈಗಲೂ ನಾನು ಈ ಕಾರ್ಯದಲ್ಲಿ ಉದಾಸೀನನಾಗಲು ಅಪ್ಪಣೆಯಾಗಬೇಕು. ಪ್ರತಿ ಪಕ್ಷವಿದೆಯೆಂದು ಅಪ್ಪಣೆಯಾಯಿತು. ಇನ್ನು ಹಗಲಿರುಳೂ ಕಾವಲಿದ್ದು ಅವರ ಹುಟ್ಟು ಅಣಗಿಸುವ ಪ್ರಯತ್ನದಲ್ಲಿ ನಾನು ಪ್ರಾಣವನ್ನು ಬೇಕಾದರೂ ಇಡುವೆನು. ಆದರೆ, ನಿರ್ದೋಷಿಯಾಗಿ ಜನೋಪಕಾರಿಯಾಗಿರುವ ಗುಪ್ತನ ಗುಪ್ತವಧೆಯ ವಿಚಾರದಲ್ಲಿ ನಾನು ಉದಾಸೀನ. ಸಾಧ್ಯವಾದರೆ ತಾವೂ ಹಾಗೆಯೇ ಆಗಬೇಕೆಂದು ಇರಬೇಕೆಂದು ನನ್ನ ಆಸೆ'

'ಸೇನಾನಿಗಳೇ! ನಾನೂ ತಲೆಗಡಿಕನಲ್ಲ. ಆದರೆ ವಿಷಯಗಳನ್ನು ಒಂದ ಕ್ಕೊಂದು ಸೇರಿದಂತೆ ಕ್ರಮವಾಗಿರಿಸಿ ನೋಡಿ ಊಹೆಯಿಂದ ಅವುಗಳನ್ನು ತಿಳಿದು ರಹಸ್ಯವನ್ನು ಭೇದಿಸಿದ್ದೇನೆ. ಇನ್ನೂ ವಿಷಯಗಳಿವೆ. ಕೇಳೋಣ ವಾಗಲಿ: ಮಯೂರನು ರಾಜಧಾನಿಯಿಂದ ತಪ್ಪಿಸಿಕೊಂಡು ಬನವಾಸಿಯ ಹಿಂದಣ ಮಂತ್ರಿ ಸೇನಾನಿಗಳ ಜೊತೆ ಸೇರಿದ್ದನೆಂಬುದನ್ನು ಮರೆತಿರಾ?'

'ನನಗೆ ಈಗ ಜ್ಞಾಪಕ ಬಂದಿತು. ನಾನೂ ಅದನ್ನೇ ಕೇಳ ಬೇಕೆಂದಿದ್ದೆ. ಗುಪ್ತನು ಮಯೂರನಾದರೆ ಶರ್ಮನೂ ದತ್ತನೂ ಎಲ್ಲಿ?'

'ನನಗೂ ಈ ಪ್ರಶ್ನೆಯು ಕಠಿಣವಾಗಿದೆ. ಗುಪ್ತನ ಬಳಿ ಬಂದು ಹೋಗುವವರು ಪ್ರತಿಯೊಬ್ಬರನ್ನೂ ಪರೀಕ್ಷಿಸಲಾಗಿದೆ. ಅದರಲ್ಲಿ ಆ ಅಭಟ ಪ್ರವೇಶವಾದ ಅಗ್ರಹಾರ ಕ್ಷೇತ್ರದಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಿರುವ ಜೈನ ಶಾಂತೀಶ್ವರನುಂಟಲ್ಲ ಅವನು ಒಬ್ಬ. ಇನ್ನಿಬ್ಬರು ಪಾದಚಾರಿಗಳಾಗಿ ತಿರುಗುವ ಬ್ರಹ್ಮಚಾರಿಗಳು ಉಂಟು. ಅವರಲ್ಲಿ ನನಗೆ ಅನುಮಾನ ಬಂದಿದೆ. ಇಷ್ಟಕ್ಕೂ ಈ ಸಂದೇಹವು ಈಚೀಚೆಗೆ ಬಲವಾಗುತ್ತಿದೆ'

'ಏನೋ ಎಲ್ಲವೂ ಸಂದಿಗ್ಧವಾಗಿರುವ ಸಮಯದಲ್ಲಿ ದುಡುಕುವುದ ಕ್ಕಿಂತ ಎಲ್ಲವೂ ಖಂಡಿತವಾದ ಮೇಲೆ ಒಂದೇಟು ಎರಡು ತುಂಡು ಮಾಡು ವುದು ಒಳ್ಳೆಯದು'

'ಹೌದು ಅದು ನನಗೂ ಸಮ್ಮತ. ಆದರೆ ಆ ಮಳೆಗಾಲದ ಕುಣಿತ ದಲ್ಲಿ ಏನೋ ವಿಷವಿದೆಯೆಂದು ನನ್ನ ಊಹೆ. ಗುಪ್ತನು ರಾಜಧಾನಿಯಲ್ಲಿ

ಅಧ್ಯಯನ ಮಾಡುತ್ತಿದ್ದಾಗ ಸಹಾಧ್ಯಾಯಿಗಳಾಗಿದ್ದವರು ಇಬ್ಬರನ್ನು ಕರೆಯಿಸಿ ಅವರಿಗೆ ಬೇಕಾದ ಹಾಗೆ ಪ್ರತ್ಯಾಶೆ ತೋರಿಸಿ ಅವರನ್ನು ಗೂಢಚಾರರ ಕಾವಲಿನಲ್ಲಿ ಗಣಿಗೆ ಕಳುಹಿಸಲಾಗಿದೆ. ಈ ದೇಶದಲ್ಲಿ ವೃದ್ಧರಾದ ಕೆಲವರು ನಾಡಗೌಡರನ್ನೂ ಪ್ರಭುಗಳನ್ನೂ ಆಶೆಯ ಗಾಳವನ್ನಿಕ್ಕಿ ಹಿಡಿಯಲಾಗಿದೆ. ಅವರಿಂದ ಈ ರಹಸ್ಯದ ಭೇದನವಾಗಬೇಕಾಗಿದೆ. ಈಗಂತೂ ಈ ಹಕ್ಕಿಯ ವಿಷಯವೂ ಗಮನಿಸಬೇಕಾದುದೇ !'

'ಪ್ರಭುಗಳು ಕ್ಷಮಿಸಬೇಕು. ಇಷ್ಟೇಕೆ ಒದ್ದಾಟ? ಈ ದ್ರಾವಿಡ ಪ್ರಾಣಾಯಾಮವೇಕೆ? ನೇರವಾಗಿ ನುಗ್ಗಿ ನಮಗೆ ಅನುಮಾನವಿರುವ ಪ್ರದೇಶಗಳನ್ನು ಮಿಂಚಿನ ವೇಗದಿಂದ ಆಕ್ರಮಿಸಿದರಾಯಿತಲ್ಲ?'

'ಅದು ನಮ್ಮ ಕೈಯಲ್ಲಿರುವ ಕೆಲಸ. ಯಾವಾಗ ಬೇಕಾದರೂ ಆಗಬಹುದು. ಅದರಿಂದ ತಡೆದಿದ್ದೇನೆ. ಅನ್ಯಾಯವಾಗಿ ಜನವಧೆಯಾಗುವುದು ನನಗೂ ಸಮ್ಮತವಿಲ್ಲ. ಅಲ್ಲದೆ ಯುವರಾಜರಂತೂ ಜನಹಿಂಸೆಯ ವಿಚಾರದಲ್ಲಿ ಹೇಗಿರುವರೆಂಬ ವಿಷಯವು ತಮಗೂ ತಿಳಿದೇ ಇದೆ. ಹಾಗೆಂದುಕೊಂಡು ನಾನು ಸುಮ್ಮನೆ ಕುಳಿತಿಲ್ಲ. ಆ ದೇವಸ್ಥಾನವನ್ನು ನೋಡಲು ನನ್ನ ನಂಬಿಕೆಯ ಪ್ರತಿನಿಧಿಯನ್ನು ಕಳುಹಿಸಿದ್ದೆ. ಆಗ ಇಂದ್ರೋತ್ಸವವೆಂಬ ನೆಪದಿಂದ ಅಲ್ಲಿ ಎಲ್ಲರೂ ಕೆಲಸಗಳನ್ನು ನಿಲ್ಲಿಸಿದ್ದರು. ಆದರೂ ಅವನು ಕೆಲಸ ನಡೆಯುವ ಸ್ಥಳಗಳನ್ನೆಲ್ಲ ಕಣ್ಣಿಟ್ಟು ನೋಡಿಕೊಂಡು ಬಂದನು. ಅದರಿಂದ ನನ್ನ ಸಂದೇಹವು ದೃಢಪಡಲೂ ಇಲ್ಲ ನಿವಾರಣೆಯಾಗಲೂ ಇಲ್ಲ.

'ಹಿಂದಿನ ರಾಜರ ಸೇವೆ ಮಾಡಿರುವರು ಎಷ್ಟೋ ಜನರಿದ್ದೂ ಆಗಿನ ಮಂತ್ರಿ ದಳವಾಯಿಗಳನ್ನು ಗುರುತಿಸುವುದು ಅಸಾಧ್ಯವಾಗಿದೆಯೆ?'

'ಆಗಿನವರಲ್ಲಿ ಅನೇಕರು ಪರಲೋಕವಾಸಿಗಳಾಗಿದ್ದಾರೆ. ಇಲ್ಲಿಗೆ ಇಪ್ಪತ್ತೆರಡು ವರುಷವಾಯಿತು ನೋಡಿ. ಉಳಿದವರು ಹಿಂದಿನವರ ನಿಸ್ಸೀಮ ಭಕ್ತರು ಪ್ರಾಣವನ್ನಾದರೂ ಕೊಟ್ಟಾರು ಗುಟ್ಟನ್ನು ಬಿಡುವುದಿಲ್ಲ'

'ಹಾಗಾದರೆ ಈ ಕತ್ತಲ ಕಣ್ಣಾಮುಚ್ಚಾಲೆಯ ಕೊನೆಯೇನು?'

'ನಾನೂ ಬಹಳ ಬುದ್ಧಿವಂತನೆಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದೆ. ವಿಪಕ್ಷದವರ ರಹಸ್ಯದ ಭೇದನೆಯಲ್ಲಿ ಚಾಣಿಕ್ಯನಿಗಿಂತಲೂ ಒಂದು ಕೈ ಹೆಚ್ಚೆಂದುಕೊಂಡಿದ್ದೆ. ಈ ಸಂದರ್ಭದಲ್ಲಿ ಮಾತ್ರ ಕುಂಟುಗರದಲ್ಲಿ ಪಗಡೆ ಯಾಡಿದ ಹಾಗೆ ಆಗಿದೆ. ರಹಸ್ಯವೇ ಇಲ್ಲದೆ ಅನುಮಾನಕ್ಕೆಡೆಯೇ ಇಲ್ಲದ ಎಡೆಯಲ್ಲಿ ರಹಸ್ಯವಿದೆಯೆಂಬ ಅನುಮಾನವನ್ನು ಕಲ್ಪಿಸಿಕೊಂಡು ಭ್ರಾಂತ ನಾಗಿರುವೆನೋ ಅಥವಾ ಈ ರಹಸ್ಯವು ನನ್ನ ಬುದ್ಧಿಗೆಟಕದ ರಾಜ ರಹಸ್ಯ ವಾಗಿರುವುದೋ ಹೇಳಲಸಾಧ್ಯ! ಆದರೂ ಇದ್ದುದನ್ನು ಇಲ್ಲವೆಂದುಕೊಂಡು ಪೆಚ್ಚು ಬೀಳುವುದಕ್ಕಿಂತ, ಇಲ್ಲದುದನ್ನೂ ಇದೆಯೆಂದುಕೊಂಡು ವಿಚಾರಿಸಿ ಜಾಗ್ರತನಾಗಿರುವುದು ಒಳ್ಳೆಯದು ಎಂದು ನಾನೂ ಕಣ್ಣು ಬಿಟ್ಟು ನೋಡು ತ್ತಿದ್ದೇನೆ. ಇನ್ನೊಂದು ಸಂಗತಿ. ಗಣಿಗಳಲ್ಲಿ ಕೆಲಸಮಾಡುವುದಕ್ಕೆ ಸೈನ್ಯ ಯೋಗ್ಯವಾದ ತೀವ್ರಾಶ್ವಗಳು. ಎಲ್ಲಿಯಾದರೂ ಕೇಳಿದ್ದಿರಾ?'

'ನಾನೂ ಈ ವಿಚಾರವನ್ನು ಕೇಳಿದೆ. ಅಲ್ಲದೆ ಅಲ್ಲಿರುವ ಆ ಉತ್ತಮಾಶ್ವಗಳು ಯಾವ ರಾಜರ ಅರಮನೆಯಲ್ಲಿರುವ ಜಾತ್ಯಶ್ವಗಳಿಗೂ ಕಡಿಮೆಯಿಲ್ಲವೆಂದೂ ಕೇಳಿದೆ. ಒಂದು ದಿನ ಗುಪ್ತನನ್ನೇ ಈ ವಿಚಾರವಾಗಿ ಕೇಳಿದೆ. ಅವನು ನಗುತ್ತ ನನಗೆ ಕುದುರೆಗಳ ಹುಚ್ಚು ಎಂದನು. ಆದರೆ ಆಗ ನನಗೆ ಅನುಮಾನವೇ ಇರಲಿಲ್ಲ. ಈಗ ನನಗೂ ಸಂದೇಹ ಬಂದಿದೆ. ಅಪ್ಪಣೆಯಾದರೆ ನಾಳಿನ ಬೆಳಗಾಗುವ ವೇಳೆಗೆ ಗುಪ್ತನನ್ನು ಸಪರಿವಾರವಾಗಿ ಹಿಡಿದು ತರುತ್ತೇನೆ, ಅಪ್ಪಣೆಯಾಗಲಿ. ಇನ್ನೊಂದು ಅರಿಕೆ. ಈ ಬೆಣ್ಣೆಯಲ್ಲಿ ಕೂದಲನ್ನು ಹುಡುಕುವ ಕುಶಾಗ್ರಬುದ್ಧಿಯ ಕಾರ್ಯದಲ್ಲಿ ಮಾತ್ರ ನನ್ನನ್ನು ನಿಯೋಗಿಸಬೇಡಿ. ನೋಡಿ, ಕತ್ತಿಯ ಬಾಯಿ ಎಷ್ಟು ತೀವ್ರ? ಅದರ ಬೆನ್ನೂ ಹಾಗೆಯೇ ಇರುವುದೇ? ಹಾಗೆ. ನನ್ನ ತೀವ್ರತೆಯೆಲ್ಲ ರಣರಂಗ ದಲ್ಲಿ! ಪ್ರತಿಪಕ್ಷದವರ ನಡುಮುರಿಯವುದರಲ್ಲಿ. ಅದಿಲ್ಲದೆ ಎರಡನೆಯವ ರಿಲ್ಲದ ಈ ಚದುರಂಗದಾಟದಲ್ಲಿ ನನ್ನ ಕೈಸಾಗದು. ಅದಕ್ಕೆ ತಾವು ಸರಿ. ಇನ್ನೂ ಒಂದುಸಲ ಹೇಳುತ್ತೇನೆ. ಅಪ್ಪಣೆಯಾದರೆ ಆ ಶಾಂತೀಶ್ವರರನ್ನೂ ಈ ಗುಪ್ತನನ್ನೂ ಕೋಳಿ ಕೂಗುವುದರೊಳಗಾಗಿ ಹೆಡೆಮುರಿಕಟ್ಟಿ ತಂದು ಪಾದದಲ್ಲಿ ಕೆಡಹುತ್ತೇನೆ'

'ಅಹುದು; ಸೇನಾನಿಗಳ ದೃಢಮುಷ್ಟಿಯ ಪ್ರಭಾವವನ್ನೂ ಪ್ರಹರಣ ಚಾತುರ್ಯವನ್ನೂ ನಂಬಿಯೇ ನಾನೂ ಹೀಗೆ ಅಳೆದು ಸುರಿಯುತ್ತಿರುವುದು. ನನಗೆ ನಮ್ಮ ಬಲದಲ್ಲಿ ಎಳ್ಳಷ್ಟು ಅಪನಂಬಿಕೆ ಇದ್ದರೂ ಈ ವೇಳೆಗಾಗಲೇ ಮೇಲೆಬಿದ್ದು ಸುತ್ತಿಕೊಳ್ಳುತ್ತಿದ್ದೆ. ಆತ್ಮವಿಶ್ವಾಸವಿರುವುದರಿಂದಲೇ ಈ ಧೈರ್ಯ! ಆಗಲಿ. ಅಂತೂ ತಾವು ಮಾತ್ರ ಸೈನ್ಯವನ್ನು ಸಿದ್ಧವಾಗಿಟ್ಟಿರಿ, ಅಲ್ಲದೆ ಈ ಸಲ ಮಳೆಗಾಲದಲ್ಲಿ ತಾವು ಶ್ರೀಶೈಲಕ್ಕೆ ಹೋಗುವುದು ಸಾಧ್ಯವಾದೀತೋ ಇಲ್ಲವೋ?

'ಅದು ತಮ್ಮ ಇಷ್ಟ. ಆದರೆ ಈ ಮಲೆನಾಡು ಅಥವಾ ಮಳೆನಾಡಿನಲ್ಲಿ ಮಳೆಗಳು ಆರಂಭವಾದರೆ ಆಯಿತು. ನಾವು ಇಲ್ಲಿದ್ದರೂ ಒಂದೆ! ಶ್ರೀಶೈಲದಲ್ಲಿದ್ದರೂ ಒಂದೆ! ಕೈಲಾಸದಲ್ಲಿದ್ದರೂ ಒಂದೇ!'

'ಹೌದು, ಆದರೂ ಹಾಗೆಂದು ದೂರವಿರುವುದೇ?'

'ಪ್ರಭು! ಆಗಲೇ ಅರಿಕೆಮಾಡಿದೆನಲ್ಲಾ, ತಾವು ಸೂತ್ರಧಾರಿಗಳು, ನಾವು ಆಟದ ಗೊಂಬೆಗಳು. ತಾವು ಹೇಳಿದಹಾಗೆ ನಾವು!'

——o——

## ಇಪ್ಪತ್ತನಾಲ್ಕನೆಯ ಪ್ರಕರಣ

ರಾಜಧಾನಿಗೆ ಪಡುವಲಾಗಿ ಒಂದು ದಿನ ಪಯಣದಷ್ಟು ದೂರದಲ್ಲಿ ಸಹ್ಯಾದ್ರಿಯ ಪರ್ವತ ಪ್ರಾಂತದಲ್ಲಿ ಒಂದು ಗಿಡುಗಾಡು. ದೊಡ್ಡ ದೊಡ್ಡ ಗಿಡಗಳು ಇದ್ದರೂ ಅವು ಯಾವೂ ಮುಗಿಲನ್ನು ಮುಟ್ಟುವ ಛಲದಿಂದ ಬೆಳೆದ ಆ ಬಿದಿರನ್ನು ಮೀರಿಸಿಲ್ಲ. ಹಾಗೆ ಎತ್ತರವಾಗಿ ಬೆಳೆದ ಆ ಬಿದಿರ ಮೆಳೆಗಳ ದಟ್ಟವಾದ ಕಾಡಿನಲ್ಲಿ ಒಂದು ಗಜವೀಧಿ. ಅಲ್ಲಿ ಅರಮನೆಯ ಆನೆಗಳು ಇನ್ನೂರು ಇವೆ. ದಿನವೂ ಅಲ್ಲಿ ಅವು ಯುದ್ಧಕ್ರೀಡೆಯನ್ನು ಆಡುವುವು. ಅಲ್ಲಿ ಅವುಗಳಿಗಾಗಿಯೇ ಒಂದು ಗಜವೈದ್ಯಶಾಲೆ. ಒಂದೊಂದು ಆನೆಗೂ ಇಬ್ಬರು ಆಳುಗಳು ಒಬ್ಬ ಮಾವುಟಿ. ಅವರ ಸಂಸಾರಗಳೆಲ್ಲವೂ ಅಲ್ಲಿಗೆ ಸುಮಾರು ಒಂದು ಮೈಲಿಯ ದೂರದಲ್ಲಿರುವ ಪಾಳ್ಯದಲ್ಲಿ. ಗಜವೀಧಿಯಲ್ಲಿ ಬಹಳ ಕಟ್ಟುನಿಟ್ಟು. ಒಳಗೆ ಯಾರೂ ಹೋಗಕೂಡದು. ಆ

ಆವರಣದಲ್ಲಿ ಮಹಾಮಾತ್ರನ ಅಪ್ಪಣೆಯಿಲ್ಲದೆ ಯಾರಾದರೂ ಪ್ರವೇಶಿಸಿದರೆ ಅವರಿಗೆ ಆ ಕೂಡಲೇ ಅಲ್ಲಿಯೇ ಬೇರೆ ವಿಚಾರಣೆಯಿಲ್ಲದೆ ಮರಣ ಶಿಕ್ಷೆ ಯಾಗುವುದು. ಆಳುಗಳು ಯಾರಾದರೂ ಹೋಗಿ ಹೊಸಬರು ಬಂದರೆ ಅವರಿಗೆ ಅವನು ಒಂದು ಅಪ್ಪಣೆಯ ಚೀಟಿಯನ್ನು ಕೊಡುವನು. ಆ ಚೀಟಿಯನ್ನು ಕಳೆದುಕೊಂಡರೆ ಆಳಿಗೆ ಕೆಲಸವೂ ಹೋಗುವುದು, ಶಿಕ್ಷೆಯೂ ತಪ್ಪದು.

ಇಷ್ಟು ಕಟ್ಟುನಿಟ್ಟಿನ ವೀಥಿಯಲ್ಲಿ ಈ ದಿನ ಒಂದು ವಿಚಿತ್ರ ನಡೆದಿದೆ. ಯಾವನೋ ಒಬ್ಬನು ಶ್ರಮಣನು ಬಂದು ಒಂದು ಗಿಡಕ್ಕೆ ಒಂದು ವರಹ ವನ್ನು ಒಂದು ಅರಿಸಿನದ ಬಟ್ಟೆಯಲ್ಲಿ ಕಟ್ಟಿದ್ದಾನೆ. ಅದನ್ನು ಆನೆಯವ ನೊಬ್ಬನು ಕಂಡು, 'ಅವನು ಅಪ್ಪಣೆಯಿಲ್ಲದೆ ವೀಥಿಯನ್ನು ಪ್ರವೇಶಿಸಿದ' ನೆಂಬ ನೆಪದಮೇಲೆ ಅವನನ್ನು ನಾಯಕನ ಹತ್ತಿರಕ್ಕೆ ಎಳೆದುಕೊಂಡು ಬಂದಿದ್ದಾನೆ. ನಾಯಕನ ಕೋಣೆಯಲ್ಲಿ ಅವನ ವಿಚಾರಣೆಯಾಗುತ್ತಿದೆ. ಈಚೆ ಒಂದು ಸಣ್ಣ ಗುಜಗುಂಪಲು. ಅಲ್ಲಿಂದ ಹೊರಟ ಸುದ್ದಿಯಂತೆ, 'ಶ್ರಮಣನು ವೀಥಿಯ ಕಡೆಯೇ ಬರಲಿಲ್ಲ. ಅವನು ತನ್ನ ಪಾಡಿಗೆ ತಾನು ಒಂದು ಬಿದಿರ ಮೆಳೆಗೆ ಏನೋ ಕಟ್ಟುತ್ತಿದ್ದನು. ಅದು ನಾಣ್ಯವೇ ಇರ ಬೇಕೆಂದು ಊಹಿಸಿ ಆನೆಯ ಆಳು ಒಬ್ಬನು ಅದನ್ನು ಬಿಚ್ಚಿಕೊಳ್ಳಲು ಅಲ್ಲಿ ಕಾದಿದ್ದನು. ಇನ್ನೊಬ್ಬ ಮಾವಟಿಗನೂ ಅದೇ ಅಭಿಪ್ರಾಯದಿಂದ ಅಲ್ಲಿಗೆ ಹೋದನು. ಆ ಇಬ್ಬರೂ ಸೇರಿ ಅದನ್ನು ಬಿಚ್ಚಿದರು. ಅದು ಚಿನ್ನದ ನಾಣ್ಯ. ಕೂಡಲೇ ಇಬ್ಬರಿಗೂ ತನಗೆ ಬರಬೇಕು ತನಗೆ ಬರಬೇಕು ಎಂದು ಗುದ್ದಾಟಕ್ಕೆ ಮೊದಲಾಗಿ, ಕೊನೆಗೆ ಅದು ಆ ಶ್ರಮಣನನ್ನೇ ಮಹಾ ಮಾತ್ರನ ಬಳಿಗೆ ಹಿಡಿದು ತರುವುದರಲ್ಲಿ ಪರಿಣಮಿಸಿತು'

ಅವನು ವಿಚಾರಣೆಗೆ ಆರಂಭಿಸಿದನು. ಶ್ರಮಣನು ಬಹುಭೀರು. ನಾಯಕನು ಒಮ್ಮೆ ತನ್ನ ಅಪ್ರತಿಹತಾಧಿಕಾರದ ರಭಸದಲ್ಲಿ ಗರ್ಜಿಸುತ್ತಲೂ ಅವನು ನಡುಗಿಹೋದನು. ನಾಲಗೆಯ ದ್ರವವೆಲ್ಲ ಒಣಗಿ ಹೋಗಿದೆ. ಗಂಟಲಿನಿಂದ ಮಾತೇ ಹೊರಬೀಳದು. ಏನೋ ಹೇಳಬೇಕೆಂದು ಕೈ ಬಾಯಿ ಸನ್ನೆಮಾಡುವುದರಲ್ಲಿ ಕೊನೆಯಾಗಿದೆ.

ನಾಯಕನಿಗೆ ಆ ಶ್ರಮಣನ ಭೀರುತ್ವವನ್ನು ಕಂಡು ಕನಿಕರವಾಯಿತು. ಹಾಗೆಯೇ 'ಇವನಾರು ? ಇವನು ಚಿನ್ನದ ನಾಣ್ಯವನ್ನು ತಂದು ಕಟ್ಟುವುದರ ಕಾರಣವೇನು? ತಿಳಿಯಬೇಕು' ಎಂಬ ಕುತೂಹಲವೂ ಹುಟ್ಟಿತು. ಅವನನ್ನು ಒಳ್ಳೆಯ ಮಾತುಗಳಿಂದ ಉಪಚರಿಸಿ ಅವನನ್ನು ಕುಳಿತುಕೊಳ್ಳಹೇಳಿ ನಂಬಿಸಿ ವಿಚಾರಿಸಿದನು. ಬಹಳ ಹೊತ್ತಾದ ಮೇಲೆ ಶ್ರಮಣನಿಗೂ ನಾಲಗೆಯು ಅಂಗುಳನ್ನು ಬಿಟ್ಟು ಇಳಿದು ಅಲ್ಲಾಡಲಾರಂಭಿಸಿತು. ಪ್ರಶ್ನೋತ್ತರಗಳು ಆರಂಭಿಸಿದುವು. ನಾಯಕನ ಅಭಿಪ್ರಾಯದಲ್ಲಿ ಶ್ರಮಣನು ಬಹು ಸಾಧು. ಆ ದಿನದ ಮಾತುಕಥೆಗಳಲ್ಲಿ ಆ ಅಭಿಪ್ರಾಯವನ್ನು ಬದಲಿಸುವಂತಹ ಸಂದರ್ಭಗಳೇನೂ ಬರಲಿಲ್ಲ.

'ಈ ಚಿನ್ನದ ನಾಣ್ಯವನ್ನು ಇಲ್ಲಿಗೆ ತಂದು ಏಕೆ ಕಟ್ಟಿದಿರಿ ?'

'ಕಾಣಿಕೆ'

'ಯಾರಿಗೆ ?'

'ವಾಸಂತಿಯಮ್ಮನಿಗೆ'

'ವಾಸಂತಿಯ ಗುಡಿ ಎಲ್ಲೆಲ್ಲೂ ಇಲ್ಲವಲ್ಲ ?'

'ಅದಕ್ಕೇ ಇಲ್ಲಿ ಬಂದೆ'

'ಹಾಗೆಂದರೇನು ? ವಿಸ್ತಾರವಾಗಿ ಹೇಳಿರಯ್ಯ'

ಶ್ರಮಣನು ಪೆಚ್ಚುಮುಖಹಾಕಿಕೊಂಡು ಇನ್ನೇನು ಅಳುವ ಭಾವದಲ್ಲಿ ಸುತ್ತಲಿದ್ದವರ ಮುಖವನ್ನು ನೋಡಿದನು. ನಾಯಕನ ಕನಿಕರವು ಕರುಣವಾಗಿ ಇನ್ನೂ ಮೃದುವಾಗಿ ಮಾತನಾಡಿದನು: 'ಏನೂ ದಿಗಿಲಿಲ್ಲ. ನಿಮ್ಮನ್ನು ಯಾರೂ ಏನೂ ಮಾಡುವುದಿಲ್ಲ. ಧೈರ್ಯವಾಗಿ ಹೇಳಿ'

ಶ್ರಮಣನು ಮಾತುಮಾತಿಗೆ ನೀರು ನುಂಗುತ್ತ, ತನ್ನವರು ಯಾರೂ ಇಲ್ಲದ ಎಡೆಯಲ್ಲಿ ಯತ್ನವಿಲ್ಲದೆ ಇರಲು, ಇತರರು ಬಹುವಾಗಿ ನಂಬಿಸಿದ ಮೇಲೆ ಮಾತನಾಡುವ ಮಗುವಿನಂತೆ, ಹೇಳಿದನು: 'ನನಗೆ ಕನಸಾಯಿತು. ನಿತ್ಯವೂ ಒಂದೊಂದು ಹೊನ್ನು ತೆಗೆದುಕೊಂಡು ಹೋಗಿ ಆನೆಯ ಬೀದಿಯಲ್ಲಿರುವ ಬಿದಿರು ಮೆಳೆಗೆ ಕಟ್ಟು ಎಂದು ವಾಸಂತಿಯಮ್ಮನು ಹೇಳಿದಳು'

'ಅದರಿಂದ ಫಲವೇನಂತೆ?'

ಶ್ರಮಣನು ಇನ್ನೂ ನಿಧಾನಿಸಿ ಹಲವು ಸಲ ಅವರಿವರ ಮುಖವನ್ನು ನೋಡಿ ಹೇಳಿದನು: 'ಹಣ ಸಿಕ್ಕುತ್ತದೆಯಂತೆ!'

ನಾಯಕನ ಕಿವಿ ನೆಟ್ಟಗಾಯಿತು: ಕೇಳಿದನು: 'ಹಾಗೆಂದರೆ?'

'ಅದು ವಾಸಂತಿಯಮ್ಮನಪ್ಪಣೆ'

'ಹೀಗೆ ಎಷ್ಟುದಿನ ಕಟ್ಟುವಿರಿ?'

'ಅದನ್ನು ಯಾರೂ ಬಿಚ್ಚಿಕೊಳ್ಳದೆ ಇವತ್ತು ಕಟ್ಟಿದುದು ನಾಳೆಯ ವರೆಗೂ ಇರಬೇಕು. ಅದುವರೆಗೂ'

ನಾಯಕನಿಗೆ ತಡೆಯಲಾರದಷ್ಟು ನಗು ಬಂದಿತು: ಆದರೂ ಕೊಂಚ ನಕ್ಕು ಹೇಳಿದನು: 'ಹುಚ್ಚಪ್ಪ! ಹೀಗೂ ಉಂಟೆ? ನೀವು ಕಟ್ಟಿರುವುದು ಹೊನ್ನು ಎಂದು ತಿಳಿದ ಮೇಲೆ ಅಲ್ಲಿ ಅದು ಮರುದಿನದವರೆಗೂ ಇರುವುದೆ?'

'ಅದೇನೋ? ಹಾಗೆಯೇ ಅಪ್ಪಣೆಯಾಗಿರುವುದು'

'ಆಯಿತು ಹಾಗೆಂದು ದಿನಕ್ಕೆಷ್ಟು ಕಟ್ಟುವಿರಿ?'

'ಎಷ್ಟು ಬಿಚ್ಚಿಕೊಂಡರೆ ಅಷ್ಟು'

'ಇಲ್ಲಿ ಆರುನೂರು ಜನರು ಇದ್ದಾರೆ. ಅವರೆಲ್ಲ ಬಿಚ್ಚಿಕೊಳ್ಳುವು ವುದಾದರೆ?'

'ಇಲ್ಲ, ಒಂದು ಅಷ್ಟೋತ್ತರಕ್ಕಿಂತ ಹೆಚ್ಚಾಗಿ ಕಟ್ಟುವುದಿಲ್ಲ'

ಆ ಮಾತನ್ನು ಕೇಳಿ ಅನೇಕರು ನಿರಾಶರಾದರು.

'ಹಾಗಾದರೆ ಇಲ್ಲಿ ನಿಮ್ಮಿಂದ ಬಹಳ ಅನರ್ಥ ನಡೆಯಬಹುದು'

ಶ್ರಮಣನು 'ಅನರ್ಥ' ವೆನ್ನುತ್ತಲೇ ಕುಗ್ಗಿಹೋಗಿ 'ಇಲ್ಲ ಮಹಾ ಸ್ವಾಮಿ! ಅಮ್ಮನಪ್ಪಣೆ! ಇಲ್ಲದಿದ್ದರೆ ನಾನು ಇತ್ತ ಕಡೆ ಬರುತ್ತಲೇ ಇರಲಿಲ್ಲ' ಎಂದನು.

ನಾಯಕನಿಗೆ ಬಹು ಪೇಚಾಟಕ್ಕಿಟ್ಟುಕೊಂಡಿತು: 'ಬೇಡವೆಂದಾನೆ, ಪಾಳೆಯವೆಲ್ಲ ಶಾಪಹಾಕುವುದು. ದಿನಕ್ಕೆ ಯಾರಿಗಾದರೂ ಸಿಕ್ಕಲಿ ಅಂತೂ ನೂರೆಂಟು ಹೊನ್ನು ಸಿಕ್ಕುವುದು. ಅದಕ್ಕೆ ಕಲ್ಲು ಹಾಕಿದೆನೆಂದು ಅಪ ವಾದವು ಬರುವುದು. ಕಟ್ಟಿಕೊಳ್ಳಲಿ ಎಂದರೆ ದಿನ ಬೆಳಗೆದ್ದು ಗದ್ದಲದ

ಗೊಂದಲಕ್ಕೆ ತಾನಾಗಿ ಅಕ್ಷತೆಯನ್ನು ಕೊಟ್ಟಂತಾಗುವುದು. ಸಾಲದೆ ಇನ್ನೇನು ಅನರ್ಥವಾಗುವುದೋ ?'

ಇನ್ನೊಂದು ಸಂಶಯವು ತಟ್ಟನೆ ತೋರಿ ಕೇಳಿದನು: 'ನಿಮಗೆ ಅಷ್ಟು ಹೊನ್ನು ಎಲ್ಲಿಂದ ಬರುತ್ತದೆ ?'

ಶ್ರಮಣನು ಸಂಶಯಕ್ಕೆ ಅವಕಾಶವೇ ಇಲ್ಲದಂತೆ ಮೊದಲಿನ ತಡೆ ತಡೆದು ಆಡುವ ನುಡಿಯಿಂದಲೇ ಹೇಳಿದನು: 'ನಾನು ಮಧ್ಯಾಹ್ನವೆಲ್ಲ ಪೂಜೆಮಾಡಿ ಸಂಜೆಯ ಹೊತ್ತಿಗೆ ಊಟಮಾಡಿ ಮಲಗಿಕೊಳ್ಳುತ್ತೇನೆ. ಆಗ ಕನಸಿನಲ್ಲಿ ಅಮ್ಮನು ಬಂದು ಇಂಥಾ ಕಡೆಗೆ ಹೋಗು ಎಂದು ಹೇಳುತ್ತಾಳೆ. ಅಲ್ಲಿಗೆ ಹೋಗಿ ಬಗೆದು ನೋಡಿದರೆ ಅಲ್ಲಿ ಹೊನ್ನು ಸಿಕ್ಕುತ್ತದೆ. ಅದನ್ನು ತಂದು ಬೆಳಿಗ್ಗೆ ಬಿದಿರು ಪೂಜೆಮಾಡಿ ಇಲ್ಲಿ ಕಟ್ಟುತ್ತೇನೆ'

'ಇದೂ ಇವತ್ತೇ ಸಿಕ್ಕಿದುದೋ ?'

'ಹೌದು'

ನಾಯಕನು ನಾಣ್ಯವನ್ನು ತಿರುಗಿಸಿ ನೋಡಿದನು. ಸಂದೇಹಕ್ಕೆ ಅವಕಾಶವಿಲ್ಲ ಅದು ಶಾತವಾಹನರ ಕಾಲದ ನಾಣ್ಯ. ಹಾರಿಸಿ ನೋಡಿದನು: ಚಿನ್ನದ ಸಣ್ಣ ದನಿ ಸರಿಯಾಗಿದ್ದಿತು.

ನಾಯಕನಿಗೂ ಆಶೆಯಾಯಿತು: 'ನೂರು ಜನರು ಒಂದುದಿನ ಕಾಣಿಕೆಯನ್ನು ಬಿಚ್ಚಿಕೊಳ್ಳುವುದು, ಅವರು ತಲೆಗೊಂದರಂತೆ ಹಂಚಿಕೊಂಡು ಉಳಿದುದನ್ನು ತನಗೆ ಕೊಡುವುದು. ಅಲ್ಲಿಗೆ ತಿಂಗಳಿಗೆ ತನಗೆ ಇನ್ನೂರ ನಲವತ್ತು. ವೀಧಿಯವರಿಗೆಲ್ಲ ಐದ್ವೈದು ಹೊನ್ನು ಬರುವುದು. ಬೇಕಾದರೆ ತಿಂಗಳಿನ ಕೊನೆಯಲ್ಲಿ ಐವತ್ತು ಹೊನ್ನು ಮುಟ್ಟಿಸಿ ಒಂದೂಟ ಹಾಕಿಸುವುದು. ಅಥವಾ ಇನ್ನೇನಾದರೂ ಮಾಡುವುದು' ಎನ್ನಿಸಿತು. ಇನ್ನೂ ಏನೇನೋ ಪ್ರಶ್ನೆಗಳನ್ನು ಹಾಕಿ ಶ್ರಮಣನಿಂದ ಯಾವ ಅಪಾಯವೂ ಇಲ್ಲವೆಂದು ನಿರ್ಧರಿಸಿಕೊಂಡು ಅಲ್ಲಿಗೆ ಬಂದು ಹೋಗುವುದಕ್ಕೆ ಅವನಿಗೆ ಅಪ್ಪಣೆಯನ್ನಿತ್ತನು.

———:———

## ಇಪ್ಪತ್ತ್ರೈದನೆಯ ಪ್ರಕರಣ

ಎರಡನೆಯ ಝಾವದ ಕೊನೆಯಲ್ಲಿ ನೀಲಕಂಠಗುಪ್ತನ ಕೋಶಾಧಿಕಾರಿಯು ತನ್ನ ಕಾರ್ಯಕಲಾಪಗಳನ್ನೆಲ್ಲ ಮುಗಿಸಿಕೊಂಡು ಕುಳಿತಿರುವ ವೇಳೆಯಲ್ಲಿ ಇಬ್ಬರು ಬ್ರಾಹ್ಮಣರು ಬಂದು ಆತನನ್ನು ಕಾಣಿಸಿಕೊಂಡರು. ಪದ್ಧತಿಯಂತೆ ಅವರಿಗೆ ಯಥಾ ಯೋಗ್ಯವಾಗಿ ಉಪಚಾರಾದಿಗಳನ್ನು ಆಚರಿಸಿ ಆತನೂ ಅವರನ್ನು ಕುಳ್ಳಿರಿಸಿಕೊಂಡು ಬಂದುದು ಏನು ಎಂದು ಗೌರವವಾಗಿ ವಿಚಾರಿಸಿದನು. ಅವರೂ ವಿದ್ವಾಂಸರಿಗೆ ವಿಹಿತವಾದ ವಿನಯದಿಂದ ಬಿನ್ನವಿಸಿದರು: 'ಅವರು ಕಾಂಚೀಪುರದ ಘಟಿಕಸ್ಥಾನದಲ್ಲಿ ದ್ವಾದಶ ವರ್ಷಗಳು ಅಧ್ಯಯನಮಾಡಿ ಎರಡು ವೇದಗಳನ್ನು ಸಾಂಗವಾಗಿ ಸಾಧಿಸಿದವರು. ಒಬ್ಬರು ಪುರಾಣಶ್ರವಣಮಾಡಿಸುವುದರಲ್ಲಿ ಗಟ್ಟಿಗರು. ಇನ್ನೊಬ್ಬರು ಶಾಸ್ತ್ರಾದಿಗಳಲ್ಲಿ ನಿಸ್ಸೀಮರು. ಕಾಂಚಿಯ ಆಸ್ಥಾನ ವಿದ್ವಾಂಸರು. ಅವರು ಈಗ ಗೋಕರ್ಣದ ಕಡೆಗೆ ಯಾತ್ರೆಗೆ ಹೊರಟಿರುವರು. ಈ ಮಾರ್ಗವಾಗಿ ಬನವಾಸಿಗೆ ಬಂದು ಅಲ್ಲಿ ಈ ಶ್ರೀಮಂತರು ವಿದ್ಯಾಪಕ್ಷಪಾತಿಗಳೆಂದು ಕೇಳಿ ಇಲ್ಲಿಗೆ ಬಂದರು. ಗುಪ್ತರ ದರ್ಶನಮಾಡಿ ಯಥೋಚಿತ ಸಂಭಾಷಣಾದಿಗಳಿಂದ ಗೌರವಿತರಾಗಬೇಕೆಂಬ ಅಪೇಕ್ಷೆಯುಂಟು. ಎಲ್ಲದಕ್ಕಿಂತಲೂ ಹೆಚ್ಚಾಗಿ ಶ್ರೀಮಂತರಂತಹ ವೇದಶಾಸ್ತ್ರ ಪಾರಂಗತರಲ್ಲಿ ಗುರ್ವನುಗ್ರಹದಿಂದ ಲಭಿಸಿದ ವೈದುಷ್ಯವನ್ನು ತೋರಿಸಬೇಕು ಎಂಬಾಶೆ'

ಕೋಶಾಧಿಕಾರಿ ವಿನಯಗುಪ್ತನು ಸಾವಧಾನವಾಗಿ ಕೇಳಿದನು. ಅವರು ಆಡುವ ಮಾತುಮಾತಿನಲ್ಲಿಯೂ ಗುಪ್ತನನ್ನು ತಾವು ಕಾಣಬೇಕೆಂಬ ಕುತೂಹಲವು ಬಲವಾಗಿರುವಹಾಗೆ ಕಂಡು ಅವನ ಮನಸ್ಸಿನಲ್ಲಿ ಸಂಶಯವು ಹುಟ್ಟಿತು: 'ಬಂದಿರುವುದು ಕಂಚಿಯಿಂದ, ಹನ್ನೆರಡು ವರ್ಷ ಸಾಂಗವಾಗಿ ಅಧ್ಯಯನ ಮಾಡಿದವರು, ಆಸ್ಥಾನ ವಿದ್ವಾಂಸರು, ಗೋಕರ್ಣದ ಯಾತ್ರೆಗೆ ಹೊರಟು ಬನವಾಸಿಯ ಮುಖಾಂತರ ಇಲ್ಲಿಗೆ ಬಂದರು. ಏನು ಕೃತ್ರಿಮವಿದ್ದೀತು? ಏನೂ ಇಲ್ಲದಿರುವುದಾದರೆ ಇಷ್ಟೇಕೆ ಕುತೂಹಲ?'

ವಿನಯಗುಪ್ತನೂ ವಿನಯದಿಂದ ಸಂಶಯದ ಸೋಂಕಿಲ್ಲದ ಗೌರವದ ಮಾತುಗಳಿಂದ ಅವರನ್ನು ಮತ್ತೆ ವಿಚಾರಿಸಿದನು.

'ತಾವು ಬನವಾಸಿಯಲ್ಲಿ ಎಲ್ಲಿ ಇಳಿದಿದ್ದಿರಿ?'

'ರಾಜವಸತಿಯ ಪಕ್ಕದಲ್ಲಿರುವ ಮಹಾರಾಜರ ಛತ್ರದಲ್ಲಿ'

'ಎಂದರೆ ಆ ಹೊಸ ಛತ್ರದಲ್ಲಿ?'

'ಹೌದು'

'ಅದು ಬೌದ್ಧವಿಹಾರ. ಬ್ರಾಹ್ಮಣರು ಇಳಿಯುವುದಕ್ಕೆ ಅಷ್ಟು ಪರಿಷ್ಕಾರವಾದ ಸ್ಥಳವಲ್ಲ'

'ನಿಜ. ಆದರೇನು ಮಾಡುವುದು? 'ರಾಜಾಜ್ಞಾ ಬಲವತ್ತರಾ''

'ಹಾಗಾದರೆ, ತಾವು ಇಂತಹ ಕಡೆಯೇ ಇಳಿಯಬೇಕೆಂದು ಅಲ್ಲಿಯೇ ನಿರ್ಧರವಾಗಿದ್ದಿತೇನು?'

'ಇಲ್ಲ. ಅಲ್ಲಿಂದ ಬಂದು ಇಲ್ಲಿ ಸಚಿವ ನಂದಿವರ್ಮರನ್ನು ಕಾಣಿಸಿಕೊಂಡೆವು. ಅವರು ಅಲ್ಲಿಯೇ ಇಳಿಯಬೇಕೆಂದು ಬಲವಂತ ಮಾಡಿದರು. ಆದರಿಂದ ಯತ್ನವಿಲ್ಲದೆ ಇಳಿಯಬೇಕಾಗಿ ಬಂದಿತು'

ವಿನಯಗುಪ್ತನು ಮನಸ್ಸಿನಲ್ಲಿಯೇ ಗುಣಕಾರ ಹಾಕಿದನು: 'ನಂದಿವರ್ಮನನ್ನು ಕಾಣಿಸಿಕೊಂಡೆವು, ಬಲವಂತ, ಯತ್ನವಿಲ್ಲ' ತನ್ನ ಅಭಿಪ್ರಾಯವನ್ನು ತಾನೇ ಇಟ್ಟುಕೊಂಡು ಮತ್ತೆ ಕೇಳಿದನು: 'ಹಾಗಾದರೆ ಶ್ರೀಮಂತರ ವಿಚಾರವೂ ಸಚಿವರಿಂದಲೇ ತಿಳಿದಿರಬೇಕು?'

ವಿದ್ವಾಂಸರು ಪ್ರಶ್ನೆಯ ಮರ್ಮವನ್ನು ಅರಿತರು. ತಾವಾಗಿ ಗುಟ್ಟು ಬಿಟ್ಟುಕೊಟ್ಟಂತಾಯಿತು ಎಂದು ತಿಳಿಯಿತು. ಆದರೂ ಒಂದು ರೆಪ್ಪೆ ಹೊಡೆಯುವಷ್ಟು ತಡೆದು, 'ಇಲ್ಲ. ನಮಗೆ ರಾಜಧಾನಿಯಲ್ಲಿಯೇ ತಿಳಿದಿದ್ದಿತು' ಎಂದರು.

ನಿಮೇಷಕಾಲ ಅನ್ಯಚಿತ್ತರಾಗಿದ್ದು ಇಲ್ಲವೆಂದ ವಿದ್ವಾಂಸರ ಮುಖವನ್ನು ಕಣ್ಣಿಟ್ಟು ನೋಡುತ್ತಿದ್ದ ಗುಪ್ತನು ಅವರ ಮನಸ್ಸಿನ ಭಾವ ಭಾವಗಳನ್ನೆಲ್ಲ ಕರತಲಾಮಲಕವಾಗಿ ಕಂಡುಕೊಂಡನು. 'ರಾಜಧಾನಿಯವರೆಗೂ ವ್ಯಾಪಿಸಿರುವ ತಮ್ಮ ಕೀರ್ತಿಯನ್ನು ಕೇಳಿ ಶ್ರೀಮಂತರು ನಿಜವಾಗಿಯೂ ತೃಪ್ತರಾಗುವರು. ಆಗಲಿ ನಾನು ಸನ್ನಿಧಾನದಲ್ಲಿ ಅರಿಕೆ

ಮಾಡಿ ತಮ್ಮನ್ನು ಇವೊತ್ತೇ ಅಲ್ಲಿಗೆ ಕಳುಹಿಸಿಕೊಡುವೆನು. ತಾವು ಇನ್ನು ಮಾಧ್ಯಾಹ್ನಿಕಕ್ಕೆ ಏಳೋಣವಾಗಲಿ. ರಥವು ಸಿದ್ಧವಾಗಿದೆ. ಹೊಳೆಗೆ ಹೋಗಿ ಬರಬಹುದು' ಎಂದು ಅವರನ್ನು ಬೀಳ್ಕೊಟ್ಟು ತಾನು ಶ್ರೀಮಂತರ ಬಳಿಗೆ ಹೋದನು.

ನೀಲಕಂಠಗುಪ್ತನು ಕೋಶಾಧಿಕಾರಿಯ ಮುಖವನ್ನು ಕಾಣುತ್ತಲೇ ಮಾಡುತ್ತಿದ್ದ ಕಾರ್ಯವನ್ನು ಬಿಟ್ಟು ಅವನಿಗೆ ಅಭಿಮುಖನಾಗಿ, 'ದಯ ಮಾಡಿಸಬೇಕು' ಎಂದು ಎಂದಿಗಿಂತ ಹತ್ತಿರ ಬಲವಂತವಾಗಿ ಕುಳ್ಳಿರಿಸಿ ಕೊಂಡು, 'ಏನು ? ಏನೋ ವಿಶೇಷವಿರುವಂತಿದೆ' ಎಂದನು.

ವಿನಯಗುಪ್ತನು ನಸುನಗುತ್ತ ಹೇಳಿದನು: 'ಶ್ರೀಮಂತರ ಕೀರ್ತಿಯು ರಾಜಧಾನಿಯವರೆಗೂ...............'

ನೀಲಕಂಠಗುಪ್ತನಿಗೆ ರಾಜಧಾನಿಯೆಂಬ ಮಾತು ಕಳವಳವನ್ನುಂಟು ಮಾಡಿತು. ಕ್ಷಣಿಕವಾದರೂ ಮಾರ್ಮಿಕವಾಗಿ ತೀವ್ರವಾದ ವೇದನೆಯ ಅಲೆಯೊಂದು ಮನಸ್ಸಿನಲ್ಲಿ ಹುಟ್ಟಿ ಮುಖದಮೇಲೆ ಹೊರಳಿತು. ಭಂಡಾ ರಿಯು ಅದನ್ನು ಕಂಡು ತನ್ನ ನುಡಿಯನ್ನು ತಡೆದನು. ನೀಲಕಂಠನು ತಟ್ಟನೆ ಮುಖವನ್ನು ಒರೆಸಿಕೊಂಡು, 'ರಾಜಧಾನಿಯವರೆಗೂ ಏನು ?' ಎಂದನು.

ಭಂಡಾರಿಗೆ ಆ ವ್ಯತ್ಯಾಸವು ಅರ್ಥವಾಗಲಿಲ್ಲ. ಅದನ್ನು ಹಾಗಿಟ್ಟು ಕೊಂಡು ಹೇಳಿದನು: 'ಶ್ರೀಮಂತರ ಕೀರ್ತಿಯು ರಾಜಧಾನಿಯವರೆಗೂ ವ್ಯಾಪಿಸಿ ಅಲ್ಲಿನ ವಿದ್ವಾಂಸರಿಗೂ ದರ್ಶನಲೋಭವನ್ನು ಹುಟ್ಟಿಸಿದೆ. ಆಸ್ಥಾನ ವಿದ್ವಾಂಸರು ಅಲ್ಲಿಂದ ಬನವಾಸಿಗೆ ಬಂದು ನಂದಿವರ್ಮನ ಬಲವಂತದಿಂದ ವಿಹಾರದಲ್ಲಿದ್ದು ಅವನ ಸತ್ಕಾರವನ್ನು ಗ್ರಹಿಸಿ ಅವನಿಂದ ತಮ್ಮ ಕೀರ್ತಿ ಯನ್ನು ಕೇಳಿ ದರ್ಶನಾಕಾಂಕ್ಷೆಯಿಂದ ಇಲ್ಲಿಗೆ ಬಂದಿದ್ದಾರೆ. ಗೋಕರ್ಣಕ್ಕೆ ಯಾತ್ರೆ ಹೊರಟಿರುವರಂತೆ!'

ನೀಲಕಂಠಗುಪ್ತನಿಗೆ ಅರ್ಥವಾಯಿತು. ತಲೆದೂಗಿ 'ನಂದಿವರ್ಮನು ಕುಶಲ. ದೈವಾನುಗ್ರಹದ ಕವಚವಿಲ್ಲದೆ ಇದ್ದಿದ್ದರೆ ಈ ವೇಳೆಗೆ ಅವನು

ನಮ್ಮ ರಹಸ್ಯವನ್ನು ಭೇದಿಸಿ ಎಷ್ಟೋ ದಿನವಾಗುತ್ತಿದ್ದಿತು. ಉಂಗುರದ ಪರೀಕ್ಷೆಯಾಯಿತು. ದೇವಾಲಯದ ಪರೀಕ್ಷೆಯಾಯಿತು. ಖನಿಗಳನ್ನು ಹುಡುಕಿಯಾಯಿತು. ಈಗ ಸಹಾಧ್ಯಾಯಿಗಳನ್ನು ಕರೆಯಿಸಿ ಅವರಿಂದ ಗುರುತು ಹಿಡಿಯಿಸುವ ಪ್ರಯತ್ನ ! ಭಲೆ! ಭಲೆ! ಆಯಿತು. ಅವರ ಹೆಸರೇನಂತೆ ?'

'ಕೇಶವಭಟ್ಟ, ಶರ್ವಭಟ್ಟ'

'ಕೇಶವಭಟ್ಟನು ಆಶಾಪರ. ತನ್ನ ಆಶೆಯ ತೃಪ್ತಿಗೋಸ್ಕರ ಎಲ್ಲವನ್ನೂ ಬಲಿಕೊಡುವುದು ಅವನ ಸ್ವಭಾವ. ಶರ್ವಭಟ್ಟನು ಚಪಲ. ಅವನು ಸಾಂಗವಾಗಿ ಅಧ್ಯಯನಮಾಡಿದ್ದಾನೆ. ಶಾಸ್ತ್ರಗಳನ್ನು ಬಲ್ಲನೆಂದರೆ ಸುಳ್ಳು. ಈ ದೌತ್ಯಕ್ಕೆ ಕೇಶವಭಟ್ಟನು ಸರಿಯಾದ ಮನುಷ್ಯ. ಶರ್ವಭಟ್ಟನು ಗುಟ್ಟನ್ನೇ ಕಾಪಾಡಲಾರದವನು. ಅವನನ್ನು ಈ ಕೆಲಸಕ್ಕೆ ಕಳುಹಿಸಬಾರದು. ಆದರೆ ಆಗ ನನ್ನ ಹತ್ತಿರ ಬಹಳ ಸೇರುತ್ತಿದ್ದವನು ಎಂದರೆ ಅವನೇ! ಆ ಗರುಡಿಯವರು ನನಗೆ ಗುಟ್ಟಾಗಿ ಕೊಡುತ್ತಿದ್ದ ತುಪ್ಪದ ಅಡಿಗೆಗಳ ರುಚಿಗಾಗಿ ನನ್ನ ಹತ್ತಿರ ಬಹಳ ಸೇರುತ್ತಿದ್ದ. ಇವನೂ ಅದೇ ಆಶೆಗಾಗಿಯೇ ಬರುತ್ತಿದ್ದವನು. ಆದರ ರುಚಿಗೆ ಸೋತು, 'ಜಟ್ಟಿಯ ಮನೆಗೆ ನನ್ನನ್ನು ಊಟಕ್ಕೆ ಕರೆಯಬಾರದೇ ?' ಎಂದು ಮರುಗುತ್ತಿದ್ದವನು ಈ ಕೇಶವಭಟ್ಟ. ಆಯಿತು. ಅದು ಹಿಂದಿನಂಕ. ಮುಂದಿನ ಮಾತೇನು ? ತಮ್ಮ ಅಭಿಪ್ರಾಯ ಹೇಗೆ ?'

'ಪದ್ಧತಿಯಂತೆ ಜಟ್ಟಿಯವರು ಶ್ರೀಮಂತರಾಗುವುದು ಸರಿಯೆಂದು ತೋರುತ್ತದೆ'

'ತಮ್ಮಭಿಪ್ರಾಯವೇ ನನ್ನ ಅಭಿಪ್ರಾಯ. ನಾನು ಯವನಿಕೆಯ ಹಿಂದೆ ಸೂತ್ರಧಾರನಾಗಿದ್ದು ಈ ನಾಟಕವನ್ನು ಆಡಿಸುತ್ತೇನೆ. ಇರಲಿ, ನಂದಿವರ್ಮನ ಈ ನಡೆಯಿಂದ ನಾವಿನ್ನೊಂದನ್ನು ಸಾಧಿಸುವ. ಆದರೆ, ಭಂಡಾರಿಗಳೇ ! ಅವರಿಬ್ಬರಿಗೂ ಅಮೃತಾನ್ನ ಭೋಜನವಾಗಬೇಕು. ಹಾಗೆ ನೋಡಿಕೊಳ್ಳಿ. ಭೋಜನದಿಂದ ತೃಪ್ತನಾದ ಬ್ರಾಹ್ಮಣನು ಹಲ್ಲು ಕಳೆದುಕೊಂಡ ಹಾವಿನಹಾಗೆ ! ಅಲ್ಲವೆ ?'

ಭಂಡಾರಿಯು ನಗುತ್ತ, 'ನಿಜ. ಆಶಾಪರನಾದ ಬ್ರಾಹ್ಮಣನೂ ಅಂಜುಬುರುಕನಾದ ಕ್ಷತ್ರಿಯನೂ ಇಬ್ಬರೂ ಒಂದೆ; ಇದ್ದರೂ ಇಲ್ಲದಿದ್ದಹಾಗೆಯೇ! ಅಪ್ಪಣೆಯಾದರೆ ತಿರುಗಿ ಕಾಣಿಸಿಕೊಳ್ಳುವೆನು' ಎಂದು ಬೀಳ್ಕೊಂಡು ಹೊರಟನು.

ಶ್ರೀಮಂತನೂ ಹೋಗುತ್ತಿದ್ದ ಭಂಡಾರಿಯನ್ನು ಕರೆದು ಕೇಳಿದನು: 'ಗುಹೆಯಿಂದ ಎಲ್ಲವನ್ನೂ ಸಾಗಿಸಿ ಆಯಿತೊ?'

'ಇದುವರೆಗೆ ಎಂಟು ನಡೆಯಾದುವು. ಇನ್ನೆರಡು ನಡೆಗಳಾದರೆ ಎಲ್ಲವೂ ಬಂದಂತಾಗುವುದು'

'ಒಟ್ಟು ಎಷ್ಟು?'

'ನಾಣ್ಯವಾಗಿರುವುದು ಒಂದು ಕೋಟಿ'

'ಸರಿ. ಸಮುದ್ರ ಶೆಟ್ಟಿಯು ಕೇಳಿದ ಹತ್ತುಲಕ್ಷವನ್ನು ಮುಂಗಡವಾಗಿ ಕೊಡಿ. ಈ ಸುದ್ದಿಯು ಬನವಾಸಿಯಲ್ಲಿರುವ ಪ್ರತಿಯೊಬ್ಬ ಗಣ್ಯನಾದ ವರ್ತಕನಿಗೂ ತಿಳಿಯಲಿ'

'ಅಪ್ಪಣೆ. ನ್ಯಾಯ. ಸಮುದ್ರಶೆಟ್ಟಿಗೆ ಸಾಲಕೊಡುವ ಶ್ರೀಮಂತನೇ ಸಮ್ರಾಜನಿಗೆ ಸರಿದೂಗುವವನು. ಇದೊಂದು ಜೇಟಿ. ಮದ್ದು ಗುಂಡಿಗೆ ಬದಲಾಗಿ ಬುದ್ಧಿ ಹಣಗಳು ಅಷ್ಟೇ!'

ಭಂಡಾರಿಯು ಕೈಮುಗಿದು ಬೀಳ್ಕೊಂಡನು.

---

## ಇಪ್ಪತ್ತಾರನೆಯ ಪ್ರಕರಣ.

ಮಧ್ಯಾಹ್ನದ ಇಳುಹೊತ್ತಿನಲ್ಲಿ ಭಂಡಾರಿಯ ನಿರೂಪದೊಡನೆ ಕಟ್ಟೆಗೆಯವನು ವಿದ್ವಾಂಸರನ್ನು ಶ್ರೀಮಂತನ ಸನ್ನಿಧಿಗೆ ಕರೆದುಕೊಂಡು ಬಂದನು.

ಶ್ರೀಮಂತನ ಆಸ್ಥಾನವೂ ಆತನ ಹಾಗೆಯೇ ಆಡಂಬರವಿಲ್ಲದ ವೈಭವದಿಂದ ಕೂಡಿದೆ. ಮಹಾಮಾಂಡಲಿಕೇಶ್ವರನಿಗೆ ಕಾಣಿಕೆಯನ್ನು ಒಪ್ಪಿಸಿದ ಪ್ರತಿಫಲವಾಗಿ ಲಭಿಸಿದ ರತ್ನಶೀರ್ಷಿಕೆಯನ್ನು ಧರಿಸಿ ಶ್ರೀಮಂತನು ಭವ್ಯ

ವಾದ ಉನ್ನತಾಸನದಲ್ಲಿ ಕುಳಿತಿದ್ದಾನೆ. ಮಿತಪರಿವಾರಿಯಾದ ಆತನ ಬಲ ಮಗ್ಗುಲಲ್ಲಿ ವಿದ್ವಾಂಸರು ಕುಳಿತಿದ್ದಾರೆ. ಈ ದಿನದ ವಿಶೇಷವೆಂದರೆ ವಿದ್ವಾಂಸರಿಗೆ ಸಭಾವಿಸರ್ಜನದ ಕಾಲದಲ್ಲಿ ಆಗಬೇಕಾದ ಮರ್ಯಾದೆಯೆಲ್ಲ ಮೊದಲೇ ಆಗಿದೆ.

ಗೇಣಗಲದ ಜರಿಯಂಚಿನ ಜೋಡಿಶಾಲನ್ನು ಹೊದೆದುಕೊಂಡು ಉಡಿಯ ತುಂಬ ಹೊನ್ನುಗಳನ್ನು ತುಂಬಿಕೊಂಡು ಮುಖಗಳನ್ನು ತಟ್ಟೆ ಯಗಲ ಮಾಡಿಕೊಂಡು ವಿದ್ವಾಂಸರು ಕುಳಿತಿದ್ದಾರೆ. ಹೊಟ್ಟೆ ಬಿರಿವಂತೆ ಊಟ, ಮೈ ಜಗ್ಗುವಂತಹ ಭಾರದ ಶಾಲು, ಕೈ ಜಗ್ಗುವಷ್ಟು ಹೊನ್ನು ಸಿಕ್ಕಿ ಬ್ರಾಹ್ಮಣರು ಮೈಮರೆತಿದ್ದಾರೆ. ಶ್ರೀಮಂತನು ಅವರ ವೈದುಷ್ಯವನ್ನೂ ಸಚ್ಚಾರಿತ್ರವನ್ನೂ ಹೊಗಳುತ್ತಿದ್ದಾನೆ. ಇವರು ಆತನ ಆಢ್ಯತೆಯನ್ನೂ ಆಸ್ತಿಕ್ಯವನ್ನೂ ಹೊಗಳುತ್ತಿದ್ದಾರೆ. ಹೀಗೆ ಪರಸ್ಪರ ಸ್ತೋತ್ರ ಸಮಾರಂಭವು ಅಷ್ಟು ಹೊತ್ತು ನಡೆಯುವುದರೊಳಗಾಗಿ ಸಂಜೆಯಾಗುತ್ತ ಬಂದಿತು. ಆಗ ಕೊನೆಯ ಮಾತಾಗಿ ಶ್ರೀಮಂತನು ಹೇಳಿದನು: 'ತಾವು ಇಷ್ಟು ದೂರ ಬಂದು ದರ್ಶನವಿತ್ತುದು ಪರಮಾನುಗ್ರಹವಾಯಿತು. ಆದರೆ ಈ ಸದ್ಯದಲ್ಲಿ ನನಗೆ ರಾಜಧಾನಿಯ ಪ್ರಯಾಣವಿದೆ. ಅದರಿಂದ ತಮ್ಮೊಡನೆ ವಿಶೇಷವಾಗಿ ಮಾತನಾಡಲು ಅವಕಾಶವಾಗಲಿಲ್ಲ. ತಾವು ಇನ್ನು ಯಾವಾಗಲಾದರೂ ಬಂದರೆ ನಾನೂ ತಮ್ಮ ವಿದ್ವದ್ವಾಣಿಯನ್ನು ಕೇಳಿ ಕೃತಾರ್ಥನಾಗುತ್ತೇನೆ'

'ತಮ್ಮಂತಹ ಲಕ್ಷ್ಮೀಪುತ್ರರೂ ವಿದ್ಯಾಸಂಪನ್ನರೂ ಆದವರನ್ನು ದರ್ಶನಮಾಡುವುದೇ ನಮ್ಮ ಭಾಗ್ಯ! ಎಲ್ಲದಕ್ಕಿಂತಲೂ ಹೆಚ್ಚಾಗಿ ವರ್ಣಾ ಶ್ರಮಗಳಲ್ಲಿ ಅಭಿಮಾನವಿಲ್ಲದ ವಿಧರ್ಮಿರಾಜರು ಪ್ರಬಲಿಸುತ್ತಿರುವ ಈ ಕಾಲದಲ್ಲಿ ತಮ್ಮಂತಹ ದಾನಶೂರರನ್ನು ದರ್ಶನಮಾಡಿದ ದಿನವೇ ಸುದಿನ. ತಮ್ಮಂತಹವರ ಅಭಿವೃದ್ಧಿಯೆಂದರೆ ವೈದಿಕ ಧರ್ಮದ ಪುನರುಜ್ಜೀವನವೇ ಎನ್ನಬಹುದು. ಇದು ತ್ರಿಕರಣ ಶುದ್ಧವಾದ ಮಾತು. ಮುಖ್ಯ ಪರಮೇ ಶ್ವರನು ತಮಗೆ ಉತ್ತರೋತ್ತರಣಿಯಾದ ಸೌಭಾಗ್ಯವನ್ನು ಪಾಲಿಸಬೇಕು'

ಶ್ರೀಮಂತನು ಇದೇ ಸಮಯವೆಂದು ತಿಳಿದು ತನ್ನ ಪರಿವಾರದವರ ಮುಖ ನೋಡಿದನು. ಅವರು ಸಭಾವಿಸರ್ಜನಕ್ಕೆ ಸಿದ್ಧರಾದರು. ಹಾಗೂ

ಹೀಗೂ ತಡಮಾಡಿ ಮುಚ್ಚಂಜೆಯ ಹೊತ್ತಿಗೆ ಸಭಾವಿಸರ್ಜನವಾಯಿತು. ವಿದ್ವಾಂಸರು ಅಖಂಡ ಸಂತೋಷದಲ್ಲಿ ತೇಲಿ ಮುಳುಗುತ್ತಾ ನಿಜವಸತಿಯ ಕಡೆಗೆ ಹೊರಟರು.

ವಿದ್ವಾಂಸರು ರಥವನ್ನೇರುತ್ತಿದ್ದ ಹಾಗೆಯೇ ಮತ್ತೆ ಶ್ರೀಮಂತನ ಅಪ್ಪಣೆಯಾಯಿತು. ಅವರು ಮತ್ತೆ ಒಳಕ್ಕೆ ಬಂದರು. ಕಟ್ಟೆಗೆಯವನು ಅಂತರ್ಗೃಹಕ್ಕೆ ಕರೆದೊಯ್ದನು. ಬಾಗಿಲ ಸಂಧ್ಯಾದೀವಿಗೆಗಳನ್ನು ಹಚ್ಚಿ ಯಾಗಿದೆ. ಇನ್ನೂ ದೊಡ್ಡ ದೀಪಗಳನ್ನು ಹಚ್ಚಿಲ್ಲ. ಧೂಪದಾನಿಗಳಿಂದ ಹೊರಟ ಧೂಪಧೂಮವು ಸುವಾಸನೆಯನ್ನು ಬೀರುತ್ತಾ ಮಂಜಿನಂತೆ ಸುತ್ತಲೂ ಆವರಿಸಿಕೊಂಡಿದೆ. ಅಗ್ನಿಯು ಬ್ರಾಹ್ಮಣರ ದೇವರು. ಬಹುಶಃ ಆ ದಿನ ಆದ ಬ್ರಾಹಣ ಮರ್ಯಾದೆಯಿಂದ ಆತನಿಗೂ ತೃಪ್ತಿಯಾಗಿರಬೇಕು. ಇಲ್ಲದಿದ್ದರೆ ಆತನು ಧೂಪದಾನಿಯಲ್ಲಿ ದಿನದಿನದ ಎರಡರಷ್ಟು ಧೂಮ ವನ್ನು ಸೃಷ್ಟಿಸುತ್ತಿದ್ದನೇ ?

ಭಟ್ಟರುಗಳು ಬಂದ ಕೊಂಚ ಹೊತ್ತಿನಲ್ಲಿಯೇ ಶ್ರೀಮಂತನೂ ಬಂದನು. ಮೊದಲಿನ ಶ್ರೀಮಂತನಿಗೂ ಈ ಶ್ರೀಮಂತನಿಗೂ ಇರುವ ವ್ಯತ್ಯಾಸವನ್ನು ಸಂಜೆಯ ಮಸಕಿನಲ್ಲಿ ಧೂಮದ ಮುಸುಕಿನಲ್ಲಿ ಕಾಣುವು ದೆಂತು ? ಅವರು ಯಥಾಸ್ಥಾನಗಳಲ್ಲಿ ಪ್ರತಿಷ್ಠಿತರಾದಮೇಲೆ ಆತನು ಮಾತನಾಡಲಾರಂಭಿಸಿದನು:

'ಕ್ಷಮಿಸಬೇಕು. ಮತ್ತೆ ತಮಗೆ ತೊಂದರೆ ಕೊಡಬೇಕಾಯಿತು.'

'ಅದಕ್ಕೇನಂತೆ ! ನಾವು ಇದನ್ನು ತೊಂದರೆಯೆಂದುಕೊಂಡರಲ್ಲವೇ? ಅಪ್ಪಣೆಯಾಗಲಿ. ಸಿದ್ಧವಾಗಿದ್ದೇವೆ'

'ಇನ್ನೇನೂ ಇಲ್ಲ. ಇದು ನನ್ನ ಸ್ವಂತವಿಚಾರ, ಇದು ಯಾರಿಗೂ ತಿಳಿಯಬಾರದು. ಅದು ತಮ್ಮಲ್ಲಿ ಅಪನಂಬಿಕೆಯಿಂದ ಹೇಳುವ ಮಾತಲ್ಲ. ಇತರರಿಗೆ ತಿಳಿದರೆ ನಷ್ಟವಿಲ್ಲ. ಆ ಕಾರ್ಯವಾದರೆ ಎಲ್ಲರಿಗೂ ತಿಳಿಯಲೇ ಬೇಕು. ವಿವಾಹ ಗುಟ್ಟಾಗಿ ಆಗುವುದೂ ಉಂಟೆ ? ಆದರೆ ಆ ಕಾರ್ಯ ಕೈಗೂಡದೆ ಹೋದರೆ ಎಲ್ಲರ ಅಪಹಾಸ್ಯಕ್ಕೂ ಗುರಿಯಾಗಬೇಕಾಗುತ್ತದೆ.

ಆದರಿಂದ ಹೀಗೆ. ರಾಜರಹಸ್ಯಕ್ಕಿಂತಲೂ ಭದ್ರವಾಗಿ ಕಾಪಾಡುವೆವೆಂದು ಅಭಯ ಕೊಟ್ಟರೆ...............'

ವಿದ್ವಾಂಸರಿಬ್ಬರೂ ಹೇಳಿದರು: 'ತಾವು ಆ ವಿಚಾರವಾಗಿ ಎಳ್ಳಷ್ಟೂ ಸಂದೇಹಪಡಬೇಕಾಗಿಲ್ಲ. ನಮ್ಮ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ, ಇಗೋ ವೇದಪುರುಷನ ಸಾಕ್ಷಿ, ಈ ವಿಚಾರವನ್ನು ಇನ್ನೆಲ್ಲಿಯೂ ಪ್ರಸ್ತಾಪಿಸುವುದಿಲ್ಲ. ಇನ್ನಾದರೂ ನಂಬಿಕೆಯಾಯಿತೇ?'

'ಅಯ್ಯೋ! ತಾವು ಬಹಳ ದುಡುಕಿದಿರಿ. ತಾವು ಬ್ರಾಹ್ಮಣರು, ರಹಸ್ಯವಾಗಿಟ್ಟಿರುತ್ತೇವೆಯೆಂದು ಹೇಳಿದ್ದರೆ ಸಾಕಾಗಿರಲಿಲ್ಲವೇ?'

ಆ ವೇಳೆಗೆ ಭಟನೊಬ್ಬನು ಬಂದು ಶರ್ವಭಟ್ಟರನ್ನು ಆಚೆಗೆ ಕರೆದನು. ಶ್ರೀಮಂತನು 'ಅದೇನಿರಬಹುದೋ ನೋಡಿಬನ್ನಿ. ಆಮೇಲೆ ಮಾತ ನಾಡೋಣ' ಎಂದನು. ಕೇಶವಭಟ್ಟನೂ 'ಹೋಗಿ ಬಾ' ಎಂದನು. ಶರ್ವಭಟ್ಟನು ಹೋದನು.

ಶ್ರೀಮಂತನು ಹೇಳಿದನು; 'ನಾನೇ ಬೇಕೆಂದು ಅವರನ್ನು ಬೇರೆ ಮಾಡಿದೆ. ಅವರು ತಮ್ಮಷ್ಟು ಘಟಕರಲ್ಲವೆಂದು ನನ್ನ ಭಾವನೆ'

'ನಿಜ, ತಮ್ಮಭಿಪ್ರಾಯ ಬಹಳ ಸರಿ'

'ಅಪರಾಧವೇನೂ ಇಲ್ಲವಷ್ಟೆ?'

'ಅಪರಾಧವೂ ಇಲ್ಲ ಏನೂ ಇಲ್ಲ. ವಿಚಾರ ಅಪ್ಪಣೆಯಾಗಲಿ'

'ತಾವು ಅರಮನೆಯಲ್ಲಿ ಕುಮಾರರ ತೊಟ್ಟಿಗಳಿಗೂ ಹೋಗಿಬರುವುದು ಉಂಟಷ್ಟೆ?

'ಓಹೋ! ಅದರೊಳಗೂ ನಮ್ಮ ಯುವರಾಜರು, ನಮ್ಮ ರಾಜ ಕುಮಾರಿ, ಇವರಿಗಂತೂ ನಮ್ಮ ಮೇಲೆ ಬಹಳ ಅಭಿಮಾನ. ಅಲ್ಲಿ ತಪ್ಪದೆ ವಾರಕ್ಕೊಂದು ಸಲವಾದರೂ ಸೇರಲೇಬೇಕು. ನಮ್ಮ ರಾಜಕುಮಾರಿಯು ಕಾವ್ಯಶಾಸ್ತ್ರ ವಿನೋದಿನಿ. ಆಕೆಯ ಕರುಮಾಡಕ್ಕಿಟ್ಟಿರುವ ಶಾರದಾ ಪ್ರಸಾದವೆಂಬ ಹೆಸರು ಬೇರೆ ಅಲ್ಲ ಆಕೆ ಬೇರೆಯಲ್ಲ'

'ತಾವು ಆಕೆಯೊಡನೆ ಪ್ರತ್ಯೇಕವಾಗಿ ಮಾತನಾಡಲು ಅವಕಾಶ ವುಂಟೆ?'

'ಬೇಕಾದರೆ ಅವಕಾಶ ಮಾಡಿಕೊಳ್ಳಬಹುದು. 'ಹೊಸದೊಂದು ಕಾವ್ಯವನ್ನು ಬರೆದಿದ್ದೇನೆ. ಅದನ್ನು ತಮ್ಮಲ್ಲಿ ಏಕಾಂತವಾಗಿ ಅರಿಕೆಮಾಡ ಬೇಕು' ಎಂದರಾಯಿತು'

'ಹಾಗಾದರೆ ನನಗಾಗಿ ಆಕೆಯೊಡನೆ ಒಂದು ಮಾತನ್ನಾಡುವಿರಾ?'

ಕೇಶವಭಟ್ಟನು ತಲೆದೂಗಿದನು: 'ಇವನು ವೈಶ್ಯ ಅವರು ಕ್ಷತ್ರಿಯರು. ಆದರೇನು? ಅವರು ವರ್ಣಾಭಿಮಾನಿಗಳಲ್ಲ. ಅಲ್ಲದೆ ಇಂತಹ ದಾನಶೌಂಡನ ದೌತ್ಯವನ್ನು ವಹಿಸಿದರೆ ಅದೃಷ್ಟವಿದ್ದು ಕಾರ್ಯಸಿದ್ಧಿಯಾದರೆ ಆ ರೀತಿಯೇ ಬೇರೆ!' ಎಂದುಕೊಂಡು ಹೇಳಿದನು: 'ಅಪ್ಪಣೆಯಾಗಲಿ. ಸಾಧ್ಯವಾದ ಮಟ್ಟಿಗೂ ಸಾಧಿಸುವೆನು?'

'ಇದು ನಾನು ಕನಸಿನಲ್ಲಿ ಆಡಿದ ಮಾತು. ನನಗೆ ಕನಸೆಂದರೆ ನಂಬಿಕೆಯುಂಟು. ಆದರಿಂದ ಇದೂ ಸಿದ್ಧಿಸಬಹುದೆಂದು ತಮ್ಮ ಮುಖಾಂತರವಾಗಿ ಈ ಪ್ರಯತ್ನವನ್ನು ಮಾಡುತ್ತಿದ್ದೇನೆ'

'ಸ್ವಪ್ನ ಸುಳ್ಳಲ್ಲ. ಅನೇಕವೇಳೆ ಭಾವಿ ಶುಭಾಶುಭಗಳು ತಿಳಿಯುವುದು ಸ್ವಪ್ನದಲ್ಲಿಯೇ! ನಿಸ್ಸಂದೇಹವಾಗಿ ಅಪ್ಪಣೆಯಾಗಲಿ'

'ತೋಳಿನಲ್ಲಿ ದೇವರು ಕೊಟ್ಟ ಬಲವಿದೆ. ನಡುವಿನಲ್ಲಿ ಯುವರಾಜರು ಕೊಟ್ಟ ಖಡ್ಗವಿದೆ. ಮುಂದಕ್ಕೇನು ಮಾಡಲಿ?' ಈ ಮೂರು ಮಾತು ನನಗಾಗಿ ಆಕೆಯಲ್ಲಿ ಹೇಳಬೇಕು. ಆಕೆಯು ಉತ್ತರವನ್ನು ಕೊಟ್ಟರೆ ಅದನ್ನು ನನಗೆ ತಿಳಿಸಬೇಕು'

'ತಮ್ಮನ್ನು ಮತ್ತೆ ಕಾಣುವುದು?'

'ನಾನು ರಾಜಧಾನಿಗೆ ಬರಬೇಕಾದ ಸಂಭವವಿದೆ. ನಾನು ಬರದಿದ್ದರೆ ನನ್ನ ಪ್ರತಿನಿಧಿಯಾದರೂ ಬರುತ್ತಾನೆ'

'ಸರಿ. ಅಷ್ಟರಲ್ಲಿ ನಾನು ಆಕೆಯೊಡನೆ ಈ ವಿಷಯವನ್ನು ಪ್ರಸ್ತಾಪಿಸಿ ಉತ್ತರವನ್ನು ಸಂಗ್ರಹಿಸಿಟ್ಟಿರುವೆನು'

'ಕಾರ್ಯವು ಅನುಕೂಲವಾದರೆ,—'

'ಆ ವಿಚಾರ ನನಗೆ ತಾವು ಹೇಳಬೇಕೇ? ತಮ್ಮ ಕಾರ್ಯವು ಸಿದ್ಧಿಯಾದರೆ ನಾನು ವಂಶಪಾರಂಪರ್ಯವಾಗಿ ಬದುಕಿಕೊಂಡೆ. ಅದಿರಲಿ ತಾವು ಯೋಚಿಸಬೇಡಿ. ನನಗದನ್ನು ಬಿಡಿ'

'ಸರಿ. ಆದರೆ ಗೋಕರ್ಣದ ಪ್ರಯಾಣ?'

'ಈಗ ಮತ್ತೆ ಬನವಾಸಿಗೆ ಹೋಗಬೇಕು. ಅಲ್ಲಿಂದ ಮುಂದಿನ ಯೋಚನೆ'

ಗುಪ್ತನು ತನ್ನ ಬೆರಳಲ್ಲಿದ್ದ ರತ್ನದುಂಗುರವನ್ನು ಕೇಶವಭಟ್ಟನಿಗೆ ಕೊಟ್ಟು, 'ಇದು ನನ್ನ ಕಡೆಯದಾಗಿ ತಮ್ಮಲ್ಲಿದ್ದು ಪದೇಪದೇ ನನ್ನ ನೆನಹು ಕೊಡುತ್ತಿರಲಿ' ಎಂದನು.

ಕೇಶವಭಟ್ಟನು ಬಿಂಕದಿಂದ ಅದನ್ನು ಪರಿಗ್ರಹಿಸಿದನು. ಆ ವೇಳೆಗೆ ಶರ್ವಭಟ್ಟನೂ ಬಂದನು. ಇನ್ನೊಂದು ಕೊಂಚ ಹೊತ್ತಿನೊಳಗಾಗಿ ಭಟ್ಟರಿಬ್ಬರೂ ತಮ್ಮ ವಸತಿಯ ಹಾದಿಯಲ್ಲಿದ್ದರು.

ಆ ರಾತ್ರಿ ಅಡುಗೆಯ ವಾಸನೆಯಿಂದ ಏಕಾಗ್ರಚಿತ್ತರಾಗಿ ಜಪ ಮಾಡಲು ಅವರಿಗೆ ಅವಕಾಶವಾಗಲಿಲ್ಲ. ಹೊಟ್ಟೆಯ ಭಾರದಿಂದ ನಟ್ಟಿರುಳಿನವರೆಗೂ ನಿದ್ದೆ ಬರಲಿಲ್ಲ.

ಮೂರುದಿನವಾದಮೇಲೆ ವಿದ್ವಾಂಸರಿಬ್ಬರೂ ಬನವಾಸಿಯಲ್ಲಿ ಸಂಧಿವಿಗ್ರಹಿ ಮಾಂಡಲಿಕ ನಂದಿವರ್ಮನನ್ನು ಕಾಣಿಸಿಕೊಂಡು ತಮ್ಮ ರಾಯಭಾರದ ಫಲವನ್ನು ಅರಿಕೆ ಮಾಡಿದರು. 'ನೀಲಕಂಠಗುಪ್ತನು ಮಯೂರನಲ್ಲ' ಎಂಬುದು ಅವರ ಖಚಿತವಾದ ಅಭಿಪ್ರಾಯ. ನಂದಿವರ್ಮನು ಅವರ ಅಭಿಪ್ರಾಯವನ್ನು ನಿಸ್ಸಂದೇಹವಾಗಿ ಒಪ್ಪಿಕೊಳ್ಳಲು ಕೇಶವಭಟ್ಟನ ಬೆರಳಲ್ಲಿ ಮಿನುಗುತ್ತಿದ್ದ ರತ್ನದುಂಗುರವು ಅಡ್ಡಿಯಾಯಿತು.

ಮಾಂಡಲಿಕನು ಮಾತಿನ ಭರದಲ್ಲಿ, 'ರತ್ನಾಂಗುಳೀಯಕವನ್ನೂ ಮಯೂರನೇ ಕೊಟ್ಟನೋ?' ಎಂದು ಕೇಳಿದನು.

ಕೇಶವಭಟ್ಟನು ಸ್ವಾಭಾವಿಕವಾಗಿ, 'ಇದು ಶ್ರೀಮಂತರು ಕೊಟ್ಟುದು. ನಾವು ಮಯೂರನನ್ನು ಕಾಣಲೇ ಇಲ್ಲ.' ಎಂದನು.

ನಂದಿವರ್ಮನಿಗೆ ತನ್ನ ಮೇಲಿದ್ದ ಒಂದು ಹೊರೆಯನ್ನು ಇಳುಕಿದಂತಾಯಿತು. ಆದರೂ ರತ್ನಾಂಗುಳೀಯಕದ ನೆನೆಪಾಗಿ, 'ಭಟ್ಟನು ವಿಕ್ರೀತನಾಗಿರಬಹುದೇ?' ಎಂದು ಒಂದು ಪ್ರಶ್ನೆಯು ಮೂಡಿ ಆತನ ಸಂದೇಹವು ಸಂಪೂರ್ಣವಾಗಿ ಸಾಯಲು ಸಾಧ್ಯವಾಗಲಿಲ್ಲ.



## ಇಪ್ಪತ್ತೇಳನೆಯ ಪ್ರಕರಣ

ಫಾಲ್ಗುನ ಶುದ್ಧ ತದಿಗೆ. ಪಲ್ಲವ ರಾಜಧಾನಿಯಾದ ಕಾಂಚೀಪುರದಲ್ಲಿ ಯುವರಾಜರ ವರ್ಧಂತಿಯು ನಿನ್ನೆ ತಾನೆ ಬಹು ವೈಭವದಿಂದ ನಡೆದಿದೆ. ಸುತ್ತಮುತ್ತಲಿಂದ ಬಂದಿರುವ ನೋಟಿಗರು ಅಸಂಖ್ಯಾತರಾಗಿ ಬೀದಿಯಲ್ಲಿ ಓಡಾಡುವುದಕ್ಕೆ ಎಡೆಯಿಲ್ಲ ಎನ್ನುವಂತಾಗಿದೆ. ಸಮ್ರಾಜನ ಅತಿಥಿಗಳು ತಮ್ಮ ತಮ್ಮ ಸ್ಥಾನಮಾನಗಳಿಗೆ ತಕ್ಕ ವೈಭವದಿಂದ ಬಂದು ನಗರಲಕ್ಷ್ಮಿಗೆ ಹೊಸದೊಂದು ಬಣ್ಣವನ್ನು ಕೊಟ್ಟಿದ್ದಾರೆ. ಅಂತೂ ಎಲ್ಲೆಲ್ಲಿಯೂ ವೈಭವ ದರ್ಶನದಿಂದುಂಟಾದ ಸಂತೋಷ, ಅದರಿಂದಾದ ಸೌಖ್ಯಗಳು ತುಂಬಿವೆ.

ಸಮ್ರಾಜನ ಅರಮನೆಯಲ್ಲಂತೂ ಬೇಕಾದಷ್ಟು ಉತ್ಸವ. ಆಳುಕಾಳುಗಳೂ ಸಹಿತ ಹಬ್ಬದುಡುಗೆಯನ್ನು ಉಟ್ಟುತೊಟ್ಟು ಶಿಸ್ತಾಗಿದ್ದಾರೆ. ರಾಜಬಂಧುಗಳ ಆಡಂಬರವಂತೂ ಹೇಳತೀರದು. ರಾಜರಿಗೂ ಮಿಗಿಲೆನ್ನುವ ಹಾಗೆ ಉಟ್ಟುತೊಟ್ಟಿದ್ದಾರೆ. ಹಬ್ಬದೌತಣ ಉಡುಗೆರೆಗಳು ಎಲ್ಲೆಲ್ಲಿಯೂ ಬೇಕಾದಷ್ಟು ಆಗಿ ಸಂತೃಪ್ತಿಯ ಮಳೆಗರೆದಿವೆ. ಎಲ್ಲೆಲ್ಲಿಯೂ ಸೌಖ್ಯದ ಪೆಂಪು ಸೊಂಪುಗಳು ತುಂಬಿವೆ.

ಈ ದಿನ ಸಂಜೆಯ ಕೊನೆಯ ಝಾಮದಲ್ಲಿ ಚಿತ್ರಶಾಲೆಯಲ್ಲಿ ಸಮ್ರಾಜರು ರಾಜಕುಮಾರರ ಸಮೇತವಾಗಿ ಮಿತಪರಿವಾರರಾಗಿ ಮಂಡಿಸಿದ್ದಾರೆ. ಒಬ್ಬೊಬ್ಬರಾಗಿ ಕಾಣಿಕೆಗಳನ್ನು ಒಪ್ಪಿಸಿದರು. ಒಂದೊಂದು ಕಾಣಿಕೆಯೂ

ಒಂದೊಂದು ರೀತಿಯಲ್ಲಿ ಅತಿಶಯವಾಗಿದ್ದು ಎಲ್ಲರ ಮನಸ್ಸನ್ನೂ ಗ್ರಹಿಸಿತು. ಎಲ್ಲರದೂ ಆದ ಮೇಲೆ ಕೊನೆಯಲ್ಲಿ, ಶ್ರೀಮಂತ ನೀಲಕಂಠಗುಪ್ತನ ಪ್ರತಿನಿಧಿಯಾಗಿ ಅವನ ಭಾಂಡಾರಿ ವಿನಯಗುಪ್ತನು ಬಂದಿದ್ದಾನೆ ಮಾಂಡಲೀಕೇಶ್ವರನಿಗೇ ಅಂತಹ ಭಾರಿಯ ಕಾಣಿಕೆಯನ್ನು ಒಪ್ಪಿಸಿದವನು ಯುವ ರಾಜರಿಗೆ ಇನ್ನೆಂತಹ ಕಾಣಿಕೆಯನ್ನು ಒಪ್ಪಿಸುವನೋ ನೋಡಬೇಕೆಂದು ಎಲ್ಲರೂ ಕುತೂಹಲಿಗಳಾಗಿದ್ದಾರೆ. ಭಾಂಡಾರಿಯು ಸ್ವಾಭಾವಿಕವಾದ ತನ್ನ ವಿನಯದಿಂದ ರಾಜರಿಗೆ ದಂಡವತ್ಪ್ರಣಾಮಮಾಡಿ ಕಾಣಿಕೆಯನ್ನು ನೀಡಿದನು.

ಮೊದಲ ಕಾಣಿಕೆಯು ಚಿನ್ನದ ಒರೆಯಲ್ಲಿರುವ ರತ್ನಖಚಿತವಾದ ಕಿರುಗತ್ತಿ. ಅದು ಸಮ್ರಾಜರಿಗೆ. ಎರಡನೆಯದು ಒಂದು ಸ್ವರ್ಣಕಮಲ ಅದಕ್ಕೊಂದು ಕೀಲು. ಅದನ್ನು ಒತ್ತಿದರೆ ಕಮಲವು ದಳದಳವಾಗಿ ಅರಳಿ, ಅದರ ಕರ್ಣಿಕೆಯೂ ಬಿಚ್ಚಿಕೊಂಡು ಅದರಿಂದ ಬೊಗಸೆಗೊಂಡ ಎರಡು ಪುಟ್ಟ ಕೈಗಳೆದ್ದು ಒಂದು ರತ್ನಾಂಗುಳೀಯವನ್ನು ಚಾಚಿವೆ. ಅದು ಯುವ ರಾಜರಿಗೆ. ಇನ್ನೊಂದು ಸಿಂಹದೊಡನೆ ಹೋರಾಡಿ ಅದನ್ನು ಕೆಳಕ್ಕುರುಳಿಸಿ ಅದರ ಮೇಲೆ ಕುಳಿತಿರುವ ಕಪಿಯ ಪ್ರತಿಮೆ. ಸಿಂಹದ ಅಂಗಾಂಗಗಳೆಲ್ಲವೂ ಸ್ಫುಟವಾಗಿ ಕೆತ್ತಿರುವಂತೆ ಕಪಿಯ ಅಂಗಾಂಗಗಳನ್ನೂ ಬಹುಕೌಶಲದಿಂದ ಬಿಡಿಸಿದೆ. ಎರಡು ಬೊಂಬೆಗಳೂ ಚಿನ್ನದ ಮುದ್ದೆಯಿಂದಾದುವು. ಭಾವ ಸಂಪನ್ನವಾಗಿ ರತ್ನಪುಂಜರಂಜಿತವಾಗಿ ಆ ಬೊಂಬೆಗಳು ಕಣ್ಣನ್ನು ಕುಕ್ಕುವಂತಿವೆ. ಅದು ಕೊನೆಯವನಾದ ವಿಷ್ಣುಗೋಪನಿಗೆ. ನಾಲ್ಕನೆಯದು ಕುದುರೆಯ ಮೇಲೆ ಕುಳಿತಿರುವ ಯೋಧನ ಚಿತ್ರ. ಅದು ಸಿಂಹದಂತೆ ಮುದ್ದೆಯ ಬೊಂಬೆಯಲ್ಲ. ಉಬ್ಬೆತ್ತಿರುವ ಚಿತ್ರ. ಅದಕ್ಕೊಂದು ರತ್ನಮಯವಾದ ಚೌಕಟ್ಟು. ಅದು ಸಿಂಹವರ್ಮನಿಗೆ. ಇನ್ನೊಂದು ವಿವಿಧ ರತ್ನಗಳಿಂದ ಆದ ಒಂದು ನವಿಲು. ಅದಕ್ಕೆ ಕೀಲುಂಟು. ಅದನ್ನು ತಿರುಗಿಸಿದರೆ ಆ ನವಿಲು ರೆಕ್ಕೆಗಳನ್ನು ಬಿಚ್ಚಿ ಪುಕ್ಕವನ್ನು ಕೆದರಿಕೊಂಡು ಮೂರುಸುತ್ತು ಪ್ರೈಯ್ಯಾರವಾಗಿ ತಿರುಗಿ ನಮಸ್ಕಾರಮಾಡಿ ನಿಲ್ಲುವುದು. ಅದು ರಾಜಕುಮಾರಿ ಪ್ರೇಮಾವತಿಗೆ.

ಅವರವರಿಗೆ ಕಾಣಿಕೆಯನ್ನೊಪ್ಪಿಸುವಾಗ ಭಾಂಡಾರಿಯು ಅದರಲ್ಲಿರುವ ವಿಶೇಷಗಳು ಗೊತ್ತಾಗುವಂತೆ ಮೌನವಾಗಿ ಗಂಭೀರವಾಗಿ ರತ್ನಾಭರಣ

ಗಳನ್ನು ತೋರಿಸುವ ವ್ಯಾಪಾರಿಯ ವೈಖರಿಯಿಂದ ಅವನ್ನು ಒಮ್ಮೆ ಪ್ರದರ್ಶಿಸುವನು. ಕಾಣಿಕೆಯು ಎಷ್ಟು ಅನರ್ಘ್ಯವಾದುದೋ ಅದನ್ನು ತೋರಿಸುವ ಭಾಂಡಾರಿಯ ಚಾತುರ್ಯವೂ ಅಷ್ಟೇ ಶ್ರೇಷ್ಠವಾಗಿ ಸಭಿಕರ ಕಣ್ಣುಗಳನ್ನು ಮೆಚ್ಚಿಸಿತು. ರಾಜಕುಮಾರರು ಸ್ವಭಾವವಾಗಿ ತಮ್ಮ ಕುತೂಹಲಗಳನ್ನು ತೋರ್ಪಡಿಸುವವರಲ್ಲ. ಅಂತಹ ಗಂಭೀರರೂ ಕೂಡ ಕಾತರರಾಗಿ ಕಾಣಿಕೆಗಳನ್ನು ಒಂದೆರಡು ಸಲ ತಿರುಗಿ ನೋಡುವಷ್ಟು ಚಪಲತೆಯನ್ನು ಹುಟ್ಟಿಸಿದುವು ಆ ಪದಾರ್ಥಗಳು.

ಸಭಾವಿಸರ್ಜನವಾದ ಮೇಲೆ ರಾಜಾಜ್ಞೆಯಂತೆ ವಿನಯಗುಪ್ತನು ಇನ್ನೊಮ್ಮೆ ರಾಜದರ್ಶನವನ್ನು ಮಾಡಿದನು. ಸಮ್ರಾಜನು ಅನುಗ್ರಹಪೂರ್ವಕವಾದ ಆದರದಿಂದ ಬರಮಾಡಿಕೊಂಡನು. ಆಸನಪರಿಗ್ರಹಕ್ಕಾಗಿ ಬಲವಂತಮಾಡಿದರೂ ವಿನಯಗುಪ್ತನು ಕುಳಿತುಕೊಳ್ಳಲಿಲ್ಲ.

ಸಮ್ರಾಜನು ಕೇಳಿದನು: 'ಶ್ರೀಮಂತರೇ ಬರುವುದಾಗಿ ವದಂತಿ ಇದ್ದಿತು ಅಲ್ಲವೆ ?'

'ಹೌದು ಮಹಾಸ್ವಾಮಿ! ಶ್ರೀಮಂತರು ಹೊರಟೂ ಇದ್ದರು. ಆದರೆ ಒಂದು ದಿನದ ಹಾದಿ ನಡೆದು ಬಂದು ತಂಗಿದ್ದಾಗ ಅಲ್ಲಿಗೆ ಗಣಿಗಳಿಂದ ಕೆಟ್ಟ ಸುದ್ದಿಯೊಂದು ಬಂದು ಅವರು ಹಿಂತಿರುಗಬೇಕಾಯಿತು.'

'ಕೆಟ್ಟ ಸುದ್ದಿಯೇ ?'

'ಕಲ್ಲೊಂದು ಸಿಡಿದು ನೂರಾರು ಜನರಿಗೆ ಅಪಾಯವಾಯಿತಂತೆ. ಅಂತಹ ಸಂದರ್ಭದಲ್ಲಿ ಶ್ರೀಮಂತರು ವಿಪನ್ನರಿಗೆ ಪ್ರತ್ಯಕ್ಷವಾಗಿ ಸಹಾಯ ಮಾಡುವುದು ಪದ್ಧತಿ. ಅದಕ್ಕಾಗಿ ಹಿಂದಕ್ಕೆ ಹೋಗಬೇಕಾಯಿತು. ಸಮ್ಮುಖದಲ್ಲಿ ಬಂದು ದರ್ಶನಮಾಡುವ ಭಾಗ್ಯವು ತಮಗೆ ಲಭಿಸಲಿಲ್ಲವೆಂದು ಅವರು ಕೊರಗಿಕೊಂಡುದನ್ನು ಸನ್ನಿಧಿಯಲ್ಲಿ ವಿಜ್ಞಾಪಿಸಬೇಕೆಂದು ನನಗೆ ಆಜ್ಞೆಯಾಗಿದೆ'

ಸಮ್ರಾಜರು ವಿಜ್ಞಾಪನೆಯನ್ನು ಒಪ್ಪಿಕೊಳ್ಳುವ ಅನುಗ್ರಹ ಮಾಡಿ, 'ತಮ್ಮ ಕಾಣಿಕೆಗಳು ಬಲು ಸೊಗಸಾಗಿವೆ. ಇನ್ನೊಂದು ಸಲಕ್ಕಾದರೂ

ಖಂಡಿತವಾಗಿ ದಯಮಾಡಿಸಬೇಕೆಂದು ನಾವೇಹೇಳಿದೆವೆಂದು ಶ್ರೀಮಂತರಿಗೆ ಹೇಳಿ. ತಾವೂ ಅವರ ಜೊತೆಯಲ್ಲಿ ದಯಮಾಡಿಸಬೇಕು. ಮರೆಯ ಬಾರದು' ಎಂದರು.

ವಿನಯಗುಪ್ತನಿಗೆ ಇನ್ನೂ ಒಮ್ಮೆ ಮರ್ಯಾದೆಯಾಯಿತು. ಯುವ ರಾಜನೇ ಸ್ವಂತವಾಗಿ ಉಡುಗೊರೆಯನ್ನಿತ್ತು, 'ಶ್ರೀಮಂತರಿಗೆ ಅರಿಕೆಮಾಡಿ: 'ದರ್ಶನಲಾಲಸವಾದ ಕಣ್ಣುಗಳ ಕಾತರತೆಯನ್ನೂ ಆಲಿಂಗನಾತುರವಾದ ಅಂಗಗಳ ಪ್ರತೀಕ್ಷೆಯನ್ನೂ ತಮ್ಮ ಕಾಣಿಕೆಗಳು ಪುಟಗೊಳಿಸಿವೆ. ಆದಷ್ಟು ಬೇಗ ತಮ್ಮನ್ನು ಸಂದರ್ಶಿಸುವ ಸಂತೋಷವು ನಮ್ಮದಾಗ ಬೇಕೆಂದು' ಕೋರಿಕೆ. ಇದನ್ನು ಅವರಿಗೆ ಅರಿಕೆ ಮಾಡುವಿರಾ?' ಎಂದನು. ಗುಪ್ತನು ಆತನ ಸರಳತೆ ಗಾಂಭೀರ್ಯ ವಿಶ್ವಾಸಗಳಿಗೆ ಬಗೆಸೋತು ತನ್ನ ಮನಸ್ಸಿನಲ್ಲಿ, 'ನಮ್ಮರಸು ಪ್ರತಿದ್ವಂದಿಯಾಗಿದ್ದರೂ ಈತನ ಮನಸ್ಸನ್ನು ಮೆಚ್ಚಿಸಬೇಕೆಂದು ಒದ್ದಾಡುವುದು ಹೆಚ್ಚಲ್ಲ' ಎಂದುಕೊಂಡನು. ಪ್ರಕಟವಾಗಿ ಅತಿ ನಮ್ರ ವಾಗಿ, 'ಅಪ್ಪಣೆ. ಮಹಾಸನ್ನಿಧಾನದ ಅನುಗ್ರಹ ವಿಶ್ವಾಸ ವಿಶೇಷಗಳನ್ನು ಶ್ರೀಮಂತರಿಗೆ ಅರಿಕೆಮಾಡಿ ಬರುವ ಉತ್ಸವಕ್ಕೆ ಕರೆತರುತ್ತೇನೆ' ಎಂದನು.

ತತ್ಕಾಲ ಸಾಧಾರಣವಾದ ಇತರ ಉಪಚಾರಗಳೊಡನೆ ವಿನಯ ಗುಪ್ತನು ಬೀಳ್ಕೊಂಡು ಹೊರಟುಬಂದನು.

* * * * *

ಸಂಜೆಯ ಆರತಕ್ಷತೆಯಾಗಿ ಊಟ ಉಪಚಾರಗಳಾದ ಮೇಲೆ ಯುವರಾಜನು ಶ್ರೀಮಂತನ ಕಾಣಿಕೆಯನ್ನು ತಾನೇ ತೆಗೆದುಕೊಂಡು ತಂಗಿಯನ್ನು ಹುಡುಕಿಕೊಂಡು ಹೊರಟನು. ಪ್ರೇಮಾವತಿಯು ಬಿಸಿಲು ಮಚ್ಚಿನಲ್ಲಿ ವೀಣೆಯನ್ನು ಬಾರಿಸುತ್ತಾ ಕುಳಿತಿದ್ದಾಳೆ. ಎದುರಿಗೆ ಆ ನವಿಲಿನ ಬೊಂಬೆ. ಅನ್ಯಮನಸ್ಕಳಾಗಿ ವೀಣೆಯನ್ನು ಬಾರಿಸುತ್ತಿರುವ ತಂಗಿಯನ್ನು ಹಾಸ್ಯಮಾಡುತ್ತ ಕುಮಾರ ವಿಷ್ಣುವು, 'ಮಯೂರ ದರ್ಶನದಿಂದ ರಾಜ ಕುಮಾರಿಯವರಿಗೆ ಮನಸ್ಸು ವಿಹ್ವಲವಾದಂತಿದೆ' ಎಂದನು

ರಾಜಕುಮಾರಿಯು ವೀಣೆಯನ್ನು ಅತ್ತಿಟ್ಟು, 'ಎಲ್ಲವೂ ತಮ್ಮ ಪ್ರಸಾದ. ದಯಮಾಡಿಸಬೇಕು' ಎಂದು ಎದ್ದಳು. ಏಕೋ ಏನೋ ಇದ್ದು

ದಿದ್ದ ಹಾಗೆಯೇ ಮುಖವು ತಟ್ಟನೆ ಒಂದು ಕಳೆಯಿಳಿದು ಕಣ್ಣಿನಲ್ಲಿ ಒಂದು ತೊಟ್ಟು ನೀರು ಕಾಣಿಸಿಕೊಂಡಿತು. ಅದನ್ನು ಆಕೆಯು ಸ್ತ್ರೀಜನ ಸಹಜವಾದ ಬೆಡಗಿನಿಂದ ಒರೆಸಿಕೊಂಡು, 'ಅಣ್ಣಾಜಿಯವರು ಇತ್ತ ದಯ ಮಾಡಿಸಬೇಕು' ಎಂದು ತಾನು ಒರಗಿದ್ದ ಒರಗುದಿಂಬನ್ನು ಅತ್ತ ನೂಕಿದಳು.

ಅಣ್ಣ ತಂಗಿಯರು ಪರಿಜನವನ್ನೆಲ್ಲ ವಿಸರ್ಜಿಸಿ ಇಬ್ಬರೇ ಕುಳಿತು ಮಾತನಾಡಿಕೊಂಡರು.

'ಇದೇಕೆ ಕತ್ತಲಲ್ಲಿ ಕುಳಿತುಕೊಂಡೆಯಲ್ಲ?'

'ಬೇಕಾದರೆ ದೀಪವನ್ನು ತರಿಸುತ್ತೇನೆ'

'ಬೇಡ ಬೇಡ'

ಅಣ್ಣನು ತಂಗಿಯನ್ನು ಕೈಹಿಡಿದು ಕರೆದು ಮಗ್ಗುಲಲ್ಲಿ ಕುಳ್ಳಿರಿಸಿಕೊಂಡು ಪ್ರೀತಿಸ್ನಿಗ್ಧವಾದ ವಾಣಿಯಿಂದ ಮಾತನಾಡಿಸಿದನು: 'ಪ್ರೇಮಾ! ಇಂದು ಆ ನವಿಲನ್ನು ಒಪ್ಪಿಸಿಕೊಳ್ಳುವಾಗ ಅದೇಕೆ ಅಗ್ನಿಪುತ್ಥಳಿಯಂತೆ ಅಷ್ಟು ಕೆಂಪಾಗಿಹೋದೆ?'

ಉತ್ತರವು ಬರಲಿಲ್ಲ. ಹೆಣ್ಣು ತಲೆತಗ್ಗಿಸಿಕೊಂಡು ಕುಳಿತಿದ್ದಿತು. ಯುವರಾಜನು ಅವಳ ಮುಖವನ್ನೆತ್ತಲು ಕೈನೀಡಿದಾಗ ಒಂದು ತೊಟ್ಟು ಕಣ್ಣೀರು ಮುಂಗೈಮೇಲೆ ಬಿದ್ದಿತು. ಬಿಸಿಯುಸಿರು ಕೈಯನ್ನು ಸೋಕಿತು. ಅಣ್ಣನು ಗಾಬರಿಯಾಗಿ ತಂಗಿಯನ್ನು ಮತ್ತೆ ಹತ್ತಿರಕ್ಕೆ ಕರೆದುಕೊಂಡು, ಇನ್ನೂ ನಂಬಿಸುವ ಸಣ್ಣದನಿಯಿಂದ ಕೇಳಿದನು: 'ಎಂಟು ದಿನದಿಂದ ಅರಳುವ ಮೊಗ್ಗಿನಂತೆ ನಗೆಸೊಬಗಿನಿಂದ ಕೂಡಿದ್ದ ಮುಖವು ಈ ಎರಡು ದಿನದಿಂದ ಸೊರಗಿದೆಯಲ್ಲವ್ವಾ! ಏಕೆ ಹೇಳಬಾರದೆ? ನನ್ನ ಕಂದಮ್ಮ ನನ್ನು ಕೊರಗಿಸುವ ದುಃಖವಾವುದು ಹೇಳು? ನಿನಗೆ ಇಲ್ಲದುದು ಏನುಂಟು? ನೀನು ಚಕ್ರವರ್ತಿಯ ಮಗಳು! ಹೇಳು.'

ತಂಗಿಯು ದೀರ್ಘವ್ಯಸನದಿಂದ ಕೊರಗಿರುವ ಕಿರುದನಿಯಿಂದ ಹೇಳಿದಳು: 'ಅದೇ ನನಗೆ ಮೃತ್ಯುವಾಗಿರುವುದು. ನಾನು ಚಕ್ರವರ್ತಿಯ ಮಗಳಲ್ಲದೆ ಬಡವೆಯಾಗಿದ್ದರೆ ಅದರ ರೀತಿಯೇ ಬೇರೆಯಾಗಿದ್ದಿತು.'

'ನಾನು ಹೇಳಿದೆನಲ್ಲ? ನೀನೆಂದುಕೊಂಡಿರುವ ಹಾಗೆ ನೀಲಕಂಠ ಗುಪ್ತನೇ ಮಯೂರನಾಗಿದ್ದರೆ, ಏನಾದರೂ ವಿಶ್ವಪ್ರಯತ್ನಮಾಡಿ ಅವನನ್ನು ಇಲ್ಲಿಗೆ ಕರೆತಂದು ನಿನಗೆ ಮದುವೆ ಮಾಡುವೆನು. ಅವನು ಈ ವರ್ಧಂತಿಗೆ ಬರುವನೆಂದುಕೊಂಡಿದ್ದೆ. ಏನಾದರೂ ಮಾಡಿ ಅವನನ್ನು ಕಳುಹಿಸಬೇಕೆಂದು ದಂತಿವರ್ಮನಿಗೂ ಬರೆದಿದ್ದೆ'

'ಅಣ್ಣಯ್ಯ! ನಾನಿದುವರೆಗೂ ತಮಗೊಂದು ಸುದ್ದಿಯನ್ನು ಹೇಳಲಿಲ್ಲ. ಗುಪ್ತನೇ ಮಯೂರ! ಸಂದೇಹವಿಲ್ಲ'

'ಅದು ಹೇಗೆ?'

'ಹಿಂದೆ ಅವನು ತಮ್ಮನ್ನು ಹುಡುಕಿಕೊಂಡು ನನ್ನ ತೋಟಕ್ಕೆ ಬಂದಾಗ ನನ್ನೊಡನೆ ಎರಡು ಮಾತನಾಡಿದ್ದನು. ಅದೇ ಮಾತುಗಳನ್ನು ಈ ಶ್ರೀಮಂತನು ನನಗೆ ಬಂದು ಸೇರುವಂತೆ ಹೇಳಿಕಳಿಸಿರುವನು. ಆ ಮಾತುಗಳನ್ನು ಆಡಿದವನು ಅವನು ಕೇಳಿದವಳು ನಾನು. ನಮ್ಮಿಬ್ಬರ ಹೊರತು ಇನ್ನೊಂದು ಸೊಳ್ಳೆ ನೊಣಕ್ಕೂ ತಿಳಿಯದ ಮಾತುಗಳು ಇವನಿಗೆ ತಿಳಿದುದೆಂತು? ಈ ಮಾತನ್ನು ಅವನು ಕನಸಿನಲ್ಲಿ ಆಡಿದನಂತೆ! ಇಂದು ಈ ನವಿಲು. ಇದರರ್ಥವೇನು?'

'ಆಯಿತು. ನಿನಗೆ ಆ ಮಾತುಗಳನ್ನು ಬಂದು ಹೇಳಿದವರಾರು?'

'ನಮ್ಮ ಕೇಶವಭಟ್ಟರು. ನಾನೇನೆಂದು ಬಿಡುವೆನೋ ಎಂದು ಅವರು ಹೆದರಿ ಹೆದರಿ ಕೊನೆಗೆ ಹೇಳಿದರು. ಅವರ ಗಾಬರಿಯನ್ನು ನೋಡಿ ನನಗೆ ನಗುವು ಬಂದು ಆ ನಗುವಿನಲ್ಲಿ ನಾನೂ ದುಡುಕಿ ಒಂದು ಮಾತನಾಡಿಬಿಟ್ಟೆ. ಆ ಮಾತು ಅವನಿಗೆ ತಿಳಿದರೆ ಅವನೆಷ್ಟು ನಗುವನೋ!'

'ನೀನು ಏನೆಂದೆ?'

'ಮಾಯೂರೀ ಮದಯತಿ ಮಾರ್ಜನಾ ಮನಾಂಸಿ' ಎಂದುಬಿಟ್ಟೆ. ತಟ್ಟನೆ ನನಗೇ ನಾಚಿಕೆಯಾಗಿ ಎದ್ದು ಓಡಿಬಂದೆ. ಆ ದಿನ ನಾನು ಹೇಳಿದುದಕ್ಕೂ ಈ ದಿನ ಮಯೂರವನ್ನೇ ನನಗೆ ಕಾಣಿಕೆಯಾಗಿ ಕಳುಹಿಸಿರುವುದಕ್ಕೂ ನನಗೆ ಆತ್ಯಾಶ್ಚರ್ಯವಾಯಿತು'

ಯುವರಾಜನು ನಕ್ಕು, 'ಹಾಗಾದರೆ ನಂದಿವರ್ಮನ ನೀತಿಯಿಂದ ನಿನಗೆ ಫಲವಾಯಿತು ಎನ್ನು' ಎಂದನು. ರಾಜಕುಮಾರಿಯು ಮಾತನಾಡ ಲಿಲ್ಲ. ಯುವರಾಜನು 'ಈ ಹಬ್ಬವಾಗುತ್ತಲೂ ನಾನೇ ಹೋಗಿ ಕರೆದು ಕೊಂಡು ಬರುತ್ತೇನೆ' ಎಂದನು. ಆಗಲೂ ಆಕೆಯು ಮಾತಾಡಲಿಲ್ಲ. ಆದರೆ ಆಕೆಯ ಮೊಗದಲ್ಲಿ ತೋರಿದ ಎಳೆನಗುವು ಆತನ ಮನಸ್ಸಿನ ಭಾರ ವನ್ನು ಇಳುಹಿತು.

——o——

## ಇಪ್ಪತ್ತೆಂಟನೆಯ ಪ್ರಕರಣ

ಸಂಜೆಯಾಗಿದೆ. ಅಲ್ಲಲ್ಲಿ ಮಾಡಿರುವ ರಾಗಿ ಜೋಳಗಳ ಗದ್ದೆಯಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಮಾತ್ರವಿದ್ದಾರೆ. ಇರುಳು ಕಾವಲಿಗೆ ಬರುವ ವರು ಇನ್ನೂ ಬಂದಿಲ್ಲ. ಹಿರಿಯಗೌಡ ಕರಿಯಪ್ಪನು ಆಳುಮಗ ತಿಮ್ಮನೂ ಮಾತನಾಡುತ್ತಾ ಕುಳಿತಿದ್ದಾರೆ. ಅವರು ಸಣ್ಣ ದನಿಯಲ್ಲಿ ಆಡುತ್ತಿದ್ದರೂ ಮಾತು ಮಾತ್ರ ಬಹು ಮುಖ್ಯವಾದುದು ಎಂಬುದನ್ನು ಅವರ ಮುಖಮುದ್ರೆ ಗಳು ಕನ್ನಡಿ ಹಿಡಿದಂತೆ ತೋರಿಸುತ್ತಿವೆ. ಗೌಡನ ಮನಸ್ಸು ಮತ್ತೆಲ್ಲಿಯೂ ಚರಿಸದೆ ಆಳುಮಗನ ಮುಖವನ್ನೇ ಪರಿಕ್ಷಿಸಿದ್ದರೆ ಅಲ್ಲೊಂದು ಒಳಗಿನ ಹುಳುಕು ಕಣ್ಣಿಗೆ ಬೀಳುತ್ತಿದ್ದಿತೋ ಏನೋ?

ಗೌಡನು ಅಡಕೆಲೆಯನ್ನು ತಿಕ್ಕಿ ಕಟವಾಯಿಗೆ ಏರಿಸಿಕೊಂಡು ಹೇಳಿದನು: 'ತಿಮ್ಮಾ! ಈ ಜನ್ಮಕ್ಕೆ ಇನ್ನು ಎಂಭತ್ತು ಆಯಿತು ನೋಡು. ಈ ಆರು ತಿಂಗಳಿಂದ ಆದ ಒದ್ದಾಟ ಮಾತ್ರ ಜನ್ಮಜನ್ಮಕ್ಕೂ ಬೇಡ. ಈ ಬೊಡ್ಡಿಯ ಮಕ್ಕಳು ಅದಿನ್ನೆಷ್ಟುಸಲ ಬಂದಾರೋ ಹೋಗಪ್ಪ! ನನಗಂತೂ ತಲೆ ಚಿಟ್ಟುಹಿಡಿದು ಹೋಗಿದೆ'

'ಹಂಗಾದರೆ ಇವನೂ ಅದಕ್ಕೆ ಬಂದಿದ್ದನಾ?'

'ಇನ್ನೇನು? ಈ ಸಲ ಬೆಲೆ ಹೆಚ್ಚುಮಾಡವ್ರೆ. ನನಗೆ ಒಂದು ಸಾವಿರದುಂಬಳಿ ಕೊಟ್ವಾರಂತೆ! ನನ್ನ ಮಗನ್ನ ದಂಡಿನಲ್ಲಿ ನೂರುತಲೆ ನಾಯಕನ್ನ ಮಾಡಾರಂತೆ! ಇನ್ನೇನು ತಿಮ್ಮಾ?'

‘ಸರಿಕಣಪ್ಪಾ! ಆಗಬೋದೇಳು! ನಾನೂ ಆರಂಬಗೀರಂಬ ಬುಟ್ಟು ಚಡ್ಡೀಚೆಲ್ಲಣ ತೊಟ್ಟು ಚಿಕ್ಕಗೌಡನ ಜೊತೇಲಿ ಪಾಳಯಕ್ಕೆ ಹೋಯ್ತೀನಿ. ಅದಿರಲಿ. ನೀನು ಈಗ ಏನಂತ ಹೇಳಿಕಳುಹಿಸಿದೆಯಪ್ಪೋ?’

‘ಉಂಟಾ ತಿಮ್ಮಾ! ನೀನು ಬೊಡ್ಡೀಮಗ ಹೊಲೇರಪ್ಪೈದ. ನಿನಗೆ ಒಂದಿಷ್ಟಗಲದ ಸತ್ತಿಗೆಮಾನ್ಯ ಕೊಟ್ಟೆವೆಂದು ನಮ್ಮ ತಲೆ ಕಾಯುವುದಕ್ಕೆ ನಿನ್ನ ತಲೆ ಕೊಡುವೆ! ನಾವು ನಾಡಗೌಡರಾಗಿ ಕುಲದ ಯಜಮಾನರಾಗಿ ಉಪ್ಪಿಟ್ಟು ಮನೆ ಉಳಿಸಿಕೊಟ್ಟ ಧಣಿಯನ್ನು ಬಿಟ್ಟುಕೊಡುವುದಾ? ಸತ್ತು ಸೊರ್ಗದಲ್ಲಿರೋ ನಮ್ಮಪ್ಪ ಏನೆಂದಾನು? ಯಾರಿಗೆ ಹುಟ್ಟಿತೋ ಮುಕ್ಕ, ನನ್ನ ವಂಶದ ಹೆಸರು ಹೇಳದೆಹೋಯಿತು ಎನ್ನಿಸಿಕೊಳ್ಳಲೇ? ಉಪ್ಪು ತಿಂದ ಒಡೆಯನಿಗೆ ಎರಡು ಬಗೆದು ಸತ್ತ ಮೂರು ತಲೆ ಅಪ್ಪ ಹೆತ್ತಪ್ಪಂದಿರನ್ನು ನರಕಕ್ಕೆ ತಳ್ಳಲೇ? ಉಂಟೇ ತಿಮ್ಮ?’

‘ನಿಜ ಕಣಪ್ಪ! ಮತ್ತೆ ಇವರಿಗೇನ ಹೇಳಿದೆ?

‘ಮೊದಲಿನಿಂದ ಹೇಳಲಿಲ್ಲವೇ? ಅದೇ! ಇವತ್ತಿಗೂ ಅದೇ! ನಾಳೆಗೂ ಅದೇ! ಯಾವತ್ತಿಗೂ ಅದೇ! ಈ ನಾಲಗೆಯೇನಾದರೂ ತಪ್ಪಿ ನಡೆದರೆ, ಹ್ಞ! ಕುಯ್ದು ನಾಯಿಗೆ ಹಾಕಿಬಿಡುವುದಲ್ಲವೆ? ‘ಅದೇನೋ ಬುದ್ಧಿ ನಾವು ಕಾಣೋ! ನಾವಿಲ್ಲಿರೋದು ಸೋಮಿಾ ಕೆಲಸಮಾಡುವುದಕ್ಕೆ! ತಾವು ಹೇಗೆ ಹೇಳಿದರೆ ಹಾಗೆ ಕೇಳುವುದಕ್ಕೆ! ಚಿಕ್ಕ ಹುಡುಗರೆಲ್ಲ ಗರಡಿ ಮಾಡುತಿದ್ದಾರೆ, ಕತ್ತಿ ತಿರುಗಿಸುತಿದ್ದಾರೆ, ಕುದುರೆ ಕಲಿತಿದ್ದಾರೆ! ನಾವೂ ನಮ್ಮೂರಿನಲ್ಲಿ ಹೆತ್ತಿಪ್ಪತ್ತು ಯಾಕೆ ಐವತ್ತು ಕುದುರೆ ತನಕ ತಂದಿವಿ. ಯಾಕೆ ಅಂದರೆ ನಾವೇನು ಹೇಳೋಣ! ಸಂತೆ ಸಂತೆಯಲ್ಲೂ ಎಲ್ಲರೂ ಕೊಂಡುಕೊಂಡರು, ನಾವೂ ಕೊಂಡುಕೊಂಡೆವು’ ಇನ್ನೊಂದು ಮಾತು ತುಟಿಪಿಟಕ್ಕನ್ನಲಿಲ್ಲ.’

‘ಆಯಿತು! ಅವ ಏನು ಕೇಳದ?’

‘ಇಲ್ಲಿ ಆ ಗಡ್ಡಬಿಟ್ಟುಕೊಂಡು ಯತೀಶ್ವರಪ್ಪನವರು ತಿರಗುತ್ತಾರಲ್ಲ! ಅವರು ಯಾರು ಎನ್ನುವುದನ್ನು ಗುರುತುಮಾಡಿ ಕೊಡಬೇಕಂತೆ! ಮಾಡಿ ಕೊಟ್ಟರೆ ನನಗೆ ಉಂಬಳಿ ಕೊಟ್ಟಾರಂತೆ!’

'ಅಲ್ಲವಾ ಮತ್ತೆ ದೇಸದಿಂದ ದೇಸಕ್ಕೆ ಬಂದು ಮೋಸಮಾಡಿ ರಾಜ್ಯ ಕಿತ್ತುಕೊಂಡವರಿಗಲ್ಲವಾ ಮತ್ತೆ ನಾವು ಸಾಯಾ ಮಾಡಬೇಕು? ಅಯ ತಪ್ಪಾ! ಆ ನಮ್ಮಪ್ಪ ದೊರೆಯಾಗೋದು ಇನ್ನೇಟು ದಿನಕಪ್ಪ?'

'ಈ ಉಗಾದಿ ಕಳೆಯಬೇಕು'

'ಬಿಡಪ್ಪ! ಹೋದ ಸಲವೂ ಹಿಂಗೇ ಅಂತಿದ್ದೆ'

'ಇಲ್ಲ ಈ ಸಲ ಕಂಡಿತ!'

'ಏನೋ ನೋಡಪ್ಪ! ಈ ಮೂಲೇಲಿ ಕಾಣ್ತದಲ್ಲ ಆಲದ ಮರ, ಅದಿನ್ನೂ ಬಿಳಲು ಬಿಟ್ಟಿರಲಿಲ್ಲ. ಆಗ ದೊಡ್ಡಗೌಡ ನಿನ್ನ ಇಡುಕೊಂಡು ಬರೋನು. ಆಗ ನೀನಿನ್ನೂ ಕರಾ ಕೂಡ ಹಿಡೀವೊಲ್ಲೆ. ಆಗ ನನಗಾಗಲೇ ಗಡ್ಡಮಿಾಸೆ ಮೂಡ್ತಿದ್ದೋ ನೋಡು. ಆಗ ದೊಡ್ಡ ದೊರೆಗಳ ಕಾಲ. ಆಗಿನ ಕಾಲ್ದೋನು ನಾನು. ಈಗ ಕಣ್ಣೂ ಕೂಡ ನ್ಯಾರವಾಗಿ ಕಾಣೋಕಿಲ್ಲ. ತಲೆ ನಡುಕ ಬಂತು. ಹೋದ ದೊರೆ ಮಗ ಬಂದದ್ದು ಒಂದು ಸಲ ಕಣ್ಣಾರ ಕಂಡು ಸಾಯೋವ ಅಂತ ಬದುಕೀವ್ನಿ ಕಣಪ್ಪ! ಏನೋ ಮುಕ್ಕನ ಆಸೆ ತೀರತದೋ ಇಲ್ಲವೋ ಅಂತ!'

'ಈ ಸಲ ಖಂಡಿತ ತಿಮ್ಮ! ನಮ್ಮ ಕುಲದವರು ಲೆಕ್ಕ ಕೂಡ ತೆಗೆದಿದ್ದಾರೆ, ನಾವು ಇಪ್ಪತ್ತು ಸಾವಿರ ಜನ ಇದ್ದೇವೆ. ನಿಮ್ಮ ಕುಳ ಎಷ್ಟಿದೆ ಬಲ್ಲೆಯಾ, ಹದಿನೈದು ಸಾವಿರ ಇದೆ ಇದರ ಮೇಲೆ ಅವರದೇ ಹತ್ತು ಇದೆ: ಹಿಂದಿನಮ್ಮನವರ ತವರ್ಮನೆಯವರು ಇದ್ದಾರೆ. ಆದರೂ ನೋಡು, ಏನೇ ಆಗಲಿ ಅವರು ಯಾವಾಗಲೂ ಅದೇ ಕೆಲಸಕ್ಕೇಂತ ಸಿದ್ಧವಾಗಿರುವವರು. ನಾವು ಗೀರುವ ಕಡ್ಡಿ ಬಿಟ್ಟು ಕತ್ತಿಗೆ ಬಂದವರು. ಕಳ್ಳೇಟು ಬಿದ್ದೀತು ಅಂತ ತಡೆದಿದ್ದೇವೆ, ಮಳೆ ಹಿಡಿಯೋ ವೇಳೆ ಬಂದರೆ ಗೆದ್ದೆವು. ಇವರ ಬಂಡಿ ಕುದುರೆ ಈ ನಾಡಿನಲ್ಲಿ ಯಾಕಾದಾವು? ಒಬ್ಬೊಬ್ಬ ಒಂದೊಂದು ಮೂಲೇಲಿ ನಿಂತ್ಕೊಂಡು ಬಡಿದು ಬುಡಬೋದು. ಅದಕ್ಕಾಗಿ ಕಾದಿವಿ'

ಆಳುಮಗನು ಮಾತನಾಡಲಿಲ್ಲ. ಗೌಡನು ತಾನೇ ಮಾತನಾಡಿಸಿದನು: 'ಯಾಕೆ ತಿಮ್ಮ? ಮುಂದೆ ಮಾತಾಡದೆ ಕುಂತುಕೊಂಡೆಯಲ್ಲ?'

'ಇಲ್ಲ ಕಣಪ್ಪ! ಆ ಸುದ್ದಿ ನಿನಗೂ ತಿಳೀತೋ ಇಲ್ವೊ ಅಂತ!'

'ಯಾವ ಸುದ್ದಿ?'

'ನಿಮ್ಮ ಬೀಗರ ಸ್ವಾದರಳಿಯ ಬೀರಪ್ಪನ ದುರ್ಗಕ್ಕೆ ಹಿಡಕೊಂಡು ಹೋದರಂತೆ!'

'ನಿಜವಾ?'

'ಸರಿ. ಚಿಕ್ಕಗೌಡನೂ ಬಲ್ಲ. ಊರೋರೆಲ್ಲ ಗುಸಗುಸ ಅಂತವ್ರೆ! ಯಾರಿಗೂ ನಿನ್ನ ಮುಂದೆ ಮಾತಾಡೋ ಎದೆಯಿಲ್ಲ'

ಗೌಡನ ಮುಖವು ಗಂಭೀರವಾಯಿತು. ಕಣ್ಣು ರಳಿತು. ಕೈಯು ತಾನಾಗಿ ಮೀಸೆಯನ್ನು ಹುರಿಮಾಡಿತು. ಗೌಡನು ತಲೆದೂಗುತ್ತ, 'ಇದು ನಿಜವಾದರೆ ನಮ್ಮ ಲೆಕ್ಕಾಚಾರವೆಲ್ಲ ಒಂದು ತಿಂಗಳು ಹಿಂದುಮುಂದಾಯ ತದೆ. ಯಾರು ನಿನಗೆ ಹೇಳಿದವ್ರು?'

'ಗೌಡನ ಆಳುಮಗನಿಗಲ್ಲವಾ ನನ್ನ ಮೊಮ್ಮಗಳ್ನ ಕೊಟ್ಟಿರೋದು? ಅವ ಬಂದು ಇವತ್ತು ಬೆಳಿಗ್ಗೆ ಹೇಳಿದ?'

'ಬೆಳಗಿನಿಂದ ನನಗೆ ಮಾತ್ರ ಯಾಕೆ ತಿಳಿಯಲಿಲ್ಲ?'

'ಆಗಲೇ ಹೇಳಿದೆನಲ್ಲಪ್ಪ? ಯಾರು ನಿನಗೆ ಬಂದು ಹೇಳೋರು?'

'ಹಂಗಂತ ಎಲ್ಲರೂ ಕಂಬಳಿ ಹೊದ್ದುಕೊಂಡು ಕುಂತವ್ರೋ?'

'ಇಲ್ಲ ಕಣಪ್ಪ! ಸಣ್ಣಪುಟ್ಟ ಕೂಡ ದಟ್ಟಕಟ್ಟ ಸೈ ಅಂತ! ನಿಂತವ್ರೆ!'

ಗೌಡನು ಮರು ಮಾತಾಡಲಿಲ್ಲ. ತಟ್ಟನೆ ಎದ್ದನು. 'ತಿಮ್ಮ! ಅಲ್ಲಿ ಯಾರಾದರೂ ಇದ್ದರೆ ಕೂಗು. ನನ್ನ ಕುದುರೆಗೆ ಹಲ್ಲಣ ಹಾಕು ಅನ್ನು' ಎಂದನು.

ಆ ವೇಳೆಗೆ ಸರಿಯಾಗಿ ತೆಂಕಣದಲ್ಲಿ ಕಾವಲಿದ್ದವನು ಒಂದು ಸಿಳ್ಳು ಹಾಕಿದನು. ಸಿಳ್ಳುಕೇಳಿ ಮುಗಿಯಿತು ಎನ್ನುವುದರೊಳಗಾಗಿ ನಾಗಾಲೋಟ ದಿಂದ ಒಂದು ಕುದುರೆಯು ಬರುವುದು ಕೇಳಿಸಿತು. ಇನ್ನಷ್ಟು ಹೊತ್ತಿ ನೊಳಗಾಗಿ ಒಬ್ಬ ಸವಾರನು ಬಹು ರಭಸದಿಂದ ಬಂದು ಗೌಡನಿರುವಲ್ಲಿ

ತಟ್ಟನೆ ಇಳಿದನು. ಒಂದು ಚಿಟಿಕೆ ಹೊಡೆಯುವಷ್ಟರೊಳಗಾಗಿ ಗೌಡನನ್ನು ಗುರ್ತಿಸಿ, 'ಗೌಡರೆ! ನಾನು ಬೈರಾಗಿ! ರಾಜಭಟರು ಓಡಿಸಿಕೊಂಡು ಬರುತ್ತಿದ್ದಾರೆ. ಯಾರನ್ನಾದರೂ ಕುದುರೆಯ ಮೇಲೆ ಕುಳ್ಳಿರಿಸಿ ಓಡಿಸಿ. ಒಂದು ಘಳಿಗೆಯಾದರೆ ಕೆಲಸ ಕೆಟ್ಟೀತು' ಎಂದನು.

ಗೌಡನು ತನ್ನ ಮುಖವನ್ನು ನೋಡುವುದರೊಳಗಾಗಿ ತಿಮ್ಮನು ಸಿದ್ಧವಾದನು. ಬೈರಾಗಿಯು ಅವನ ಚಲನದಿಂದ ಅವನು ಹೊರಡುವುದನ್ನು ಅರಿತು ತನ್ನ ಮೈಮೇಲಿದ್ದ ಕೌದಿಯನ್ನು ತಟ್ಟನೆ ಅವನ ಮೇಲೆಸೆದು ಅವನ ಕಂಬಳಿಯನ್ನು ತಾನು ಕಿತ್ತುಕೊಂಡನು. ತಿಮ್ಮನೂ ಕುದುರೆಯ ಮೇಲೆ ಹಾರಿದನು. ಬೈರಾಗಿಯು ಕುದುರೆಯ ಹತ್ತಿರ ಬಂದು ಕತ್ತನ್ನು ಚಪ್ಪರಿಸಿ ಏನೋ ಹೇಳಿದನು.

ಕುದುರೆಯು ಮತ್ತೆ ನಾಗಾಲೋಟದಿಂದ ಓಡಿತು. ಪಡುವಣ ಕಡೆಗೆ ನುಗ್ಗಿ ಪಳವಿನೊಳಗೆ ಕುದುರೆಯು ಮಾಯವಾಗುವುದರೊಳಗಾಗಿ ಇನ್ನಿಬ್ಬರು ಶಸ್ತ್ರಧಾರಿಗಳಾದ ರಾಜಭಟರು ಬಂದರು. ಗೌಡನು ಅವರನ್ನು ಕಂಡು ತನ್ನ ಸ್ವಾಭಾವಿಕವಾದ ದರ್ಪದಿಂದ, 'ಯಾರಲ್ಲಿ?' ಎಂದನು.

ರಾಜಭಟರೂ ದರ್ಪೋದ್ಧತರಾಗಿಯೇ 'ನಾವು, ರಾಜಭಟರು' ಎಂದರು.

'ಗುರುತುಕೊಟ್ಟು ಮುಂದೆ ಹೋಗಿ'

'ಕೇಳುವವರು ಯಾರು?'

'ನಾನು, ನಾಡಗೌಡ!'

ರಾಜಭಟರು ಆ ಮಾತನ್ನು ಕೇಳಿದ ಕೂಡಲೇ ಕೆಳಗಿಳಿದರು; ಬಂದು ತಮ್ಮ ಗುರುತನ್ನು ತೋರಿಸಿದರು. ಗೌಡನೂ ಬಹಳ ವಿಶ್ವಾಸದಿಂದ ಮಾತನಾಡಿಸಿದನು.

'ಏನು ಬಂದಿರಿ?'

'ಈಗೊಬ್ಬನನ್ನು ಹಿಡಿಯಬೇಕೆಂದು ಓಡಿಸಿಕೊಂಡು ಬಂದೆವು. ಅವನ ಕುದುರೆಯು ಬಲು ಚುರುಕಾಗಿದ್ದು ನಮ್ಮ ಕುದುರೆಯನ್ನು ಹಿಂದೆ ಹಾಕಿತು'

'ಹೌದು, ಈಗೊಬ್ಬನು ಹೀಗೆ ಹೋದನು. ಅವನೂ ನಿಮ್ಮಂತೆಯೇ ತಾನೂ ರಾಜಭಟನೆಂದು ಹೇಳಿ ಗುರುತು ತೋರಿಸಿ ಹೋದನು. ಬೆಳಿಗ್ಗೆ ಒಬ್ಬನು ಬಂದು ಯಾವನೋ ಒಬ್ಬ ಕಳ್ಳನನ್ನು ಹಿಡಿಯಬೇಕಾಗಿದೆ ಎಂದು ಹೇಳಿದನು. ನಾನೂ ಅದಕ್ಕಾಗಿ ಊರಿಗೆಲ್ಲ ಹೇಳಿದೆ. ಎಲ್ಲರೂ ಸಿದ್ಧ ವಾಗಿದ್ದಾರೆ. ನಿಮಗೆ ಜೊತೆ ಬೇಕೋ ?'

'ಈಗ ಬಂದವನು ಎತ್ತ ಕಡೆಗೆ ಹೋದನು ?

'ಪಡುವಣ ಕಡೆಗೆ ಈ ಪಳುವಿನೊಳಕ್ಕೆ ಹೋದನು'

'ಒಬ್ಬನೇ ?'

'ಅವನ ಜೊತೆಯಲ್ಲಿ ಇನ್ನಾರೂ ಇರಲಿಲ್ಲ'

ಇಬ್ಬರೂ ಒಬ್ಬನ ಮುಖವನ್ನೊಬ್ಬರು ನೋಡಿಕೊಂಡರು. ಅದೋ ಮರಗಾಡು, ಹಜ್ಜೆ ಹಜ್ಜೆಗೂ ಪೊದೆಗಳು. ಅದರಲ್ಲಿ ಹುಲಿಕರಡಿಗಳೂ ಅಡಗಿರಬಹುದು. ಅಲ್ಲದೆ ಅವನೂ ಸೈನಿಕನೆಂದು ನಾಡಗೌಡನೇ ಹೇಳು ತ್ತಿದ್ದಾನೆ. ಇನ್ನೇಕೆ ಒಡ್ಡಾಟವೆಂದು ಅವರಿಬ್ಬರೂ ಗೌಡನನ್ನು ಬೀಳ್ಕೊಂಡು ಹಿಂತಿರುಗಿದರು.

ಅವರು ದೂರವಾದ ಸಿಳ್ಳು ಕೇಳಿದ ಮೇಲೆ ನಾಡಗೌಡನು ಬಂದು ಬೈರಾಗಿಗೆ ನಮಸ್ಕಾರಮಾಡಿ ಕೇಳಿದನು: 'ಏನು ನಮ್ಮಪ್ಪ ! ಬಂದಿರಿ ?'

'ನಿಮ್ಮನ್ನು ನೋಡುವುದಕ್ಕೇ ಬಂದೆ ಗೌಡರೇ !'

'ಇನ್ನಾರನ್ನಾದರೂ ಕಳುಹಿಸಬಾರದಾಗಿತ್ತಾ ? ನಿಮ್ಮನ್ನು ಹಿಡಿದು ಹಾಕಬೇಕೂ ಅಂತ ಈ ಬೊಡ್ಡೀ ಮಕ್ಕಳು ಕಾದವ್ರೆ ? ಈಗ ಎಲ್ಲಾದರೂ ಒಂದು ಕಡೆ ಅಡಗಿಕೊಂಡಿರಬಾರದೇ ? ಹುಲಿ ಕೂಡ ಎಲ್ಲಾದರೂ ಯಾವಾಗಲಾದರೂ ಅಡಗಿಕೊಂಡೀತು ? ನೀವು ಅಡಗಿರೋಕಿಲ್ಲವಲ್ಲ ?'

'ಹಾಗಲ್ಲ ಗೌಡರೇ ! ಎಣ್ಣೆ ಬರುವಾಗಲೇ ಕಣ್ಣು ಮುಚ್ಚಿಕೊಳ್ಳು ವುದು ? ದಿನದಿನವೂ ಇವರ ಮುಂದೆಯೇ ಹೋಗಿಬರುತ್ತಿರಲಿಲ್ಲವೇ ? ಈ ದಿನ ಅದೇನೋ ಅನುಮಾನಬಂದು ಹಾಗೇ ಹಿಂದೆ ಬಂದರು. ಅಷ್ಟೇ !'

'ಅದೇಕೆ? ನೀವು ಕಳ್ಳಹಾದೀಲಿ ಬರಲಿಲ್ಲವೇ?'

'ಅದರಿಂದಲೇ ಅನುಮಾನ ಬಂದುದು. ದಿನವೂ ಏನಾದರೂ ವೇಷ ಹಾಕಿಕೊಂಡು ರಾಜಮಾರ್ಗದಲ್ಲಿ ಬಂದು ಈ ಭಟರ ಗುಂಪು ಕಣ್ಮರೆಯಾದ ಮೇಲೆ ಕುದುರೆ ಹತ್ತಿ ಬರುತ್ತಿದ್ದೆ. ಈ ಸಲ ಅವಸರ ವೆಂದು ಕುದುರೆಯ ಮೇಲೆ ಕಳ್ಳಹಾದಿಯಲ್ಲಿ ಬರುತ್ತಿದ್ದೆ. ಇವರು ಸಿಕ್ಕಿ ದರು. ಅವಸರದಲ್ಲಿ ಗುರುತು ತಪುವುದು ಮರೆತಿದ್ದೆ. ಅದರಿಂದ ದೌಡಾ ಯಿಸಿದೆ. ಅವರೂ ಹಿಂದೆಯೇ ಬಂದರು. ಸುಮಾರು ಅರ್ಧ ಝಾವದ ಹೊತ್ತು ಅವರೂ ಸವಾರಿಮಾಡಿಕೊಂಡು ಬಂದಿದ್ದಾರೆ. ಇನ್ನಷ್ಟು ಹೊತ್ತಾದರೆ ಅವರೇ ಹೋಗುತ್ತಿದ್ದರು. ಆದರೆ ನನಗೆ ಕೆಲಸವಿದ್ದಿತು. ಅದರಿಂದ ನಾಸಿಲ್ಲಿಯೇ ನಿಂತೆ!'

'ಆಯಿತಪ್ಪ! ಮುಂದೆ?'

'ಈ ದಿನದ ಸಮಾಚಾರ ನಿಮಗೆ ತಿಳಿದಿದೆಯಲ್ಲ! ಆ ಸಂಬಂಧ ವಾಗಿ ನಿಮ್ಮೊಡನೆ ಮಾತನಾಡಬೇಕಾಗಿದೆ'

'ಸಿದ್ಧವಾಗಿದ್ದೇನೆ. ಆಯಿತು. ನನಗೆ ತಿಳಿದಿದೆಯೆಂದು ತಮಗೆ ಹೇಗೆ ತಿಳಿಯಿತು?'

'ನೀವು ಭಟರೊಡನೆ ಹೇಳುವಾಗ ಬೆಳಗಿನಿಂದಲೂ ಸಿದ್ಧವಾಗಿ ದ್ದೇವೆ ಎಂದಿರಿ. ಅದರಿಂದ ತಿಳಿದೇ ಇರಬೇಕೆಂದುಕೊಂಡೆ. ಆಯಿತು. ಈ ವಿಚಾರವಾಗಿ ನೀವೇನು ಮಾಡಬೇಕೆಂದಿರುವಿರಿ?'

'ಹೋಗಿ ಬಿಡಿಸಿಕೊಂಡು ಬರಬೇಕೆಂದಿದ್ದೇನೆ'

'ಅದು ಕೂಡದು ಎಂದು ಹೇಳಲು ನಾನೇ ಬಂದೆ. ಈಗ ಇದನ್ನೇ ಮೂಲವಾಗಿಟ್ಟುಕೊಂಡು ಇನ್ನೊಂದು ಕಾರ್ಯವನ್ನು ಸಾಧಿಸಬೇಕು. ನಿಮ್ಮಲ್ಲಿ ಅನೇಕರು ಪಲ್ಲವರೊಡನೆ ಸಾಮಸಂಧಾನ ನಡೆಯಿಸಿ ಹೋದ ರಾಜ್ಯವನ್ನು ಗಳಿಸಬಹುದೆಂದುಕೊಂಡಿದ್ದಾರೆ. ಅದು ಹಾಗಲ್ಲವೆಂದು ತಿಳಿಯಿಸಲು ಈಗ ಒಂದು ಸಾಧನವು ದೊರಕಿದೆ. ನೀವು ಸಂಧಿವಿಗ್ರಹಿಯ ಬಳಿಗೆ ಹೋಗಿ ಅವನನ್ನು ಗೌಡನ ಬಿಡುಗಡೆಗಾಗಿ ಪ್ರಾರ್ಥಿಸಿದಂತೆ ನಟಿಸಿ. ಅವನು ಬಿಡುವುದಿಲ್ಲ. ಬಂಧುವೊಬ್ಬನ ಬಂಧನದಿಂದ ಉಂಟಾದ ಆಕ್ರೋಶ

ದಿಂದ ಎರಡು ಗಂಡುಮಾತನಾಡಿ. ವೃಥಾ ಕೋಪದ ಆಟೋಪದಂತಿರುವ ಆ ಮಾತುಗಳನ್ನು ಕೇಳಿ ನಂದಿವರ್ಮನು ಅಪ್ರತಿಮವಾದ ತನ್ನ ಅಧಿಕಾರ ಶಕ್ತಿಯ ಪ್ರಭಾವಕ್ಕೆ ತಾನೇ ಸಂತೋಷಪಟ್ಟುಕೊಳ್ಳುತ್ತ ಮೈಮರೆಯಲಿ. ಅದರಿಂದ ನಮಗೆ ಲಾಭವುಂಟು'

'ಆಯಿತು. ಕತ್ತಿಯ ಮೊನೆಯಿಂದಲೂ ತಲೆಯನ್ನು ತುರಿಸಿಕೊಳ್ಳಬೇಕೆನ್ನುವಿರಲ್ಲಾ? ನಾನು ಇದುವರೆಗೂ ಕಲಿಯದ ಈ ನಾಟಕದ ಮಾತು ಈಗೆಲ್ಲಿಂದ ಕಲಿಯಲಪ್ಪಾ? ಹಾಗೂ ಆಯಿತು ಅನ್ನಿ. ಗೌಡನನ್ನು ಒಂದು ವೇಳೆ ಬಿಡದೆ ಹೋದರೆ?'

'ಬಿಟ್ಟರೂ ಅನುಕೂಲವಾಯಿತು, ಬಿಡದಿದ್ದರೂ ಅನುಕೂಲವಾಯಿತು. ಅವನು ಬಿಡಲಿ-ಬಿಡದಿರಲಿ ಗೌಡನಂತೂ ಈಚೆಗೆ ಬರುವನು'

'ನಾವು ಎಲ್ಲರೂ ಬದುಕಿದ್ದು ಗೌಡನಿಗೆ ಸೆರೆಯೋ?'

'ನಾನು ತಮಗೆ ಹೇಳುವುದಿಷ್ಟೆ? ಚಿನ್ನವೂ ಬೆಂಕಿಯಲ್ಲಿ ಬೇಯುವುದಿಲ್ಲವೇ? ಹಾಗೆ ರಾಜಕಾರ್ಯಕ್ಕೋಸ್ಕರ ಈ ಅಪಮಾನವನ್ನು ಸೈರಿಸಬೇಕು. ನಿನ್ನೆಯ ರಾತ್ರಿಯಲ್ಲಿ ಈ ವಿಷಯ ತಿಳಿದುದು. ಆಗಿನಿಂದಲೂ ನಾವೆಲ್ಲರೂ ಒಂದೇ ಸಮನಾಗಿ ಯೋಚಿಸಿ ಹೀಗೆಂದು ಗೊತ್ತುಮಾಡಿದ್ದೇವೆ. ಇನ್ನೇನು ಹೇಳಲಿ?'

'ಹೂ! ಅಪ್ಪಣೆ! ಹಾಗಾದರೆ ನಾನು ಯಾವೊತ್ತು ಹೋಗಬೇಕು?'

'ಬೆಳಗಾಗುವ ವೇಳೆಗೆ ರಾಜಧಾನಿಯಲ್ಲಿರಬೇಕು?'

'ಮುಂದಿನ ಪ್ರಯತ್ನ?'

'ಈಗ ಶ್ರೀಶೈಲಕ್ಕೆ ರಾಜಕುಮಾರನೇ ಮಾಂಡಲೀಕೇಶ್ವರನಾಗಿ ಬಂದಿದ್ದಾನೆ. ಅವನಿಗೆ ಬೇಟೆಯೆಂದರೆ ಬಹು ಚಪಲ. ಅವನು ಬೇಟೆಗೆಂದು ಹೊರಟಾಗ ನಮ್ಮ ರಹಸ್ಯ ಸ್ಥಾನಗಳು ಸಿಕ್ಕಿಬಿಟ್ಟರೆ ನಮ್ಮ ಪ್ರಯತ್ನಗಳೆಲ್ಲ ವಿಫಲವಾದಾವು. ಅದರಿಂದ ಆದಷ್ಟು ಬೇಗ ಆಗಬೇಕು!'

ಇಷ್ಟುಹೇಳಿ ಬೈರಾಗಿಯು ತಾನು ಬಂದಂತೆಯೇ ಅವಸರವಸರವಾಗಿ ಮರೆಯಾದನು. ಗೌಡನು ಊರಕಡೆ ಹೊರಟನು.

—o—

## ಇಪ್ಪತ್ತೊಂಭತ್ತನೆಯ ಪ್ರಕರಣ

ಬೆಳಗಿನ ಎರಡು ಝಾಮುವಾಗಿದೆ. ಮಾಂಡಲಿಕ ನಂದಿವರ್ಮನು ತನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬಂದು ತನ್ನ ಆಸ್ಥಾನದಲ್ಲಿ ಕುಳಿತುಕೊಳ್ಳುತ್ತಿದ್ದ ಹಾಗೆಯೇ ನಾಡಗೌಡ ಕರಿಯನಾಯಕನು ಬಂದಿರುವುದಾಗಿ ಅರಿಕೆಯಾಯಿತು. ಮಾಂಡಲಿಕನು ಆಶ್ಚರ್ಯಪಟ್ಟು, 'ಕರೆದುಕೊಂಡು ಬಾ' ಎಂದನು.

ನಾಡಗೌಡನು ತನ್ನ ಅಧಿಕಾರ ಸೂಚಕವಾದ ತಲೆಯ ಪಾಗು, ನಡುಕಟ್ಟು, ಹಲಗೆಕತ್ತಿಗಳನ್ನು ಧರಿಸಿದ್ದನು: ತಿದ್ದಿದ ಹಾಗೆ ಮೂರೆಳೆಯ ವಿಭೂತಿಯನ್ನಿಟ್ಟು ತಂಬುಲದ ಉಂಡೆಯನ್ನು ದವಡೆಯಲ್ಲೊತ್ತಿಕೊಂಡಿದ್ದನು. ಸಚಿವನೂ ಗೌಡನನ್ನು ಗೌರವದಿಂದ ಆದರದಿಂದ ಬರಮಾಡಿಕೊಂಡು ಆಸನದಲ್ಲಿ ಕುಳ್ಳಿರಿಸಿದನು.

ಕುಶಲ ಪ್ರಶ್ನೆಯಾದನಂತರ ನಂದಿವರ್ಮನೇ ವಿಶ್ವಾಸದಿಂದ ಕೇಳಿದನು: 'ಇದೇನು? ನಾಡಗೌಡರು ಇಲ್ಲಿಯವರೆಗೂ ದಯಮಾಡಿದುದು?'

ಗೌಡನು ಪ್ರಯತ್ನಪುರಸ್ಸರವಾಗಿ ನಗುತ್ತ 'ಮಹಾಸ್ವಾಮಿಯವರ ರಾಜನೀತಿಯ ಫಲ!' ಎಂದನು.

ನಂದಿವರ್ಮನು ತಿಳಿದರೂ ತಿಳಿಯದಂತೆ ನಟಿಸುತ್ತ ಕೇಳಿದನು: 'ಏನದು?'

ಗೌಡನೂ ತಡೆತಡೆದು ಹೇಳಿದನು: 'ನಮ್ಮ ಬೀಗ ಬೀರಗೌಡರನ್ನು ದುರ್ಗದವರು ಹಿಡಿದುಕೊಂಡು ಹೋದರೆಂದು ನಿನ್ನೆಯ ಸಂಜೆ ತಿಳಿಯಿತು. ಆ ವಿಚಾರವಾಗಿ ಮಹಾಸ್ವಾಮಿಯವರನ್ನು ಕಾಣಲೆಂದು ಬಂದೆ'

'ಆ ವಿಚಾರವಾಗಿಯೇ? ತಮ್ಮ ಅಭಿಪ್ರಾಯವೇನು?'

'ಪ್ರಭು! ಹಿಂದು ಮುಂದು ತಿಳಿಯದೆ ನಾನೇನು ಹೇಳಲಿ?'

'ಅದೇನು ಅಷ್ಟು ಹೆಚ್ಚಿಲ್ಲ. ಇರುವುದಿಷ್ಟೆ! ಆ ಗೌಡರು ರಾಜಧಾನಿಯ ಸಮೀಪದ ನಾಡಿನವರು. ಅಲ್ಲದೆ ಅವರ ಗಡಿಯು ಕಳೆದಕೂಡಲೇ ರಾಜಧಾ

ನಿಯ ಗಡಿಯು ಆರಂಭವಾಗುವುದು. ಅದರಿಂದ ಅವರ ನಾಡಿನಲ್ಲಿ ಆಗುವ ಹೆಚ್ಚು ಕಡಿಮೆಗಳನ್ನು ನಾವು ಗಮನವಿಟ್ಟು ನೋಡುವುದು ಸ್ವಾಭಾವಿಕವು. ಈಗ ಆರು ತಿಂಗಳಿಂದೀಚೆಗೆ ಅವರ ಬಳಿಗೆ ಅಜ್ಞಾತಕುಲಗೋತ್ರರಾದವರು ಬಂದು ಹೋಗುವುದು ಹೆಚ್ಚಿದೆ. ಆಳುಗಳಿಂದ ಈ ರಹಸ್ಯವನ್ನು ಭೇದಿಸಲಾಗದಿರಲು ನಾವೇ ಸ್ವಂತವಾಗಿ ಹೇಳಿಕಳುಹಿಸಿದುದಾಯಿತು. ನಮ್ಮೊಡನೆಯೂ ಅವರು ರಹಸ್ಯವನ್ನು ಬಿಚ್ಚಿ ಹೇಳಲಿಲ್ಲ. ಆದರಮೇಲೆ ಗೂಢಚಾರರನ್ನಿಟ್ಟು ಅನುಮಾನವಿದ್ದವರು ಬಂದ ಸಮಯವನ್ನು ಕಾಯ್ದು ಅವರ ಅರಮನೆಯನ್ನು ಮುತ್ತಿದುದಾಯಿತು. ಸಂಶಯಾಸ್ಪದರು ಒಳಗೆ ಎಲ್ಲಿಯೂ ಇರಲಿಲ್ಲ'

'ಅಂದರೆ ಅರಮನೆಯೆಲ್ಲವನ್ನೂ ಹುಡುಕಿದರೆ?'

'ಇಲ್ಲ. ಬೀರಗೌಡರು ಶಿವಪೂಜೆಯಲ್ಲಿದ್ದರು. ಅವರು ಬರುವುದು ಹೊತ್ತಾಯಿತು. ರಾಜಭಟರು ಅಂಗಳದಲ್ಲಿ ಕಾದಿದ್ದರು. ಅವರೇ ಬಂದು ಭಟರನ್ನು ಕರೆದುಕೊಂಡು ಹೋಗಿ ಅರಮನೆಯೆಲ್ಲ ತೋರಿಸಿದರು. ನಮ್ಮ ಪ್ರಶ್ನೆಗೆ ಅವರು ಸಮಾಧಾನಕರವಾದ ಉತ್ತರವನ್ನು ಕೊಡಲಿಲ್ಲ. ಅದರಿಂದ ರಾಜಾಜ್ಞೆಯಂತೆ ಅವರನ್ನು ಹಿಡಿಯಲಾಯಿತು'

'ಅವರು ಈ ವಿಷಯದ ಹದಿನಾರು ನಾಡಗೌಡರಲ್ಲಿ ಒಬ್ಬರೆಂಬುದನ್ನು ತಮಗೆ ನೆನೆಪು ಕೊಡಬೇಕಾಗಿಲ್ಲ. ಉಳಿದ ಗೌಡರೆಲ್ಲ ಇದರಿಂದ ತಮ್ಮ ಅಪಮಾನವಾಯಿತೆಂದು ತಿಳಿಯುವರು'

'ಕಾರಣವಿಲ್ಲ. ರಾಜಾಜ್ಞೆಯನ್ನು ಪಾಲಿಸಬೇಕಾದುದೇ ಎಲ್ಲರ ಕರ್ತವ್ಯ. ಹಾಗೆ ಪಾಲನೆಯಾಗದಿದ್ದ ಸಂಭವದಲ್ಲಿ ರಾಜಾಜ್ಞೆಯು ನೆರವೇರುವಂತೆ ನೋಡಿಕೊಳ್ಳುವುದು ರಾಜಾಧಿಕಾರಿಗಳ ಕರ್ತವ್ಯ! ನಾಡಗೌಡರಾಗಿದ್ದು ಮುಖಂಡರಾಗಿದ್ದು ನಮಗೆ ಸಹಾಯವಾಗದಿದ್ದರೆ ನಾವೇನೆನ್ನಬೇಕು?'

'ಅಂದರೆ ಅವರು ರಾಜದ್ರೋಹಿಗಳೆಂದು ತಮ್ಮ ಮತವೋ?'

'ಗೌಡರು ಇಂದು ರೇಗಿರುವಂತಿದೆ. ಅದರಿಂದ ಈ ಮಾತನ್ನು ಇಲ್ಲಿಗೇ ಮುಗಿಸೋಣ'

ಗೌಡನು ನಿಜವಾಗಿಯೂ ರೇಗಿಹೇಳಿದನು: 'ಮಹಾಸ್ವಾಮಿ! ಹದಿನಾರು ನಾಡಗೌಡರನ್ನು ಕರೆಯಿಸಿ ಒಳ್ಳೆಯ ಮಾತನಾಡಿ ಶೇಖರವರ್ಮರು ರಾಜ್ಯ

ವನ್ನು ಕಟ್ಟಿದರು. ಅದನ್ನು ತಾವು ಮರೆತಿರಿ. ತಾವು ಮುಗಿಸಿದ ಮಾತನ್ನು ಕತ್ತಿಯ ಮೊನೆಯಿಂದ ಬಿಚ್ಚುವ ತ್ರಾಣವು ಈ ನಾಡಿನಲ್ಲಿಲ್ಲವೆಂದು ತಾವೂ ಮನಗಂಡಿರೇನೋ? ಅದರಿಂದ ಇಂದಿನ ಮಾತು ಬಿರುಸಾಗಿದೆ. ಆಗ ಬಹುದು. ಒಂದು ಮಾತು ಮನದಲ್ಲಿರಲಿ. ಈ ಬನವಾಸಿ ನಾಡಿನವರು ಸೋತು ನಡೆಯುವ ಸ್ವಭಾವದವರು. ಆದರೆ ಮನವೊಮ್ಮೆ ಮುರಿಯಿತೆಂವರೆ ಆಮೇಲೆ ಪ್ರಾಣವನ್ನು ಪಣವಾಗಿಟ್ಟು ನಿಲ್ಲುವರು. ಇದು ತಮಗೆ ತಿಳಿದಿರಲಿ. ಹದಿನಾರು ಗೌಡರಲ್ಲಿ ಒಬ್ಬನು ತಮಗೆ ಸಿಕ್ಕಿದ್ದಾನೆ. ಇನ್ನೊಬ್ಬನು ಇಲ್ಲಿದ್ದಾನೆ. ಇನ್ನು ಹದಿನಾಲ್ಕು ಜನರು ನಮ್ಮಿಬ್ಬರ ಸಂಭಾಷಣೆಯ ಫಲವನ್ನು ಕಾಯ್ದು ಕುಳಿತಿದ್ದಾರೆ. ಇನ್ನು ನನಗೆ ಅಪ್ಪಣೆಯೇ?'

ನಂದಿವರ್ಮನು ಸಣ್ಣ ನಗು ನಕ್ಕು ಹೇಳಿದನು: 'ಈ ಬನವಾಸಿ ನಾಡಿನಲ್ಲಿ ಎಲ್ಲರೂ ಸಿದ್ಧವಾಗುತ್ತಿರುವುದನ್ನು ಸಮ್ರಾಜರ ಅಧಿಕಾರಿಗಳು ಬಲ್ಲರು. ನಾಡವರು ನಂಬುಗೆಯವರು ರಾಜಭಕ್ತಿಯುಳ್ಳವರು ಎಂದು ನೆಚ್ಚಿ ಸಮ್ರಾಜರು ಅಧಿಕಾರಿಗಳನ್ನು ಅಂಕೆಯಲ್ಲಿ ಇಟ್ಟಿದ್ದಾರೆ. ಅಧಿಕಾರಿಗಳು ಸಮ್ರಾಜರ ಸೇವೆಗಾಗಿ ಪ್ರಾಣವನ್ನು ಸಹ ಕೊಡಲು ಸಿದ್ಧರಾಗಿದ್ದಾರೆ. ಹಾಗೆಂದು ಅನ್ಯಾಯವನ್ನು ಮಾಡಲು ಎಳ್ಳಷ್ಟೂ ಸಿದ್ಧರಾಗಿಲ್ಲ. ಇದಿಷ್ಟನ್ನು ಮಾತ್ರ ತಮಗೆ ಹೇಳುತ್ತೇನೆ'

'ಮಹಾಸ್ವಾಮಿಯವರು ಆಡುತ್ತಿರುವ ಮಾತಿನ ಬೇರು ಎಲ್ಲೋ ಎರಡಾಳುದ್ದದಲ್ಲಿದೆ. ಅದನ್ನು ಸೋಸುವ ಯತ್ನವನ್ನು ನಾವು ಮಾಡಿಲ್ಲ, ಮಾಡುವುದೂ ಇಲ್ಲ. ಈಚೀಚೆಗೆ ಅಲ್ಲಲ್ಲಿ ಕಳ್ಳತನಗಳು ಹೆಚ್ಚಿವೆ. ಅದರಲ್ಲೂ ಪಡುವಲಿನ ಕಡಲುಗಳ್ಳರ ಹೊಡೆತ ಹೆಚ್ಚಾಗಿದೆ. ಇದರಿಂದ ಅಲ್ಲಲ್ಲ ಅವರಿವರು ಸೇರಿ ಕೊಂಚ ಕೈ ನುರುಗಿಸಿಕೊಳ್ಳುವ ಯತ್ನಮಾಡಿದ್ದಾರೆ. ಅದನ್ನು ತಾವು ಬೇರೆಯಾಗಿ ಎಣಿಸಿದರೆ ನಮ್ಮ ತಪ್ಪಿಲ್ಲ. ಈ ಸಣ್ಣ ನೆಪಕ್ಕಾಗಿ ನಮ್ಮ ಗೌಡರನ್ನು ಹಿಡಿದುದು ಅಷ್ಟು ಸರಿಯಲ್ಲ. ಹಾಗೆ ತಮಗೆ ವಿರೋಧವಾಗಿ ನಾವು ಕೈಬಲಿಯಿಸುವುದಾಗಿದ್ದರೆ ಆ ಊರಿನವರು ಸುಮ್ಮನಿರುತ್ತಿದ್ದರೆ? ಇದೆಲ್ಲ ಯೋಚಿಸಿ, ತಾವು ಅವರನ್ನು ಕೂಡಲೇ

ಬಿಡಿಸುವ ಯತ್ನಮಾಡಿದರೆ ಒಳ್ಳೆಯದು. ಇದರ ಮೇಲೆ ದೇವರು ತಮಗೆ ಬುದ್ಧಿ ಕೊಟ್ಟ ಹಾಗಾಗಬಹುದು'

ನಂದಿವರ್ಮನಿಗೆ ಒಂದು ಹೊಸಯೋಚನೆ ಬಂದಿತು: 'ಮುದುಕನ ಮಾತು ನಿಜವಿರಬಹುದು. ನಮ್ಮ ಸೇನೆಯು ಬೇಕಾದಷ್ಟಿದೆ ಎಂಬುದನ್ನು ಎಲ್ಲರೂ ಬಲ್ಲರು. ಹೀಗಿರಲು ದ್ರೋಹದ ಯತ್ನವು ನಡೆಯುವುದಿಲ್ಲವೆಂದೇ ನಂಬಬೇಕು. ಆದರೂ ಏನೋ ಹೊಗೆಯಾಡುತ್ತಿದೆಯೆಂಬ ಸಂಶಯವು ಬಲವಾಗುತ್ತಿರಲು, ನಂಬಿ ಕೈಕಟ್ಟಿಕೊಂಡು ಕುಳಿತಿರುವುದೆಂತು? ಇರಲಿ. ಈ ಮುದುಕನನ್ನೇ ಒಂದು ಸನ್ನೆಗೋಲು ಮಾಡಬಾರದು ಏಕೆ?' ಎಂದುಕೊಂಡು ಮತ್ತೆ ಸಾವಧಾನವಾಗಿ ನಗುತ್ತ ಹೇಳಿದನು: 'ಗೌಡರು ಪರಾಕ್ರಮಿಗಳೆಂದು ಕೇಳಿಬಲ್ಲೆ. ಈ ಗಂಡುಮಾತಾಡಿ ಪರಾಕ್ರಮವನ್ನು ತೋರಿಸಿಕೊಳ್ಳಬೇಕಾಗಿರಲಿಲ್ಲ'

'ಕತ್ತಿಯು ಒರೆಯಲ್ಲಿ ಕೂತು ಮಣ್ಣು ಹಿಡಿದಿದೆ. ಮನೆಯವರು, ನೆಂಟರಿಷ್ಟರು, ದುರ್ಗದಲ್ಲಿ ಕೋಳಹೊತ್ತು ಕೊಳೆಯುತ್ತಿದ್ದಾರೆ. ಈಗ ಮಹಾಸ್ವಾಮಿಯವರ ಎದುರಾಗಿ ಎರಡು ಗಂಡುಮಾತಾಡಿ ಬರುವ ಜನ್ಮಕ್ಕಾದರೂ ಗಂಡಾಗುವ ಎಂದು ಬಂದೆ. ನಾನು ಹೇಳಬೇಕು ಎಂದು ಇದ್ದುದು ಹೇಳಿಯಾಯಿತು. ಈಗಲೂ ಬೀರಗೌಡರನ್ನು ಸೆರೆಯಿಂದ ಬಿಟ್ಟು ಗೌಡರ ಮರ್ಯಾದೆ ಪಾಲಿಸಿದರೆ ಒಳ್ಳೆಯದು'

'ಇಲ್ಲದಿದ್ದರೆ?'

'ಅದಕ್ಕೆ ಉತ್ತರ ಕೊಡುವವನು ನಾನಲ್ಲ. ಮಿಕ್ಕ ಹದಿನಾಲ್ಕು ಜನ ಗೌಡರು, ಅವರನ್ನು ಹಿಡಿದು ಬದುಕುವ ಬೇರೆ ಬೇರೆ ಕುಲದ ಒಡೆಯರು. ತಾವು ರಾಜ್ಯಕಟ್ಟಿ ಎರಡುಹತ್ತು ವರುಷವಾಯಿತು. ಇನ್ನೂ ಬೇರು ಭದ್ರವಾಗಿಲ್ಲ, ಈಗಲೇ ದುಡುಕಬಾರದು. ನಾಡಗೌಡರು ನಾವೆಲ್ಲರೂ ಒಂದು ಸೇರುವ ಕಾಲಬಂದಿಲ್ಲ. ಎಲ್ಲರೂ ಮರದ ಕೊಂಬೆಗಳ ಹಾಗೆ ಆಚೆಗೊಂದು ಮೊಕ ಈಚೆಗೊಂದು ಮೊಕ ಮಾಡಿಕೊಂಡಿದ್ದೇವೆ. ಅದರಿಂದ ತಾವು ಅರಸೊತ್ತಿಗೆ ನಡೆಸುತ್ತಿದ್ದೀರಿ. ತಾವು ಬಲವಾದಿರಿ ಎಂದು ನಮ್ಮನ್ನು ಕಡೆಗಾಣಿಸಬೇಡಿ'

'ಆಯಿತು. ಗೌಡರೆ! ತಮ್ಮ ಅಪ್ಪಣೆಯಂತೆಯೇ ಗೌಡರನ್ನು ಬಿಟ್ಟು ಮರ್ಯಾದೆಗಾಗಿ ಕಳುಹಿಸುತ್ತೇವೆ. ಇಬ್ಬರು ಮೂವರನ್ನು ಹಿಡಿಯಲು ನಮಗೆ ತಾವು ಸಹಾಯಮಾಡುವಿರಾ ?'

'ಪ್ರಭು! ತಾವೂ ಬಲ್ಲಿರಿ. ತಮ್ಮಹಾಗೆ ನಾವು ಲೆಕ್ಕಮಾಡಿ ಹೊಡೆಯುವವರಲ್ಲ. ನಮ್ಮದೆಲ್ಲ ಮೊದಲು ಪೆಟು ಆಮೇಲೆ ಮಾತು. ಹಿಡಿಯಬೇಕು ಎಂದರೆ ಬನ್ನಿ. ನಿಮ್ಮ ಜೊತೆಗೆ ನೂರು ಜನ ಬೇಕೆ? ಸಾವಿರ ಜನ ಬೇಕೆ? ನಾವು ಸಹಾಯ ಮಾಡಬಲ್ಲೆವು. ಅದು ಬಿಟ್ಟು ಅವರನ್ನು ಹಿಡಿ ಇವರನ್ನು ಹಿಡಿಯೆಂದರೆ ಹೇಗೆ? ಯಾವ ಹುತ್ತದಲ್ಲಿ ಯಾವ ಹಾವೋ? ನಾವು ಹೇಗೆ ಬೈರಾಗಿಗಳನ್ನೂ ಸನ್ಯಾಸಿಗಳನ್ನೂ ಹಿಡಿಯುವುದು ?'

ನಂದಿವರ್ಮನು ಒಂದು ಗಳಿಗೆ ಯೋಚಿಸಿ ಹೇಳಿದನು: 'ತಾವು ಹಿಂದಿನ ಅರಸರ ಪುರೋಹಿತ ವೀರಶರ್ಮರನ್ನು ಬಲ್ಲಿರಿ ಅಲ್ಲವೆ ?'

'ನಾನು ಕಾಣೆನೆ ?'

'ಮಂತ್ರಿ ಷಡಾನನಶರ್ಮ, ದಳವಾಯಿ ನರಸಿಂಹದತ್ತರನ್ನೂ ಬಲ್ಲಿರಿ?'

'ಬಲ್ಲೆ. ಅವರು ಈಗ ಎಲ್ಲಿದ್ದಾರೆ? ಅವರು ಹೋಗಿ ಎಷ್ಟೋ ವರುಷವಾಯಿತು'

'ಇಲ್ಲ, ಅವರು ಬದುಕಿದ್ದಾರೆ, ಆರು ವರ್ಷದ ಹಿಂದೆ ಅವರನ್ನು ಕಂಡವರುಂಟು'

'ಏನೋ? ಅದನ್ನು ನಾನು ಕಾಣೆ. ಅವರಿದ್ದರೆ ತಾನೇ ಏನು? ಹಿಂದಿನ ವಂಶದ ಅಂಕುರವೊಂದಿದ್ದರೆ ಅವರಿದ್ದರೂ ಸಾರ್ಥಕ! ಅದಿಲ್ಲದಿದ್ದರೆ ಅವರೆಲ್ಲ ಹಲ್ಲಿಲ್ಲದ ಹುಲಿ. ಮಾತು ಬಂತೆಂದು ಅರಿಕೆಮಾಡುತ್ತೇನೆ. ವೀರಶರ್ಮ ಷಡಾನನಶರ್ಮರು ಬದುಕಿದ್ದರೂ ತಾವು ಇಲ್ಲಿ ಯಾರ ಜೊತೆಯಲ್ಲೂ ಆ ಸುದ್ದಿಯನ್ನೇ ಹೇಳಬಾರದು. ಅವರಿದ್ದಾರೆ ಅಂದರೆ ಇಲ್ಲಿನ ಜನವೆಲ್ಲ ಎಳೆಸೇರಿಸಿ ಹೊಸೆದ ಹಾಗಾದೀತು'

ನಂದಿವರ್ಮನಿಗೆ ಯೋಚನೆಯಾಯಿತು: 'ತನ್ನ ಸಂಶಯವನ್ನು ಪೂರ್ತಿಯಾಗಿ ಈ ವೃದ್ಧನೊಡನೆ ಹೇಳಿದರೆ ಹೇಗೋ? ಬಿಟ್ಟರೆ ಹೇಗೋ'

ಎಂದು ಮನಸ್ಸು ಬಹು ಕ್ಷುಬ್ಧವಾಗಿ, ಕೊನೆಗೆ, ' ಈ ವಿದೇಶೀ ನೀಲಕಂಠ ಗುಪ್ತನ ವಿಚಾರವಾಗಿ ಜನರು ಏನೇನು ಹೇಳಿಕೊಳ್ಳುತ್ತಾರೆ? ' ಎಂದು ಕೇಳಿದನು.

ಮುದುಕನು ಬಲು ಎಚ್ಚರಿಕೆಯಿಂದ ಹೇಳಿದನು: ' ನಾನು ತಿಳಿದುದರಲ್ಲಿ ಅವನು ಒಳ್ಳೆಯವ, ದೇವರು ದಿಂಡರು ಅಂದರೆ ಭಯ ಭಕ್ತಿ, ನಿಗರ್ವಿ, ಜನರಿಗೆ ಉಪಕಾರಮಾಡುತ್ತಾನೆ'

' ಅವನ ವಿಚಾರದಲ್ಲಿ ಜನರ ಅಭಿಪ್ರಾಯವು ಹೇಗಿದೆ?

' ಅದು ಹೇಳುವುದಕ್ಕಾಗುವುದಿಲ್ಲ. ಕೆಲವರು ಅವನ ಐಶ್ವರ್ಯಕ್ಕಾಗಿ ಮೆಚ್ಚಿಕೊಂಡಿದ್ದಾರೆ. ಕೆಲವರು ಅವನ ಒಳ್ಳೆಯತನಕ್ಕೆ ಮೆಚ್ಚಿದ್ದಾರೆ. ಅಂತೂ ಒಂದಲ್ಲ ಒಂದು ತೆರದಿಂದ ಎಲ್ಲರೂ ಒಪ್ಪಿರುವರೆಂದೇ ಹೇಳಬೇಕು'

' ಅವನನ್ನು ಹಿಡಿಯುವದಕ್ಕೆ ಉಪಾಯವುಂಟೆ? '

' ಉಂಟು '

' ಏನು? '

' ಧಾರಾಳವಾಗಿ ಹೇಳಲೆ? '

'ಧಾರಾಳವಾಗಿ ಹೇಳಿ'

' ಹುಡುಗ ಲಕ್ಷಣವಾಗಿದ್ದಾನೆ. ಸಮ್ರಾಜರ ಮಗಳನ್ನು ಕೊಡಿಸಿ ಮದುವೆಮಾಡಿ. ಅವನು ಸುಲಭವಾಗಿ ಸಿಕ್ಕುತ್ತಾನೆ '

'ಅದಷ್ಟು ಸುಲಭವಲ್ಲ. ಪಲ್ಲವರು ಅಶ್ವತ್ಥಾಮನ ವಂಶದವರು. ಅವರು ಬ್ರಾಹ್ಮಣರೂ ಕ್ಷತ್ರಿಯರೂ ಬಿಟ್ಟು ಇನ್ನೊಂದು ಜಾತಿಗೆ ಹೆಣ್ಣು ಕೊಡುವುದಿಲ್ಲ'

' ಮಹಾಸ್ವಾಮಿ! ಬೌದ್ಧರು ಬಂದಮೇಲೆ ಅದೆಲ್ಲ ಹೋಯಿತು ಅಂತ ಎಲ್ಲರೂ ಅಂದುಕೊಳ್ಳುವುದು. ಅಪ್ಪುರಮೇಲೆ ನನಗೇನು ಗೊತ್ತು? ಅಲ್ಲದೆ, ನನ್ನ ಸ್ವಭಾವವೇ ಒಂದು ರೀತಿ. ಕುಲ ಗೋತ್ರಗಳು ಗೊತ್ತಿಲ್ಲದವರನ್ನು ನಾನು ನಂಬುವುದೂ ಇಲ್ಲ. ಸದ್ಯದಲ್ಲಿ, ಕೊನೆಯದಾಗಿ ನನಗೇನಪ್ಪಣೆ? '

' ಆಗಲಿ. ಈಗ ಮಾಂಡಲಿಕೇಶ್ವರನನ್ನು ಕಂಡು ಗೌಡರನ್ನು ಬಿಡಿಸಬೇಕೆಂದೇ ಅರಿಕೆಮಾಡುತ್ತೇನೆ'

'ಅಪ್ಪಣೆ'

ಗೌಡನು ಕೈಮುಗಿದು ಹೋದನು. ನಂದಿವರ್ಮನು ಹೊರಗಿಂದ ಕರಣಿಕನನ್ನು ಕರೆಯಿಸಿ, 'ಕೂಡಲೆ ಒಂಟಿಯವರನ್ನು ಕಳುಹಿಸಿ ಬೀರ ಗೌಡನನ್ನು ದುರ್ಗದಿಂದ ರಾಜಧಾನಿಗೆ ಆದಷ್ಟು ಗೋಪ್ಯವಾಗಿ ಕಳುಹಿಸು ವಂತೆ ರಾಯಸವನ್ನು ಬರೆಯಿರಿ' ಎಂದನು.

ಗೌಡನು ಈ ಬಾಗಿಲಿಂದ ಬನವಾಸಿಯನ್ನು ಬಿಟ್ಟನು. ಮತ್ತೊಂದು ಬಾಗಿಲಿಂದ ಒಂಟಿಯವನು ಹೋದನು.

ಒಂಟಿಯು ಅರ್ಧಮಾರ್ಗದಲ್ಲಿ ಸತ್ತು ಬೀಳುವುದೆಂದು ನಂದಿವರ್ಮ ನಿಗೆ ಹೇಗೆ ತಿಳಿಯಬೇಕು ?

———:———

## ಮೂವತ್ತನೆಯ ಪ್ರಕರಣ

ಶ್ರೀಶೈಲದಲ್ಲಿ ಈಗ ನಿತ್ಯೋತ್ಸವ. ಹೊಸ ಮಾಂಡಲಿಕೇಶ್ವರರು ಬಂದಿ ದ್ದಾರೆ. ನಗರದಲ್ಲಿ ಶ್ರೀಮಂತರು ವಿದ್ವಾಂಸರು ಆದಿಯಾಗಿ ಗೌರವಸ್ಥ ರೆನ್ನಿಸಿಕೊಂಡ ಸರ್ವರೂ ಮಾಂಡಲಿಕೇಶ್ವರನ ದರ್ಶನಕ್ಕೆ ತಹತಹ ಪಡು ತ್ತಿದ್ದಾರೆ. ಶ್ರೀಶೈಲ ವಿಷಯವು (ದೇಶ) ರಾಜಭಕ್ತಿಯಲ್ಲಿ ಅನುಪಮವಾದುದು ಎಂದು ಕೀರ್ತಿಪಡೆದುದು. ಹಿಂದಿನ ಅರಸರಾದ ಬಾಣರು ರಾಜ್ಯವನ್ನು ಗೆದ್ದುಕೊಳ್ಳಬೇಕೆಂದು ಮಾಡಿದ ಪ್ರಯತ್ನವು ಅದೇ ದೇಶದವರಿಂದಲೇ ವಿಫಲವಾದ ಮೇಲಂತೂ ಸಮ್ರಾಜರಿಗೆ ಆ ಪ್ರಾಂತ್ಯದಮೇಲೆ ಬಹಳ ಪ್ರೀತಿ. ಅಲ್ಲಿಗೆ ಈಶ್ವರರಾಗಿ ಹೋಗುವವರು ಯಾವಾಗಲೂ ರಾಜ ಸಂಬಂಧಿಗಳೇ ! ಈ ಸಲವಂತೂ ಸ್ವಯಂ ರಾಜಕುಮಾರನೇ ಈಶ್ವರನಾಗಿ ಬಂದಿದ್ದಾನೆ. ರಾಜಭಕ್ತರು ಆತನ ದರ್ಶನಮಾಡಿ ತಮ್ಮ ರಾಜಭಕ್ತಿಯನ್ನು ಪ್ರದರ್ಶನ ಮಾಡಬೇಕೆಂಬ ಕುತೂಹಲದಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಿದ್ದಾರೆ. ರಾಜಕುಮಾರನಿಗೆ ದಿನದಿನವೂ ಔತಣ. ಶ್ರೀಶೈಲದಲ್ಲಿ ದಿನದಿನವೂ ಹಬ್ಬ.

ಈ ವೇಳೆಗೆ ಉತ್ತರದೇಶದ ದೊಂಬರು ಬಂದಿದ್ದಾರೆ. ಅವರು ಕಾಸು ಆಣೆಗಳಿಗೆ ಆಟವಾಡಿದವರಲ್ಲ. ಏನಿದ್ದರೂ ರಾಜಾಸ್ಥಾನಗಳಲ್ಲಿ ಶ್ರೀಮಂತರ

ಆಶ್ರಯದಲ್ಲಿ ತಮ್ಮ ನೈಪುಣ್ಯವನ್ನು ತೋರಿಸುವುದು. ಇದು ಅವರ ಪದ್ಧತಿ. ಅವರಿಗೆ ಉತ್ತರದೇಶದ ಅರಸರು ಮಾನ್ಯಗಳನ್ನೂ ಕೊಟ್ಟಿರುವರಂತೆ. ಅವರು ರಾಮೇಶ್ವರದ ಯಾತ್ರೆಗೆ ಹೊರಟಿರುವರು. ಶ್ರೀಶೈಲೇಶ್ವರನ ದರ್ಶನಕ್ಕೆಂದು ಬಂದವರು ಹಾಗೆಯೇ ಮಾಂಡಲಿಕೇಶ್ವರರ ದರ್ಶನಮಾಡಿ ಹೋಗೋಣ ಎಂದು ಇಲ್ಲಿಗೂ ಬಂದಿರುವರು. ಅವರ ಒಂದು ನೂರು ಜನದ ಪರಿವಾರಾದಿಗಳಿಂದ ಅವರ ಯೋಗ್ಯತೆಯನ್ನು ಗೊತ್ತುಮಾಡುವುದಾದರೆ ಅವರು ಅಸಾಮಾನ್ಯರೆಂದೇ ಹೇಳಬೇಕು.

ಯಥಾ ಕಾಲದಲ್ಲಿ ಅವರಿಗೂ ಮಾಂಡಲಿಕರ ದರ್ಶನವಾಯಿತು. ದೊಂಬರ ಗುಂಪಿನ ಯಜಮಾನನು ಇನ್ನೂ ಇಪ್ಪತ್ತೈದು ವರ್ಷದ ಹರೆಯದವನು. ಆ ದೊಂದಿಮೀಸೆಗಳೂ ದಪ್ಪವಾಗಿ ಇಳಿಯಬಿದ್ದ ಹುಬ್ಬುಗಳೂ ಇಲ್ಲದಿದ್ದರೆ ಅವನೂ ಸುಂದರ ಪುರುಷನೆನ್ನಲು ಅಭ್ಯಂತರವಿಲ್ಲ. ಅವನ ಮಾತುಕಥೆಗಳ ರೀತಿ, ಅವನ ಮರ್ಯಾದೆಯ ನಡತೆ, ಇವುಗಳನ್ನು ಕಂಡು ಸಾಮಾನ್ಯವಾಗಿ ಸಿಡುಕನೆನ್ನಿಸಿಕೊಂಡಿದ್ದ ವಿಷ್ಣುಗೋಪನೂ ಮೆಚ್ಚಿಕೊಂಡನು. ಅರಮನೆಯಲ್ಲಿಯೂ ಅವನ ಆಟವಾಗುವುದಾಗಿ ಗೊತ್ತಾಯಿತು.

ಮೂರುದಿನಗಳು ಕಳೆದಮೇಲೆ ದೊಂಬನ ಆಟವಾರಂಭವಾಯಿತು. ಫಾಲ್ಗುನ ಮಾಸ. ಉರಿಬಿಸಿಲು. ಅದರಿಂದ ಸಂಜೆಯ ಇಳುಹೊತ್ತಿನಲ್ಲಿ ಆಟವಾಗಬೇಕಾಗಿ ಗೊತ್ತಾಯಿತು. ಅದರಂತೆ ಸಕಾಲದಲ್ಲಿ ಊರಿನ ಶ್ರೀಮಂತರು, ಸೆಟ್ಟಿಗಳು, ಅಧಿಕಾರಿಗಳು ಮೊದಲಾಗಿ ಎಲ್ಲರೂ ಸೇರಿದ್ದಾರೆ. ಎಲ್ಲರೂ ಉತ್ಸವದ ಸಂತೋಷ ಭಾವದಲ್ಲಿ ಉತ್ಸುಕರಾಗಿ ಕ್ರೀಡಾದರ್ಶನ ಕುತೂಹಲಿಗಳಾಗಿ ಸೇರಿದ್ದಾರೆ. ಎಲ್ಲೆಲ್ಲೂ ಮದುವೆಯ ಮನೆಯ ಸಂಭ್ರಮವಿದೆ.

ದೊಂಬನು ಮೊದಲು ಗಣೆಯಾಟವನ್ನು ಹೂಡಿದನು. ಹಿಂಗಣ್ಣು ಮುಂಗಣ್ಣುಗಳಲ್ಲಿ ಅಸಾಧ್ಯವಾದ ಅದ್ಭುತವಾದ ಚಮತ್ಕಾರವನ್ನು ತೋರಿಸಿದ ಅವನ ಕೃತಿಗಳನ್ನು ಕಂಡು ಸಭಿಕರು ಬೆರಗಾದರು. ಒಮ್ಮೊಮ್ಮೆ ಗಣೆಯನ್ನು ನೆಲವನ್ನು ಮುಟ್ಟುವುದೋ ಎನ್ನುವಷ್ಟು ಬಗ್ಗಿಸಿ ಮತ್ತೆ ಹಿಂದಕ್ಕೆ ಚಿಗಿಯುವನು. ಇನ್ನೊಮ್ಮೆ ಕಪಿಗಿಂತಲೂ ಚಪಲನಾಗಿ ಈ ಗಣೆಯ

ಮೇಲಾಡುತ್ತಿದ್ದವನು ಆ ಗಣೆಗೆ ಹಾರುವನು. ಮತ್ತೊಮ್ಮೆ ಒಂದು ರಟ್ಟೆಯಲ್ಲಿ ಗಣೆಯನ್ನು ಹಿಡಿದುಕೊಂಡು ಮೈಯೆಲ್ಲ ಗಣೆಯ ಸುತ್ತಲೂ ತಿರುಗುತ್ತಿರಲು ಭ್ರಮರಿಯ ವೈಖರಿಯ ವೇಗದಿಂದ ಕೆಳಕ್ಕಿಳಿಯುವನು. ಮತ್ತೆ ತೊಡೆಗಳಿಂದ ಗಣೆಯನ್ನು ಇರುಕಿ ತಲೆಯಡಿಯಾಗಿ ಜೋಲುತ್ತಿರಲು ಕಾಲುಗಳಿಂದಲೇ ಮೇಲಕ್ಕೆ ಹತ್ತುವನು. ಹೀಗೆ ಮೇಲಿನವನು ನಾನಾ ಚಿತ್ರ ವಿಚಿತ್ರಗಳನ್ನು ತೋರುತ್ತಿರಲು, ಅಡಿಯವನು ಆ ಗಣೆಯನ್ನು ಊರುಗೋಲನ್ನು ಲೀಲಾಜಾಲವಾಗಿ ಎತ್ತಿಟ್ಟಂತೆ ಈ ಕಡೆಯಿಂದ ಆ ಕಡೆಗೆ ಚಿಮ್ಮಿಸುವನು. ಇನ್ನೊಬ್ಬನು ಅದನ್ನು ಅಷ್ಟೇ ಸುಲಭವಾಗಿ ಹಿಡಿದು ಅದು ಅತ್ತ ಇತ್ತ ಒಲೆಯದಂತೆಯೇ ಹಿಂದಿರುಗಿಸುವನು.

ಸುಮಾರು ಅರ್ಧಝಾವದಷ್ಟು ಹೊತ್ತು ಆಟವಾಯಿತು. ಆಮೇಲೆ ದೊಂಬನು ತನ್ನ ಕೈಚಳಕವನ್ನು ತೋರಿಸಿದನು. ಅದೂ ಗಣೆಯಾಟದಷ್ಟೇ ಅದ್ಭುತ! ಅಂತೂ ದೊಂಬನು ಎಲ್ಲರ ಮೆಚ್ಚಿಕೆಗೂ ಪಾತ್ರನಾದನು. ಅದು ಅರಮನೆಯ ಮುಂದಿನಾಟವಲ್ಲದಿದ್ದರೆ, ಅಲ್ಲಿ ನೆರೆದವರೆಲ್ಲರೂ ತಮ್ಮ ಸಂತೋಷಕ್ಕನುಗುಣವಾಗಿ ಅವನಿಗೆ ಮೆಚ್ಚುಕೊಟ್ಟಿದ್ದರೆ, ಅವನು ತಲೆ ತಲಾಂತರದವರೆಗೂ ಉಪಭೋಗಿಸಿದರೂ ಸವೆಯದ ಐಶ್ವರ್ಯವು ಅವನ ದಾಗುತ್ತಿದ್ದಿತು.

ಕೈಚಳಕದಾಟಗಳು ಮುಗಿಯುವಷ್ಟರಲ್ಲಿ ಚೆನ್ನಾಗಿ ಸಂಜೆಯಾಯಿತು. ಅಮಾವಾಸ್ಯೆಯ ಮುಂದಿನ ದಿನಗಳು. ಕಾವಳವು ಹೆಚ್ಚು. ಅದರಿಂದ ಅಂದಿನ ಆಟವು ಅಲ್ಲಿಗೇ ಮುಗಿಯಿತು. ದೊಂಬನು ಅಪ್ಪಣೆಯಾದರೆ ಮರುದಿನ ಅಗ್ನಿಸ್ತಂಭ ಮೊದಲಾದ ಐಂದ್ರಜಾಲಿಕ ವಿದ್ಯೆಗಳನ್ನು ತೋರಿಸುವುದಾಗಿ ಅರಿಕೆ ಮಾಡಿದನು. ಮಾಂಡಲಿಕೇಶ್ವರರ ಅಪ್ಪಣೆಯು ದೊರೆಯಿತು.

ಮರುದಿನ ಸಂಜೆಯಾಗುತ್ತಿದ್ದ ಹಾಗೆಯೇ ನಗರದ ಮುಖಂಡರ ಮನೆಗಳಲ್ಲೆಲ್ಲಾ ಊಟಗಳಾಗಿವೆ. ಎಲ್ಲರೂ ಉಟ್ಟು ತೊಟ್ಟು ಸಣ್ಣಗೆ ಸಿಂಗರಿಸಿಕೊಂಡು ತಂಬುಲವನ್ನು ಸೇವಿಸುತ್ತಾ ಅರಮನೆಗೆ ಬರುತ್ತಿದ್ದಾರೆ. ಒಂದು ಝಾವವೆನ್ನುವುದರೊಳಗಾಗಿ ದೊಡ್ಡವರು ಎನ್ನಿಸಿಕೊಂಡವರು ಯಾರೂ ಮನೆಗಳಲ್ಲಿಲ್ಲ. ಎಲ್ಲರೂ ಅರಮನೆಗೆ ಬಂದಿದ್ದಾರೆ. ಬಡವರೂ ಭಾಗ್ಯ

ವಂತರೂ ಅಲ್ಲದಿದ್ದವರೂ ಪ್ರೇಕ್ಷಣಕುತೂಹಲಿಗಳಾಗಿ ಬಂದು ಅರಮನೆಯ ಎದುರು ಬಯಲನ್ನು ಸೇರಿದ್ದಾರೆ. ಅಲ್ಲಲ್ಲಿ ಇರುವ ಕೇವಲ ನಿರ್ಗತಿಕರನ್ನು ಬಿಟ್ಟು ಮಿಕ್ಕವರೆಲ್ಲರೂ ಆಟವನ್ನು ನೋಡುವುದಕ್ಕಾಗಿ ಬಂದಿದ್ದಾರೆ.

ಇಂದು ದೊಂಬನು ಎರಡುಗಣೆಯಾಟವನ್ನು ಹೂಡಿದ್ದಾನೆ. ಈ ಗಣೆಯ ಹತ್ತಿರ ಹತ್ತು ಜನ ಆ ಗಣೆಯ ಹತ್ತಿರ ಹತ್ತು ಜನ ಕುಳಿತಿದ್ದಾರೆ. ಅವರು ಗಣೆಯ ಮೇಲಿರುವ ದೊಂಬನಿಗೆ ಗುರಿಯಿಟ್ಟು ಅಗ್ನಿಶಲ್ಯಗಳನ್ನು ಪ್ರಯೋಗಿಸುವರು. ಆ ದೊಂಬನು ತನ್ನ ಕತ್ತಿಯಿಂದ ಅವುಗಳೆಲ್ಲವನ್ನೂ ಕತ್ತರಿಸಿ ತನ್ನನ್ನು ರಕ್ಷಿಸಿಕೊಳ್ಳುವನು. ಮತ್ತೆ ಎರಡು ಕಡೆಯವರೂ ಏಕಕಾಲದಲ್ಲಿ ಅಗ್ನಿಶರಗಳನ್ನು ಪ್ರಯೋಗಿಸಿ ಈ ಗಣೆಯಿಂದ ಆ ಗಣೆಗೆ ಹೋಗುವ ಮಾರ್ಗವನ್ನು ನಿರೋಧಿಸುವರು. ದೊಂಬನು ಅವುಗಳನ್ನು ಕಡಿದುಕೊಂಡು ಈ ಗಣೆಯಿಂದ ಆ ಗಣೆಗೆ ಹೋಗುವನು. ಇದು ಇಂದಿನ ಆಟ. ಬೆಂಕಿಯ ಕಣೆಗಳು ಚೆನ್ನಾಗಿ ಕಂಡು ಆಟವು ಮನಕ್ಕೆ ಚೆನ್ನಾಗಿ ಹಿಡಿಯಲೆಂದು ಅರಮನೆಯಲ್ಲಿ ಇಂದು ದೀಪಗಳು ಬಹಳ ಕಡಿಮೆ. ನೂರಾರು ದೀಪಗಳು ಇರಬೇಕಾದ ಎಡೆಯಲ್ಲಿ ಇಂದು ಹತ್ತಾರು ದೀಪಗಳು. ಅವೂ ಇರುಳು ಕಾವಲಿಗರ ಹಾಗೆ ಮೊಂಕುಹಿಡಿದಿವೆ.

ಎರಡು ಗಣೆಯಾಟದ ಮುಂಚೆ ಮುಂದಿನ ದೊಡ್ಡಾಟಕ್ಕೆ ನಾಂದಿಯಾಗಿ ಪಂಜಿನಾಟವು ಆರಂಭವಾಯಿತು. ಹಲವರು ಮೈಗೆಲ್ಲ ಪಂಜುಗಗಳನ್ನು ಸುತ್ತಿಕೊಂಡು ಚಕ್ರಾಕಾರವಾಗಿ ತಿರುಗುತ್ತಿದ್ದಾರೆ. ಒಮ್ಮೊಮ್ಮೆ ಚಕ್ರಗಳು ದೂರದಿಂದ ಬಂದು ಒಂದಕ್ಕೊಂದು 'ಢಕ್ಕಾಮುಕ್ಕಿ'ಯಾಗಿ ಮುರಿದುಬಿದ್ದು ಎಲ್ಲವೂ ಒಟ್ಟಿಗೆ ಹೊತ್ತಿಕೊಂಡು ಭಾರಿಯ ಉರಿ ಏಳುವುದು. ಆ ಉರಿಗೆ ಸಿಕ್ಕಿ ಇಬ್ಬರೂ ಭಸ್ಮವಾದರೋ ಎಂದು ಮನವು ಶಂಕಿಸುತ್ತಿರುವಾಗ ಆ ಚಕ್ರಗಳ ನಡುವಿದ್ದವರು ವಿಕಟಾಟ್ಟಹಾಸ ಮಾಡುತ್ತಾ ಎದ್ದು ಓಡಿಬರುವರು. ಇನ್ನೊಮ್ಮೆ ಚಕ್ರಗಳು ಎರಡು ಪಕ್ಷಗಳಾಗಿ ಕೃತ್ರಿಮ ಯುದ್ಧವನ್ನು ನಡೆಸುವುವು. ನೋಡಿದವರಿಗೆ ಪುರಾಣ ಕಾಲದಲ್ಲಿಯ ಆಗ್ನೇಯಾಸ್ತ್ರಗಳ ಹೊಡೆದಾಟವೋ ಎನ್ನಿಸುವುದು. ಕಣ್ಣು

ಇತ್ತ ಈ ಅದ್ಭುತವನ್ನು ನೋಡಿ ಆಶ್ಚರ್ಯಪಡುತ್ತಿರುವಾಗಲೇ ಕತ್ತಲಿನಲ್ಲಿ ಇನ್ನೆಲ್ಲೋ ಒಂದು ಮೂಲೆಯಲ್ಲಿ ಸೊರ್ರೆಂದು ಒಮ್ಮೆ ಅಗ್ನಿವರ್ಷವಾಗುವುದು.

ಹೀಗೆ ವಿವಿಧವಾದ ಆಟಗಳಿಂದ ಜನರೆಲ್ಲರೂ ಆಶ್ಚರ್ಯಪರವಶರಾಗಿರುವಾಗ ಗಣೆಯಾಟವು ಆರಂಭವಾಯಿತು. ಅರಮನೆಯ ಆಳುಕಾಳುಗಳೆಲ್ಲ ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಬಂದಿದ್ದಾರೆ. ಎಲ್ಲರಿಗೂ ಆಟದ ಮೇಲಿನ ಹುಚ್ಚು. ಹುಚ್ಚು ಬಲವಾದಾಗ ಕರ್ತವ್ಯಗಳ ಮೇಲಿನ ಮಮತೆಯು ನಿಲ್ಲುವುದೂ ಉಂಟೆ?

ಆಟವು ಮುಂದುವರಿಯುತ್ತ ಬಂದ ಹಾಗೆಲ್ಲ ಜನರ ಕುತೂಹಲವು ಬಲಿತುಹೋಯಿತು. ಜನರು ಮಗ್ಗುಲಲ್ಲಿದ್ದವರನ್ನು ಇರಲಿ ಮೈ ಮೇಲಿದ್ದ ಬಟ್ಟೆಬರೆಗಳನ್ನೂ ಮರೆಯುವಷ್ಟು ಉಬ್ಬಿ ಹೋಗಿದ್ದಾರೆ. ಡೊಂಬನ ಪರಿವಾರವು ಇದನ್ನೆಲ್ಲ ಕಣ್ಣಿಟ್ಟು ಕಾಯುತ್ತಿದೆ. ಆಟಕ್ಕೆ ಬೇಕಾದ ಸಾಧನಗಳನ್ನು ಸಿದ್ಧಪಡಿಸಿಕೊಳ್ಳುವುದಕ್ಕೆಂದು ಅರಮನೆಯ ಮಗ್ಗುಲಲ್ಲಿ ಮರೆಯಾಗಿ ಒಂದು ಮಣ್ಣಿನ ಕೋಣೆಯನ್ನು ಮಾಡಿದೆ. ಅಲ್ಲಿ ಅವರೆಲ್ಲರೂ ವಿಶ್ರಮಿಸಿಕೊಳ್ಳುತ್ತಿದ್ದಾರೆಂದು ನೋಡುವವರಿಗೆ ಒಂದು ಭ್ರಾಂತಿ. ಆದರೆ ಅವರು ಬಂದಿರುವ ಕೆಲಸ?

ಆಟದಲ್ಲಿ ಒಮ್ಮೆ ಅಗ್ನಿಶರ ವರ್ಷಣವಾಯಿತು. ಬಿಲ್ಲು ಹಿಡಿದು ಬಾಣಗಳನ್ನು ಬೆಂಕಿಯಲ್ಲಿ ಅದ್ದಿ ಹೊಡೆಯುವ ಆ ಬಿಲ್ಲಾಳುಗಳ ಗುರಿಯು ಕೀಳುತರದ್ದಲ್ಲ. ಆದರೂ ಗುಡ್ಡೆಮಾಡಿದ ಬೆಂಕಿಯ ಜ್ವಾಲೆಗಳಂತೆ ಬರುತ್ತಿರುವ ಆ ಬಾಣಗಳನ್ನೆಲ್ಲ ಡೊಂಬನು ಒಮ್ಮೆ ಕತ್ತಿಯಿಂದ ಸವರುವನು. ಅವೆಲ್ಲವೂ ತುಂಡಾಗಿ ಸುರಾಸುರರ ಯುದ್ಧದಲ್ಲಿ ದೇವತೆಗಳು ಏಟು ತಿಂದಾಗ ಮುರಿದು ಕೆಳಗೆ ಬೀಳುವ ಅವರ ಮಣಿಭೂಷಣಗಳಂತೆ ಜಾಜ್ವಲ್ಯಮಾನವಾಗಿ ಕೆಳಗೆ ಬೀಳುವುವು. ನೋಡುವವರ ಎದೆಯು ಕಲ್ಲಾಗಿದ್ದರೂ ಜಲ್ಲೆನ್ನುವಂತೆ ಒಮ್ಮೆ ಅಗ್ನಿಶಲ್ಯಗಳು ಬಂದು ಮುಚ್ಚುವುವು. ಅವು ಹತ್ತಿರಕ್ಕೆ ಬಂದು ಮುಖವನ್ನು ಮುತ್ತಿಡುವುವೋ ಎನ್ನುವಷ್ಟು ಹತ್ತಿರಕ್ಕೆ ಬಂದಾಗ, ಆ ಜ್ವಾಲೆಯ ತೀವ್ರ ಕಿರಣಗಳು ತನ್ನನ್ನು ಮುಸುಕಿ ಬೆಳಗಿಸಿ

ದೇದೀಪ್ಯಮಾನನ್ನಾಗಿ ಮಾಡುವ ವೇಳೆಯಲ್ಲಿ ದೊಂಬನು ಅವುಗಳನ್ನು ಲೀಲಾಜಾಲವಾಗಿ ತುಂಡರಿಸುವನು.

ಗಣೆಯಾಡುತ್ತಿದ್ದ ಹಾಗೆಯೇ ದೊಂಬನು ಅದ್ಭುತವಾಗಿ ಸಿಂಹನಾದ ಮಾಡಿದನು. ಜೊತೆಯಲ್ಲಿಯೇ ಇಪ್ಪತ್ತು ಜನ ಬಿಲ್ಲಾಳುಗಳೂ ಘೀಳಿಟ್ಟರು. ಆ ಸಿಂಹನಾದವು ದಿಕ್ತಟವನ್ನೆಲ್ಲಾ ಮುಚ್ಚಿ ಎಲ್ಲರ ಕಿವಿಗಳನ್ನೂ ತೂತು ಮಾಡಿಕೊಂಡು ಎದೆಗೆ ನುಗ್ಗಿ ಧೈರ್ಯವನ್ನೆಲ್ಲಾ ಡಿಸಿತು. ನೋಟಕರಲ್ಲಿದ್ದ ಹೆಂಗುಸರು ಮಕ್ಕಳು ಹೆಣ್ಣೆದೆಯವರು ಹೆದರಿ ವಿಚಿತ್ರವಾಗಿ ಕೂಗಿಕೊಂಡರು. ಎಂತಹ ಧೀರನಿಗಾದರೂ ಎದೆಯು ಜಗ್ಗೆನ್ನುವಂತಹ ಸನ್ನಿವೇಶ. ಎಂತಹನಿಗಾದರೂ ಮೈ ಜುಮ್ಮೆಂದು ಕಣ್ಣು ತಾನಾಗಿ ಮುಚ್ಚಿಕೊಳ್ಳುವಂತಹ ಪ್ರಸಂಗ.

ಇಂತಹ ಸಂದರ್ಭದಲ್ಲಿ ಇನ್ನೊಮ್ಮೆ ಹಾಗೆಯೇ ಅಭೂತಪೂರ್ವನಾದ ಸಿಂಹನಾದ ಮಾಡಿ ದೊಂಬನು ಈ ಗಣೆಯಿಂದ ಆ ಗಣೆಗೆ, ಆ ಗಣೆಯಿಂದ ಸಜ್ಜೆಯ ಮೇಲಕ್ಕೆ ಚಿಮ್ಮಿದನು. ಚಿಮ್ಮಿ ಬಂದ ದೊಂಬನ ಜೊತೆಯಲ್ಲಿಯೇ ಅಗ್ನಿಶಲ್ಯಗಳೂ ಸಜ್ಜೆಗೆ ನುಗ್ಗಿದುವು. ಅಲ್ಲಿದ್ದವರಲ್ಲಿ ದಳ ದುಳಿಯಾಗಿ ಎಲ್ಲರೂ ಚೆಲ್ಲಾಪಿಲ್ಲಿಯಾದರು. ಈ ದಿಗ್ಭ್ರಾಂತಿಯಲ್ಲಿ ವಿಮೂಢರಾದ ಜನರು ಅತ್ತಿತ್ತ ತಿರುಗುವುದರೊಳಗಾಗಿ ಸಜ್ಜೆಗಿದ್ದ ಹದಿನಾರು ಬಾಗಿಲಿಂದಲೂ ಹದಿನಾರು ಜನರು ಕಾಲಿಂದ ತಲೆಯವರೆಗೂ ಪ್ರಜ್ವಲಿಸುತ್ತಾ ವಿಕಾರವಾಗಿ ಕೂಗಿಕೊಳ್ಳುತ್ತಾ ಉರಿಯುತ್ತಿರುವ ಕೊಳ್ಳಿಗಳನ್ನು ಹಿಡಿದು ನುಗ್ಗಿದರು. ಇದಿಷ್ಟು ಸಾಲದೆ ಅಗ್ನಿ ಗೋಳಗಳು ಸಿಡಿದು ಸಜ್ಜೆಯಲ್ಲವೂ ಒಮ್ಮೆ ಅಗ್ನಿಪುರುಷನ ಆಡುಂಬೊಲವಾದಂತೆ ತೋರಿತು.

ದೊಂಬನು ಈ ಸಮಯವನ್ನು ಸಾಧಿಸಿ ರಾಜಕುಮಾರನನ್ನು ಹೊತ್ತುಕೊಂಡು ಹೋದನು. ರಾಜಕುಮಾರನು ಕತ್ತಿಯನ್ನೆಳೆಯುವುದಕ್ಕೂ ಅವಕಾಶವಿರಲಿಲ್ಲ. ಆ ವಿಭ್ರಾಂತಿಯಲ್ಲೂ ದಳವಾಯಿಯೊಬ್ಬನು ಕತ್ತಿಯನ್ನೆಳೆದನು. ಆದರೆ ಎಳೆದ ಕತ್ತಿಯು ಕೈಯಲ್ಲಿ ನಿಲ್ಲಲಿಲ್ಲ. ಒರೆಯಿಂದ ಪೂರ್ತಿಯಾಗಿ ಹೊರಬೀಳುವುದರಲ್ಲಿ ಆತನ ಕೈಬಿಟ್ಟು ಹಾರಿಹೋಗಿದ್ದಿತು. ಉಳಿದ ಸಚಿವರ ಗತಿಯೂ ಅದೇ ಆಯಿತು. ಇನ್ನು ಅಷ್ಟು ಹೊತ್ತಿನೊಳ

ಗಾಗಿ ಮಾಂಡಲಿಕೇಶ್ವರನೂ ಮಾಂಡಲಿಕರೂ ಅರಮನೆಯ ಬೇರೆ ಬೇರೆಯ ಕೋಣೆಗಳಲ್ಲಿ ಬಂಧಿತರಾಗಿದ್ದರು.

ಇತ್ತ ಅರಮನೆಯಲ್ಲಿ ಹೀಗಾಗುತ್ತಿರಲು ಅತ್ತ ಜನವೆಲ್ಲವೂ ಭಯಭ್ರಾಂತವಾಗಿ ಓಡಲಾರಂಭಿಸಿತು. ಎಲ್ಲಿ ನೋಡಿದರೂ ಭೀತರಾಗಿ ಬುದ್ಧಿಶೂನ್ಯರಾಗಿ ಓಡುತ್ತಿರುವ ಜನ. ಒಮ್ಮೆ ಗುಂಪು ಇತ್ತ ಕಡೆಯಿಂದ ಅತ್ತ ಕಡೆಗೆ ಓಡುವುದು. ಇನ್ನೊಮ್ಮೆ ನಿಷ್ಕಾರಣವಾಗಿ ಬೆಚ್ಚಿಬೀಳುವ ನಿದ್ದೆಯಲ್ಲಿರುವ ಮಗುವಿನಂತೆ, ಅಕಾಂಡವಾಗಿ ಇನ್ನೊಂದು ಕಡೆಗೆ ಓಡುವುದು. ಹೀಗಾಗುತ್ತ ಆಗುತ್ತ ಅರ್ಧ ಝಾವದೊಳಗಾಗಿ ಬಡವರು ಬಗ್ಗರು ಎಲ್ಲರೂ ಮನೆ ಮಠಗಳನ್ನು ಸೇರಿಕೊಂಡು ಬಾಗಿಲುಗಳನ್ನು ಭದ್ರವಾಗಿ ಇಡಿದು ಒಳಗೆ ತರಗೆಲೆಗಳಂತೆ ಪತರಗುಟ್ಟುತ್ತಿದ್ದರು.

ಅರಮನೆಯ ಮುಂದಿದ್ದ ಸೈನ್ಯವು ಮಾತ್ರ 'ಮುಂಜಾಗ್ರತೆ' ಮಾಡಿ ಅಸ್ತ್ರಗಳನ್ನು ಹಿಡಿದು ಮುಂದೆ ನುಗ್ಗಿತು. ಆದರೆ ಅವರ ಪ್ರಯತ್ನವು ಸಫಲವಾಗಿ ಅವರು ಕೀರ್ತಿವಂತರಾಗುವುದು ಅವರ ಹಣೆಯಲ್ಲಿ ಬರೆದಿರಲಿಲ್ಲ. ಅವರು ಅರಮನೆಯ ಬಾಗಿಲ ಬಳಿಗೆ ಬರುವುದರೊಳಗಾಗಿ ಬಾಗಿಲುಗಳು ಮುಚ್ಚಿದುವು. ಸೈನಿಕರು ಬಾಗಿಲುಗಳನ್ನು ಒಡೆದೇ ಒಳ ನುಗ್ಗಬೇಕಾಯಿತು. ಅವರು ಹಾಗೂ ಪ್ರಯತ್ನಮಾಡಿ ಬಾಗಿಲೊಡೆದು ಒಳನುಗ್ಗುವುದಕ್ಕೂ ಹೊರಗಿಂದ ಶತ್ರು ಸೈನ್ಯವೂ ಒಳಗೆ ಬರುವುದಕ್ಕೂ ಸರಿಯಾಯಿತು. ಸಾವಿರ ಕುದುರೆಗಳು ಬಂದು ಅರಮನೆಯನ್ನು ಸುತ್ತಿಕೊಂಡುವು. ಸೈನಿಕರು ಮರುಮಾತನಾಡದೆ ಕೈಯಲ್ಲಿದ್ದ ಕೈದುಗಳನ್ನು ಕೆಳಗಿಟ್ಟು ಸೆರೆಗೊಪ್ಪಿಕೊಳ್ಳಬೇಕಾಯಿತು.

ಒಂದು ಝಾವದೊಳಗಾಗಿ ಕೋಟೆಯೆಲ್ಲವೂ ಕೈವಶವಾಯಿತು. ಸಂಜೆಗೆ ಮುಂಚೆ ಸ್ವತಂತ್ರವಾಗಿ ಪಲ್ಲವರ ಗಡಿನಾಡಿನ ಬಲವಾದ ವನದುರ್ಗವಾಗಿ ಮಾಂಡಲಿಕೇಶ್ವರನ ಸ್ಥಾನವಾಗಿದ್ದ ಶ್ರೀಶೈಲವು ಅರ್ಧರಾತ್ರಿಯೊಳಗಾಗಿ ಪರಾಕ್ರಾಂತವಾಗಿ ಹೋಯಿತು.

———o———

## ಮೂವತ್ತೊಂದನೆಯ ಪ್ರಕರಣ

ವಿಷ್ಣುಗೋಪನು ಸೆಜ್ಜೆಯ ಕೆಳಗಿನ ಕೋಣೆಯೊಂದರಲ್ಲಿ ಬಂಧನದ ಸವಿಯನ್ನು ಅನುಭವಿಸುತ್ತಿದ್ದಾನೆ. 'ಆಕಸ್ಮಿಕವಾಗಿ ಒದಗಿದ ಆಪತ್ತಿಗೆ ಕಾರಣವೇನು? ಅದರ ನಿವಾರಣೆಗೆ ಉಪಾಯವೇನು?' ಎಂದು ಯೋಚಿಸುತ್ತಾ ತನ್ನ ಸದ್ಯದ ದುಸ್ಥಿತಿಯನ್ನೂ ಮರೆತಿದ್ದಾನೆ. ಆ ವೇಳೆಯಲ್ಲಿ ಆ ಕಿರುಮನೆಯ ಬಾಗಿಲು ತೆರೆದು ಒಬ್ಬ ಭಟನು ಸದ್ದಿಲ್ಲದೆ ಪ್ರವೇಶಿಸಿದನು. ಅವನು ಬೇಕೆಂದೇ ಬಾಗಿಲನ್ನು ಕಿರುಗುಟ್ಟಿಸಿದನೋ ಅದು ತಾನಾಗಿಯೇ ಕಿರುಗುಟ್ಟಿತೋ ಅಂತೂ ಬಾಗಿಲು ಸದ್ದಾಗಿ ರಾಜಕುಮಾರನು, 'ಯಾರು?' ಎಂದನು. ಬಂದವನು, 'ಇನ್ನೂ ಆ ಸಿಡುಕು ಹೋಗಲಿಲ್ಲ' ಎಂದು ತನ್ನೊಳಗೆ ತಾನು ನಗುತ್ತಾ ಬಲುಮೆತ್ತಗೆ, 'ಮಹಾಸ್ವಾಮಿಯವರು ಗದ್ದಲಮಾಡಬಾರದು. ನಾನು ಇಲ್ಲಿಗೆ ಬಂದಿರುವುದು ಪ್ರಕಟವಾದರೆ ನನ್ನ ತಲೆಯು ಉಳಿಯುವುದಿಲ್ಲ' ಎಂದನು. ನಂಬುಗೆಯನ್ನು ಹುಟ್ಟಿಸುವ ಆ ಮಾತಿನ ಧ್ವನಿಯಿಂದಲೇ ವಿಷ್ಣುಗೋಪನು ಅವನನ್ನು ಆಪ್ತನೆಂದುಕೊಂಡು ಸಮಾಧಾನಪಟ್ಟನು. ಬಂದವನು ಬಾಗಿಲು ಮುಚ್ಚಿ ನೇರವಾಗಿ ಬಂದು ಮಗ್ಗುಲಲ್ಲಿ ಕುಳಿತು, 'ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಅವಕಾಶವಿದೆ. ತಮ್ಮ ಮೈಮೇಲಿನ ಒಡವೆಗಳನ್ನೆಲ್ಲ ಕೊಟ್ಟರೆ ನಾನು ಕರೆದುಕೊಂಡು ಹೋಗುತ್ತೇನೆ' ಎಂದನು.

ವಿಷ್ಣುಗೋಪನು ಮನಸ್ಸಿನಲ್ಲಿಯೇ ಏನೇನೋ ಗುಣಾಕಾರ ಹಾಕಿ, 'ಇಲ್ಲ, ನಾನು ಹೋಗುವುದಿಲ್ಲ' ಎಂದನು.

ಬಂದವನು, 'ಹಾಗಾದರೆ ಮಹಾಸ್ವಾಮಿಯವರ ಚಿತ್ತ! ಇಲ್ಲಿಯೇ ಇದ್ದು ತಲೆಯೊಪ್ಪಿಸುವುದಕ್ಕಿಂತ ತಪ್ಪಿಸಿಕೊಂಡು ಹೋಗಿ ದುರ್ಗಸಾಧನೆ ಮಾಡುವ ಪ್ರಯತ್ನವು ಒಳ್ಳೆಯದೆಂದು ಅರಿಕೆಮಾಡಲು ಬಂದೆ. ಅದು ತಮಗೆ ಒಪ್ಪಿತವಾಗದಿದ್ದರೆ ನಾನೇನು ಮಾಡಲಿ? ಅಪ್ಪಣೆಯಾದರೆ ಬರುತ್ತೇನೆ' ಎಂದು ಕೈಮುಗಿದು ಹೊರಟನು.

ಮಾತಿನ ರೀತಿ, ಕೈಮುಗಿದ ಭಾವ, ಎಲ್ಲವೂ ಅವನು ಆಪ್ತನೇ ಎಂಬ ನಂಬುಗೆಯನ್ನು ಬಲಿಯಿಸಲು, ವಿಷ್ಣುಗೋಪನು ಅವನನ್ನು ಕರೆದು

ಕೇಳಿದನು: 'ತಪ್ಪಿಸಿಕೊಂಡು ಹೋಗುವುದಿರಲಿ. ನನಗೊಂದು ಮಾತು ಹೇಳಿ ಹೋಗು ಬಾ. ಈ ದೊಂಬನಾರು ಬಲ್ಲೆಯಾ ?'

'ಈ ದೊಂಬನ ಹೆಸರು ಮಯೂರ'

ವಿಷ್ಣುಗೋಪನಿಗೆ ಆ ಹೆಸರು ಕಿವಿಗೆ ಬಿದ್ದೊಡನೆಯೇ ಆ ಅರ್ಧರಾತ್ರಿಯಲ್ಲೂ ಮೈಯೆಲ್ಲ ಬೆವರಿಹೋಯಿತು. ಅಲ್ಲಿ ಕಣ್ಣು ಚೆನ್ನಾಗಿ ಕಾಣುವಷ್ಟು ಬೆಳಕು ಇದ್ದಿದ್ದರೆ ಕಾಂತಿಯೆಲ್ಲವೂ ಹಾರಿಹೋಗಿ ಮಡಿಬಟ್ಟೆಗಿಂತ ಬೆಳ್ಳಗಾದ ಮುಖವನ್ನು ಕಂಡು ಭಟನೂ ಗಾಬರಿಯಾಗುತ್ತಿದ್ದನು. ಭಟನು ಕೈಕಟ್ಟುಗಳನ್ನು ಬಿಚ್ಚುತ್ತಿದ್ದವನು ಕೈಯ ತಣುವನ್ನು ಕಂಡು ತನ್ನೊಳಗೇ ನಗುತ್ತಿದ್ದನು.

'ಮಯೂರ !'

'ಹೌದು. ಮಹಾಸ್ವಾಮಿಯವರು ಅವನನ್ನು ಬಲ್ಲಿರೇನು ?'

'ಬಲ್ಲೆ'

'ಒಂದರಿಕೆ. ಇಲ್ಲಿ ನಾನು ವಿಳಂಬವಾಗಿ ಕುಳಿತು ಮಾತನಾಡಲು ಹೊತ್ತಿಲ್ಲ. ಮೇಲೆ ಅವರೆಲ್ಲರೂ ಸಭೆಸೇರಿದ್ದಾರೆ. ಅಲ್ಲಿ ಆ ಸಭೆಯು ಮುಗಿಯುವುದರೊಳಗಾಗಿ, ಈಗ ತಾನೇ ತಾನಾಗಿರುವ ಈ ಗದ್ದಲವು ಅಡಗುವುದರೊಳಗಾಗಿ ಮಹಾಸ್ವಾಮಿಯವರು ಬಂದರೆ ಕೋಟೆಯಿಂದ ಹೊರಕ್ಕೆ ಕರೆದುಕೊಂಡು ಹೋಗಿ ಬಿಟ್ಟುಬರುವೆನು. ಹೊತ್ತಾದರೆ ಯತ್ನವಿಲ್ಲ'

'ನೀನು ಕೇಳಿದಂತೆ ಒಡವೆಗಳನ್ನೆಲ್ಲ ಕೊಡುವೆನು. ಇನ್ನೂ ಭಾರಿಯ ಬಹುಮಾನ ಕೊಡುವೆನು. ಇಲ್ಲಿ ಹೀಗಾಗಿದೆಯೆಂದು ಶಿಬಿರಕ್ಕೆ ಸುದ್ದಿಮುಟ್ಟಿಸಿ ಬರುವೆಯಾ ?'

'ಶಿಬಿರದಲ್ಲಿ ಏನಿದೆಯೆಂದು ಹೋಗಬೇಕು ? ಇವೊತ್ತು ಮಧ್ಯಾಹ್ನದಿಂದ ಸೈನಿಕರೆಲ್ಲರೂ ಅಲ್ಲಿರುವ ದನ ಕುದುರೆ ಮೊದಲಾಗಿ ಎಲ್ಲರಿಗೂ ವಾಂತಿಭೇದಿಗಳಾಗುತ್ತಿವೆ. ಎಲ್ಲರೂ ಅಸ್ವಾವಸ್ಥೆಯಲ್ಲಿದ್ದಾರೆ'

'ಊರಿನವರು ?'

'ಊರಿನವರು ಏನುಮಾಡಾರು? ಮನೆ ಮನೆಯ ಬಾಗಿಲಲ್ಲೂ ಕುದುರೆಗಳ ಕಾವಲು. ಯಾರಾದರೂ ಈಚೆಗೆ ಬಂದರೆ ಮೊದಲು ಒಳಕ್ಕೆ ಹೋಗೆಂದು ಬಾಯಲ್ಲಿ ಹೇಳುತ್ತಾರೆ: ಕೇಳದಿದ್ದರೆ ಎಳೆದುಕೊಂಡು ಹೋಗಿ ಮನೆಯೊಳಕ್ಕೆ ತಳ್ಳಿ ಬಾಗಿಲೆಳೆದು ಮುಚ್ಚಿಕೊಂಡು ಬರುತ್ತಾರೆ. ಅದಕ್ಕೂ ಸಗ್ಗದೆ ಮುಂಬರಿದರೆ ಕಡಿದು ಹಾಕುತ್ತಾರೆ. ಇಂಥದರಲ್ಲಿ ಜನರೇನು ಮಾಡಿಯಾರು? ಗಣ್ಯರಾದವರೆಲ್ಲ ಅರಮನೆಯಲ್ಲಿ ಸೆರೆಯಾಗಿದ್ದಾರೆ'

'ಹಾಗಾದರೆ........?'

'ಹೌದು. ದುರ್ಗವು ಸಂಪೂರ್ಣವಾಗಿ ಹೋಯಿತು'

ರಾಜಕುಮಾರನು ಮರುಮಾತನಾಡದೆ ಭಟನ ಹಿಂದೆ ಹೊರಟನು. ಭಟನು ಎರಡು ಹೆಜ್ಜೆ ಮುಂದಿಟ್ಟು, 'ಕ್ಷಮಿಸಬೇಕು. ತಾವು ಈ ವೇಷದಲ್ಲಿ ಬಂದರೆ ಯಾರಾದರೂ ಗುರ್ತಿಸಿದರೆ ನನ್ನ ಗತಿಯೇನು? ತಾವೂ ನನ್ನಂತೆಯೇ ಭಟನ ವೇಷ ಹಾಕಿಕೊಂಡು ಬರಬೇಕು' ಎಂದನು. ರಾಜಕುಮಾರನು ಯತ್ನವಿಲ್ಲದೆ ಒಪ್ಪಿದನು. ಭಟನು ಬಾಗಿಲಲ್ಲಿದ್ದವನನ್ನು ಕರೆದು ಏನೋ ಹೇಳಲು ಅವನು ತನ್ನ ಬಟ್ಟೆಬರೆಗಳನ್ನು ತೆಗೆದುಕೊಟ್ಟನು. ತನ್ನ ಅಮೂಲ್ಯ ವಸ್ತ್ರಗಳನ್ನು ತೆಗೆದಿಟ್ಟು ಆ ಬೆವರ ವಾಸನೆಯ ಬಟ್ಟೆಗಳನ್ನು ಹಾಕಿಕೊಳ್ಳುವಾಗ ರಾಜಕುಮಾರನಿಗೆ ಅಸಹ್ಯ ವೇದನೆಯಾಯಿತು. ಆದರೂ ಯತ್ನವಿಲ್ಲದೆ ತೊಟ್ಟುಕೊಂಡನು. ಭಟನು ವಸ್ತ್ರಭೂಷಣಗಳನ್ನೆಲ್ಲ ಗಂಟುಕಟ್ಟಿ ಕಂಕುಳಿಗೆ ಇರುಕಿಕೊಂಡನು. ಇಬ್ಬರೂ ಹೊರಟರು.

ಬಾಗಿಲಿಂದೀಚೆಗೆ ಬಂದು ಭಟನು ಮೆತ್ತಗೆ 'ಮಹಾಸ್ವಾಮಿಯವರು ಈ ಕತ್ತಿಯನ್ನು ನನ್ನಂತೆಯೇ ಹಿಡಿದುಕೊಂಡು ನನ್ನ ಮಗ್ಗುಲಲ್ಲಿಯೇ ಬರೋಣವಾಗಲಿ' ಎಂದನು. ವಿಷ್ಣುಗೋಪನೂ ಹಾಗೆಯೇ ಮಾಡಿದನು. ಅಲ್ಲಿಂದ ನೇರವಾಗಿ ಈಚೆಗೆ ಬರುವುದರ ಬದಲು ಭಟನು ಆ ಕಡೆ ಈ ಕಡೆ ಬಳಸಿಕೊಂಡು ಸೆಜ್ಜೆಯ ಹಿಂದಿನ ಅಂತರ್ಗೃಹದ ಬಳಿಗೆ ಬಂದನು. ದಾರಿಯಲ್ಲಿ, ಈ ಕೊನೆಯಿಂದ ಆ ಕೊನೆಯವರೆಗೂ ಪರ ಪಕ್ಷದವರೇ ತುಂಬಿ ಹೋಗಿರುವುದು ಕಾಣಿಸಿತು. ವಿಜಯೋನ್ಮತ್ತರ ಆ ಅಟ್ಟಹಾಸವನ್ನು ಕೇಳಿ ಹೊರಡುವ ಬಿಸಿಯುಸಿರನ್ನು ತಡೆದು ತಡೆದು ಬಿಡುತ್ತಾ ರಾಜ

ಕುಮಾರನು ಅವನು ಹೋದ ಮಾರ್ಗದಲ್ಲಿ ಹೋದನು. ಅವನಿಗೆ ತಲೆ ತಿರುಗಿಸಿ ಸುತ್ತಲೂ ನೋಡಬೇಕೆಂದಾಸೆ. ಆದರೆ ಎತ್ತ ತಿರುಗಿದರೆ ಯಾರು ಗುರ್ತಿಸುವರೋ ಎಂದು ದಿಗಿಲು. ಸಾಲದೆ, ಏಕೋ ಕೈಯೆತ್ತಿದಾಗ ಕೈಯು ಕಿವಿಯಲ್ಲಿದ್ದ ವಜ್ರದ ಕಡುಕಿಗೆ ತಗುಲಿತು. ಒಡವೆಗಳನ್ನೆಲ್ಲ ತೆಗೆದಾಗ ಅದನ್ನು ಭಟನು ಕೇಳಲಿಲ್ಲ: ತಾನೂ ತೆಗೆಯಲಿಲ್ಲ. ಈಗ ಅದೇ ಮೃತ್ಯುವಾಗಿದೆ. ಅದರಿಂದ ಏನಾದರೂ ಗುರುತು ಸಿಕ್ಕೀತು ಎಂದು ಅಂಜಿಕೆ. ಆದರೂ ಯತ್ನವಿಲ್ಲ.

ಭಟನು ಅಂತರ್ಗೃಹದ ಹತ್ತಿರಕ್ಕೆ ಬಂದು ಬಾಗಿಲಲ್ಲಿದ್ದ ಇಬ್ಬರು ಕಾವಲಿನ ಭಟರಲ್ಲಿ ಒಬ್ಬನ ಹತ್ತಿರಕ್ಕೆ ಹೋಗಿ ಏನೋ ಮಾತನಾಡಿದಂತೆ ಮಾಡಿ ರಾಜಕುಮಾರನ ಬಳಿಗೆ ಬಂದು, ' ಮಹಾಸ್ವಾಮಿಯವರಿಗೆ ಸಭೆಯ ಮಾತುಗಳನ್ನು ಕೇಳುವ ಕುತೂಹಲವುಂಟೋ ? ' ಎಂದು ಪಿಸುಮಾತಿನಲ್ಲಿ ಕೇಳಿದನು. ರಾಜಕುಮಾರನು ತಲೆಯಲ್ಲಾಡಿಸಲು ಅವನನ್ನು ಕರೆದುಕೊಂಡು ಹೋಗಿ ಬಾಗಿಲಲ್ಲಿ ಕಾವಲಿದ್ದ ಭಟರನ್ನು ಅತ್ತಕಡೆ ಕಳುಹಿಸಿ ತಾವಿಬ್ಬರೂ ನಿಂತುಕೊಂಡರು. ಹೊಸಭಟನು ಬಿಗಿದುಕೊಂಡು ಭಟನಿಗಿಂತ ಹೆಚ್ಚಾಗಿ ನಿಂತು ಒಳಗಿನ ಮಾತುಗಳನ್ನು ಕೇಳಿದನು. ಆ ಪಿಸಪಿಸ ಗುಸಗುಸ ಮೊದಮೊದಲು ಸರಿಯಾಗಿ ಕೇಳಿಸದಿರಲು ತನ್ನ ಹೊಸ ಅಧಿಕಾರದ ವ್ಯಾಪ್ತಿಯನ್ನು ಮರೆತು, ತಾನೀಗ ಭಟನೆಂಬುದರ ಅರಿವಿಲ್ಲದೆ ಹೋಗಿ, ಬಾಗಿಲಿಗೆ ಕಿವಿಗೊಟ್ಟು ನಿಂತನು. ಆಗಾಗ ಭಟತನದ ನೆನಪಾಗುವುದು: ಮತ್ತೆ ಅದುವಿಸ್ಮೃತವಾಗಿ ಗಮನವು ಒಳಗಿನ ಸಂಭಾಷಣೆಯಕಡೆ ಹೋಗುವುದು. ಹೀಗಾಗಿ ಅವನೂ ಅರ್ಧ ಅರ್ಧವಾಗಿ ಮಾತು ಕೇಳಿದಂತಾಯಿತು. ಆದರೆ ಆ ಅರ್ಧ ಅರ್ಧವೇ ಅವನ ಪಾಲಿಗೆ ಸಿಡಿಲಿನ ತುಂಡಾಗಲು ಸಾಕಾಗಿದ್ದಿತು.

' ಹಾಗಾದರೆ ಈಗ ಈ ವಿಷಯದ ಮೇಲೆ ಪಲ್ಲವರು ಮತ್ತೆ ಬರುವುದಿಲ್ಲವೆ ? '

' ಬಂದರೂ ಕೆಟ್ಟರು ಬರದಿದ್ದರೂ ಕೆಟ್ಟರು '

' ಅದೆಂತು ? '

' ಇಲ್ಲಿಗೆ ದಂಡೆತ್ತಿ ಬಂದರೆ ನಮಗೆ ಬನವಾಸಿಯು ಸುಲಭವಾಯಿತು.

ನಾವು ಅಲ್ಲಿಗೆ ಹೋದೇವೆಂದು ಅತ್ತಕಡೆಗೆ ಸೈನ್ಯ ಕಳುಹಿಸಿದರೆ ಇತ್ತ ಕಂಚಿಯ ಮೇಲೆ ನಾವು ನುಗ್ಗುವೆವು. ಈಗ ಇವರಿಗೆ ಹೋದುದು ಶ್ರೀಶೈಲವೊಂದಲ್ಲ. ಇದರ ಜೊತೆಗೆ ಇನ್ನೂ ಒಂದು ದುರ್ಗವೂ ಈ ದಿನವೇ ಹೋಯಿತು. ಆದರೆ ಅದು ಬನವಾಸಿಯೋ ಕಂಚಿಯೋ ಅದು ಇನ್ನೂ ತಿಳಿಯದು ಅಷ್ಟೆ!'

'ಹೌದು! ಕಂಚಿಯಿಂದ ಸೇನೆಯನ್ನು ಕದಲಿಸಿದರೆ ಸಾಕು. ಬಡಗಲಿಂದ ನಾವು ರಣಹದ್ದು ಎರಗಿದಂತೆ ಎರಗುವೆವು. ತೆಂಕಲಿಂದ ಚೋಳರೂ ಪಾಂಡ್ಯರೂ ಮುತ್ತುವರು. ಬನವಾಸಿಗೆ ಸೇನೆಯನ್ನು ಕಳುಹಿಸದಿದ್ದರೆ ನಮಗೆ ಅನುಕೂಲವೇ ಆಯಿತು. ಬನವಾಸಿಯನ್ನು ಲೀಲಾಜಾಲವಾಗಿ ಹಿಡಿದುಕೊಳ್ಳುವೆವು'

ರಾಜಕುಮಾರನಿಗೆ ಇನ್ನು ಮುಂದೆ ಕೇಳಲು ಸಹಿಸಲಿಲ್ಲ. ಇನ್ನೊಮ್ಮೆ ಮೈಯೆಲ್ಲ ಬೆವರು ಹಿಡಿದು ಕಣ್ಣು ಕತ್ತಲೆ ಕಟ್ಟಿದಂತಾಯಿತು: 'ಕೈಯಲ್ಲಿ ಒಂದು ಕತ್ತಿಯಿದೆ. ಆದುದಾಗಲಿ ಬಾಗಿಲನ್ನು ಒಡೆದು ನುಗ್ಗಿ ಒಳಗೆ ಮಾತನಾಡುತ್ತಿರುವವರನ್ನು ಸಿಗಿದುಬಿಡಲೆ?' ಎನ್ನಿಸಿತು ಕತ್ತಿಯನ್ನೂ ಎತ್ತಿದನು. ಆದರೆ ಎತ್ತಿದ ಕತ್ತಿಯು ಬಾಗಿಲ ಮೇಲೆ ಬೀಳುವುದರೊಳಗೆ ಕಾವಲಿದ್ದ ಮೊದಲಿನ ಭಟನು ತಟ್ಟನೆ ಹಾರಿ ಅವನ ಕೈಯನ್ನು ಹಿಡಿದುಕೊಂಡು, 'ಆಮೇಲೆ ನನ್ನ ಗತಿ?' ಎಂದನು. ರಾಜಕುಮಾರನು ಆ ಸಿಟ್ಟಿನಲ್ಲಿಯೂ ಅವನು ಹಿಡಿದಿದ್ದ ಪಟ್ಟನ್ನು ಬಿಡಿಸಿಕೊಳ್ಳಲಾರದೆ ಅವನು ಹೇಳಿದಂತೆ ಸುಮ್ಮನಾಗಿ ಅವನ ಹಿಂದೆ ಹಿಂದೆಯೇ ಹೋದನು.

ಅಂತೂ ಬೆಳಗಾಗುವುದರೊಳಗಾಗಿ, ಹಿಂದೆ ಹತ್ತು ಹನ್ನೆರಡು ದಿನದ ಮುಂಚೆ ಶ್ರೀಶೈಲವನ್ನು ವೈಭವದಿಂದ ಮಹಾಮಾಂಡಲಿಕನಾಗಿ ಪ್ರವೇಶಿಸಿದ್ದ ರಾಜಕುಮಾರ ವಿಷ್ಣುಗೋಪನು ಈದಿನ ಭಿಕಾರಿಯ ಭಟನ ವೇಷದಿಂದ ಕಳ್ಳದಿಡ್ಡಿಯಿಂದ ಕೋಟೆಯಿಂದ ಹೊರಬಿದ್ದು ಪಾರಾದನು.

ಮರುದಿನ ಬೆಳಗ್ಗೆ ಸುಮಾರು ಎರಡು ಝಾವದಲ್ಲಿ ಅವಸರವಸರವಾಗಿ ರಾಜಸಭೆಯು ಸೇರಿತು. ಮಹಾಮಾಂಡಲಿಕೇಶ್ವರನು ಓಡಿಹೋದ

ನೆಂಬುದನ್ನು ಕೇಳಿ ಶ್ರೀಶೈಲದ ನಾಗರಿಕರೆಲ್ಲರೂ ಬೇಸರಪಟ್ಟರು. ಸಾಹಸಿಯಾದ ದೊಂಬನು ಉಚ್ಚಕುಲದ ರಾಜಪುತ್ರನು, ಬನವಾಸಿಯ ಹಿಂದಿನರಸರಾದ ಚಂದ್ರವರ್ಮರ ಮಗನು ಎಂದು ತಿಳಿದ ಮೇಲಂತೂ ಅವರ ಸಂತೋಷಕ್ಕೆ ಪಾರವೇ ಇಲ್ಲ. ಆರುವರ್ಷದ ಹಿಂದೆ ಯುವರಾಜನೊಡನೆ ಕತ್ತಿಯ ಯುದ್ಧದಲ್ಲಿ ಹೋರಾಡಿದ್ದ ಸಾಹಸಿಯಾದ ಮಯೂರನೂ ಇವನೇ ಎಂದಮೇಲಂತೂ ಅವನನ್ನು ದೊರೆಯೆಂದೊಪ್ಪಿಕೊಳ್ಳಲು ಯಾರೂ ಹಿಂದೆಗೆಯಲಿಲ್ಲ. ಮೂರು ನಾಲ್ಕುದಿನದ ಹಿಂದೆ ರಾಜಪ್ರತಿನಿಧಿಯ ಅನುಗ್ರಹವನ್ನು ಯಾಚಿಸಿ ದೊಂಬನಾಗಿ ಬಂದವನು ಇಂದು ನಾಗರಿಕ ಶ್ರೇಷ್ಠರಿಂದೆಲ್ಲ ಕೈಮುಗಿಯಿಸಿಕೊಳ್ಳುತ್ತ ಭವ್ಯಾಸನದಲ್ಲಿ ಕುಳಿತಿದ್ದಾನೆ.

*   *   *   *   *

ಅದೇ ದಿನವೇ ಮಯೂರನು ರಾಜವೇಷ ಭೂಷಿತನಾಗಿ ದಿವ್ಯಾಶ್ವವೊಂದನ್ನೇರಿ ಮಿತಪರಿವಾರಿಯಾಗಿ ಶಿಬಿರಕ್ಕೂ ಹೋದನು. ಅಲ್ಲಿನ ಇಪ್ಪತ್ತು ಸಾವಿರ ಸೇನೆಗೂ ಆಳುಕಾಳೂ ಮೊದಲಾದ ಪರಿವಾರಕ್ಕೆಲ್ಲಕ್ಕೂ ಔಷಧೋಪಚಾರಗಳು ನಡೆಯುತ್ತಿದ್ದುವು. ಸೇನೆಯಲ್ಲಿ ಗಣ್ಯರಾದವರನ್ನು ಬರಮಾಡಿಕೊಂಡು, ' ಇನ್ನೊಂದು ವಾರದೊಳಗಾಗಿ ನಿಮಗೆಲ್ಲರಿಗೂ ಗುಣವಾಗುವುದು. ವ್ಯಾಧಿಯು ನಮ್ಮ ಕೃತ್ರಿಮದಿಂದಲೇ ಬಂದುದು ನಾವು ದುರ್ಗವನ್ನು ಹಿಡಿಯುವಾಗ ಜನವಧೆಯಾಗಬಾರದೆಂದು, ಆ ವೇಳೆಯಲ್ಲ ನೀವು ನಮಗೆ ಅಡ್ಡಿಯಾಗಬಾರದೆಂದು, ನದಿಯಿಂದ ಇಲ್ಲಿಗೆ ಬರುವ ಕಾಲುವೆಯಲ್ಲಿ ವಿಷಚೂರ್ಣಪ್ರಯೋಗಮಾಡಿಸಿದ್ದೆವು. ಈಗ ಅದನ್ನು ತೆಗೆಯಿಸಿದೆ. ಮತ್ತೆ ಈ ವ್ಯಾಧಿಗೆ ತಕ್ಕ ಔಷಧೋಪಚಾರಗಳಿಗೂ ಏರ್ಪಾಡಾಗಿದೆ. ಬೇಕಾದವರು ಇಲ್ಲಿ ನಮ್ಮಲ್ಲಿಯೇ ನಿಲ್ಲಬಹುದು. ಬೇಡದವರು ಹೋಗಬಹುದು ' ಎಂದು ಸಮಾಧಾನದ ಮಾತುಗಳನ್ನಾಡಿದನು.

ಮಯೂರನ ಭವ್ಯವಾದ ಆಕೃತಿ, ಸರಳತೆ, ಸ್ನೇಹಪರತೆಗಳೂ ಅವರಿಗೆಲ್ಲ ಧಾರಾಳವಾಗಿ ಕೊಟ್ಟ ದ್ರವ್ಯವೂ ಅವರ ಹೃದಯವನ್ನು ಹಿಡಿದು ಅವರನ್ನು ಮಯೂರನ ಭಕ್ತರನ್ನಾಗಿ ಮಾಡಿದುವು. ಕೆಲವರು ಹಳಬರು ಅವನ ಸೇವೆಯನ್ನೊಪ್ಪದೆ ಹೊರಟು ಹೋದರು. ಹಾಗೆ ಹೋದ ಸುಮಾರು

ನೂರುಜನರನ್ನು ಬಿಟ್ಟು ಉಳಿದವರೆಲ್ಲ ರಾಜಭಕ್ತಿಯ ಪ್ರಮಾಣವನ್ನು ಆಯುಧ ಸಾಕ್ಷಿಯಾಗಿ ಮಾಡಿ ಮಯೂರನ ಕಡೆಯವರಾದರು.

ದುರ್ಗವು ದಕ್ಕಿತು.

ಹಿರಿಯ ಜಟ್ಟಿಯ ಮಾತು ಅರ್ಧ ನಿಜವಾಯಿತು.

——o——

## ಮೂವತ್ತೆರಡನೆಯ ಪ್ರಕರಣ

ಫಾಲ್ಗುನ ಬಹುಳ ಚತುರ್ದಶಿ. ಬನವಾಸಿಗೆ ಹೊಸ ಮಾಂಡಲಿಕೇಶ್ವರರು ಬಂದಿದ್ದಾರೆ. ಬರುವ ಯುಗಾದಿಯ ದಿನ ಎಂದಿನಂತೆ ವಿಜೃಂಭಣೆಯಾಗಿ ಉತ್ಸವವು ನಡೆಯುವುದಕ್ಕೆ ಎಲ್ಲವೂ ಸಿದ್ಧವಾಗುತ್ತಿದೆ. ನಾಗರಿಕರು ಅನೇಕರು ಮಾಂಡಲಿಕೇಶ್ವರನ ಅನುಗ್ರಹವನ್ನು ಯಾಚಿಸಿ ಪಡೆದು ಕೃತಾರ್ಥರಾದೆವೆಂದು ಸಂತೋಷವನ್ನು ಪ್ರಕಟಿಸುತ್ತಿದ್ದಾರೆ.

ಸುಮಾರು ಸಂಜೆಯ ಮೂರು ಝಾವವಿರಬಹುದು. ರಾಜ ಪ್ರತಿನಿಧಿಯು ಪಶ್ಚಿಮ ಸಮುದ್ರದ ಕಡೆಯಿಂದ ಬರುವ ತಂಗಾಳಿಯನ್ನು ಸೇವಿಸುತ್ತ ಕರುಮಾಡದ ಮೇಲಿನ ಅಂತಸ್ತಿನಲ್ಲಿ ಶತಪಥ ಮಾಡುತ್ತಿದ್ದಾನೆ. ಕರಣಿಕನು ಬಲು ಗಾಬರಿಯಿಂದ ಬಂದು ಕಾಣಿಸಿಕೊಂಡನು. ಅದು ಯಾರೂ ಬರುವ ವೇಳೆಯಲ್ಲ. ಒಂದುವೇಳೆ ಕಾರ್ಯಗೌರವದಿಂದ ಬಂದರೂ ಹೇಳಿಕಳುಹಿಸಿ ಸಮಯವನ್ನು ತಿಳಿದು ಬರಬೇಕು. ಇಂತಹುದರಲ್ಲಿ ಹೇಳದೆ ಕೇಳದೆ ಬಂದಿರುವುದೆಂದರೆ ರಾಜಪ್ರತಿನಿಧಿಗೆ ಆಶ್ಚರ್ಯವಾಯಿತು. ಏನೆಂದು ಕೇಳೋಣವೆಂದು ತಲೆಯೆತ್ತಿ ನೋಡಿದರೆ, ಅವನ ಮುಖದಮೇಲೆ ಗಾಬರಿಯು ತಾನೇ ತಾನು ಆಗಿದೆ. ಕರಣಿಕನು ಅಂಗಳಿಗೆ ಹತ್ತಿಹೋಗಿರುವ ನಾಲಗೆಯನ್ನು ಬಹು ಕಷ್ಟದಿಂದ ಸಡಲಿಸಿ ಒಂದೇ ಒಂದು ಮಾತನ್ನು ಹೇಳಿದನು: 'ಅಪಾಯ' ಆ ಮಾತನ್ನುಚ್ಚರಿಸಲು ಅವನು ಪಟ್ಟ ಪ್ರಯಾಸವು ಮಾಂಡಲಿಕೇಶ್ವರನ ಮನಸ್ಸಿಗೂ ಗಾಬರಿಯನ್ನುಂಟುಮಾಡಿತು. ಆದರೂ ಆ ಗಾಬರಿಯನ್ನು ಪ್ರಕಟಿಸದೆ, ಹೊರಗಿನ ಗಾಂಭೀರ್ಯವನ್ನು ಬಿಡದೆ ಅವನನ್ನು ಕುಳಿತುಕೊಳ್ಳೆಂದು ಹೇಳಿ ತಾನೂ ಕುಳಿತುಕೊಂಡು ಸಾವಧಾನ

ವಾಗಿ ವಿಚಾರಿಸಿದನು. ಕರಣಿಕನು ಹೇಳಿದನು: 'ಈಗ ಕೊಂಚಹೊತ್ತಿನಲ್ಲಿ ಸೇನಾನಿ ಗೋಪುರವರ್ಮರು ಸಂಧಿವಿಗ್ರಹಿಗಳನ್ನು ನೋಡಬೇಕೆಂದು ಹೊರಟರು. ದಾರಿಯಲ್ಲಿ ಬರುತ್ತ ಕುದುರೆಯು ಬೆದರಿ ಮೇಲಕ್ಕೆ ಹಾರಿ ಪವಣತಪ್ಪಿ ಉರುಳಿಕೊಂಡಿತು. ಸೇನಾನಿಗಳು ಬಿದ್ದರು. ಅವರ ಮೇಲೆ ಕುದುರೆಯು ಬಿದ್ದಿತು. ಅವರಿಗೆ ತಲೆಯ ಚಿಪ್ಪು ಒಡೆದಿದೆ'

'ನಂದಿವರ್ಮರೆಲ್ಲಿ ? '

'ಅವರನ್ನು ನೋಡಲು ಹೋಗಿದ್ದಾರೆ'

'ಕೂಡಲೇ ರಾಜವೈದ್ಯನನ್ನು ಕಳುಹಿಸು. ರಥವು ಸಿದ್ಧವಾಗಲಿ. ನಾವೂ ಹೋಗಿಬರುವೆವು'

ಕರಣಿಕನು ಹೋದನು. ಮಾಂಡಲಿಕೇಶ್ವರನಿಗೆ ಯೋಚನೆಯಾ ಯಿತು: 'ತಾನು ಬಂದು ಇನ್ನೂ ಹದಿನೈದು ದಿನಗಳಾಗಿಲ್ಲ. ಆಗಲೇ ಸೇನಾನಿಗೆ ಅಪಾಯವಾಗಿದೆ. ಇಲ್ಲಿ ದಂಗೆ ಏಳುವ ಸಂಭವವಿದೆಯೆಂದೂ ಗೊತ್ತಿದೆ. ಇಂತಹ ವಿಷಮಕಾಲದಲ್ಲಿ ಸೇನಾನಿಗೆ ಆಪತ್ತು. ಏನೀ ಅಪ ಶಕುನ? ' ಎಂದು ಯೋಚಿಸುತ್ತಿರುವಾಗ ತಟ್ಟನೆ ಎಡಗಣ್ಣು ಅದುರಿತು. ಜೊತೆಯಲ್ಲಿ ಅದಕ್ಕೆ ಉಪಶ್ರುತಿಯೋ ಎನ್ನುವಂತೆ ಎಡಭುಜವೂ ಚಲಿಸಿತು. ಆಗ ಅಪಶಕುನ ಭೀತವಾದ ಆ ಮನಸ್ಸಿಗೆ ಆ ದೇಶದಲ್ಲಿ ಹತ್ತು ಹದಿನೈದು ದಿನಗಳಿಂದ ಎರಡು ಮೂರುಸಲ ಕಾಣಿಸಿಕೊಂಡಿರುವ ಧೂಮಕೇತುವಿನ ನೆನೆಪೂ ಆಗಿ ಭವಿತವ್ಯವನ್ನು ನೆನೆದು ಎದೆಯು ಜಗ್ಗಿಂದಿತು. ಗೊತ್ತುಗುರಿ ಇಲ್ಲದ ಅಪಾಯವನ್ನು ನೆನೆದು ಚಿಂತಾಕ್ರಾಂತವಾಗಿದ್ದ ಮನಸ್ಸು ಒಂದು ಗಳಿಗೆಯೊಳಗಾಗಿ ತಿಳಿದುಕೊಂಡು ಆತನು ಸೇನಾನಿಯನ್ನು ನೋಡಿಬರಲು ಹೊರಟನು.

ಆತನು ಹೊರಡುವವೇಳೆಗೆ ನಂದಿವರ್ಮನೇ ಬಂದನು. ಆತನಿಂದ ಹೆಚ್ಚು ವಿವರಗಳೇನೂ ತಿಳಿಯದಿದ್ದರೂ, 'ರಾಜವೈದ್ಯನು ಬಂದು ತಾತ್ಕಾಲಿಕ ಉಪಚಾರವನ್ನು ಮಾಡಿದನು. ಪ್ರಾಣಭಯವಿಲ್ಲವೆಂದು ಹೇಳಲು ಧೈರ್ಯ ವಿಲ್ಲ. ಆದರೂ ಸಂಪೂರ್ಣವಾಗಿ ನಿರಾಶೆಯಿಲ್ಲ. ಸೇನಾನಿಗೆ ಮೈಮೇಲೆ ಅರಿವಿಲ್ಲ. ಈಗ ಯಾರೂ ಅವನನ್ನು ಯಾವರೀತಿಯಲ್ಲೂ ತೊಂದರೆ ಪಡಿಸ

ಬಾರದೆಂದು ವೈದ್ಯರ ಅಭಿಪ್ರಾಯ. ಆದರಿಂದ ಪ್ರಭುಗಳವರು ಹೋಗ ಬೇಕೆಂದಿರುವುದನ್ನು ಮಾನ್ಯಮಾಡಿದರೆ ಉತ್ತಮ' ಎಂದು ತಿಳಿಯಿತು. ಆತನು ಹೊರಟಿದ್ದವನು ನಿಂತನು.

ಇಬ್ಬರಿಗೂ ಈದಿನ ಕೊಂಚ ಅವಕಾಶವು ಸಿಕ್ಕಿದೆ. ಸಂಭಾಷಣೆಗೆ ಆರಂಭವಾಯಿತು. ನಂದಿವರ್ಮನು 'ಇಂತಹದೊಂದು ಸಂದರ್ಭವು ಸಿಕ್ಕೀತೆ? ತನ್ನಲ್ಲಿರುವ ಕೆಲವು ಗುಟ್ಟುಗಳನ್ನು ಮಾಂಡಲಿಕೇಶ್ವರನಿಗೆ ಎರೆದು ಅವನನ್ನೂ ತನ್ನ ಕಡೆಗೆ ತಿರುಗಿಸಿಕೊಂಡೇನೇ?' ಎಂದು ಕಾದಿದ್ದನು. ಸಂಧಿವಿಗ್ರಹಿಯ ಆಪಾದನೆಯಿಂದ ದಂತಿವರ್ಮನ ಮೇಲೆ ಸಮ್ರಾಜರ ಚಿತ್ತವು ಕೊಂಚ ಅಪ್ರಸನ್ನವಾಗಿರುವುದನ್ನು ಅರಿತಿದ್ದ ಈ ಅನಂತ ಗೋಪನೂ ನಂದಿವರ್ಮನನ್ನು ಬುಟ್ಟಿಗೆ ಹಾಕಬೇಕೆಂದು ಹೊಂಚಿದ್ದನು. ಇಬ್ಬರಿಗೂ ಮಾತು ಕಥೆಯು ಆರಂಭವಾಯಿತು. ನಂದಿವರ್ಮನು ಪರ್ಯಾಯವಾಗಿ ಆರಂಭಿಸಿದನು.

'ಶ್ರೀಶೈಲಕ್ಕೆ ರಾಜಕುಮಾರರನ್ನೇ ಮಾಂಡಲಿಕೇಶ್ವರರನ್ನಾಗಿ ಕಳು ಹಿಸಿದ್ದಾರೆಯಂತೆ!'

'ಅಹುದು. ಆ ಸಿಡುಕು ಒಂದು ಬಿಟ್ಟರೆ ಇನ್ನೆಲ್ಲದರಲ್ಲಿಯೂ ಆತನು ಶಕ್ತನೆಂದೇ ಮಂತ್ರಿಮಂಡಲದವರ ಅಭಿಪ್ರಾಯ!'

'ಮಹಾಸ್ವಾಮಿಯವರು ಅರಿಯದ ಸಂಗತಿಯಲ್ಲ. ಅವರು ರಾಜ ಕುಮಾರರು. ಅದರಿಂದ ಸರ್ವಶಕ್ತರೇ ಹೌದು 'ಸ್ಪಷ್ಟಮಗ್ರೇ ಭವಿಷ್ಯತಿ' ನಾವೇಕೆ ಅವಸರಪಡಬೇಕು? ಸಮ್ರಾಜರ ಪ್ರತಿನಿಧಿಗಳಾಗಿ ಬರುವವರು ಎಂದರೆ ಕೊಂಚ ನುರುಗಿರಬೇಕು. ಪಳಗಿರಬೇಕು. ರಾಜನೀತಿಯನ್ನು ಅರಗಿಸಿಕೊಂಡಿರಬೇಕು. ಈಗ ತಾವು ಇಲ್ಲಿಗೆ ನಮ್ಮ ಭಾಗ್ಯದಿಂದ ದಯ ಮಾಡಿಸಿದ್ದೀರಿ. ತಮ್ಮ ವಿಚಾರದಲ್ಲಿ ಯಾರಾದರೂ ಏನಾದರೂ ಹೇಳುವುದ ಕ್ಕುಂಟೆ? ಆದರೆ ಅದೇ ನಾಲಗೆಯು ಇದೇ ಮಾತನ್ನು ಅವರ ವಿಚಾರದಲ್ಲಿ ಹೇಳಬೇಕೆಂದರೆ ತಡವರಿಸದೆ ಉಂಟೆ?'

'ತಾವು ನನ್ನ ಮೇಲೆ ಇಟ್ಟಿರುವ ಅಭಿಮಾನವು ಬಲು ದೊಡ್ಡದು. ಅದಕ್ಕಾಗಿ ನಾನು ಬಹಳ ಕೃತಜ್ಞನಾಗಿದ್ದೇನೆ. ಆಯಿತು. ಇಲ್ಲಿ ಎಲ್ಲರೂ

ಸಮರಕ್ಕೆ ಸಿದ್ಧವಾಗುವಂತೆ ಸಿದ್ಧವಾಗುತ್ತಿದ್ದಾರೆ ಎಂದು ಬರೆದಿದ್ದಿರಲ್ಲ! ಆ ವಿಚಾರವೇನು?'

'ನಾನು ಈ ಯುಗಾದಿಯ ಹಬ್ಬವಾಗಲಿ ಹೇಳೋಣವೆಂದಿದ್ದೆ. ಮಹಾಸ್ವಾಮಿಯವರು ಈಗಲೇ ಪ್ರಶ್ನೆ ಮಾಡೋಣವಾಯಿತು. ನಾನು ಯಾವಾಗಲೂ ಸಂದೇಹಪಡುವ ಪ್ರಾಣಿ. ಅದರಿಂದ ಇತರರಿಗಿಂತ ಹೆಚ್ಚು ಜಾಗ್ರತೆಯಿಂದಿರುವ ಪ್ರಯತ್ನ ಮಾಡುತ್ತೇನೆ. ಅಂತೂ ಬನವಾಸಿ, ನಾಗರಖಂಡ, ಆಭೀರ ಪ್ರಾಂತ್ಯ, ಕೊಂಕಣದೇಶ, ಕೊಡಗು ನಾಡುಗಳಲ್ಲೆಲ್ಲ ವಿಚಿತ್ರ ಸಮರ ಸಿದ್ಧತೆಯು ನಡೆದಿದೆ. ಹಳ್ಳಿಹಳ್ಳಿಗೂ ಕುದುರೆಗಳು, ಅದರಲ್ಲೂ ಉತ್ತಮ ಜಾತಿಯವು ಬಂದಿವೆ. ಅಲ್ಲಲ್ಲಿ ಶ್ರೇಷ್ಠವಾದ ಶಸ್ತ್ರಗಳು ಸಿಕ್ಕಿವೆ. ಅಲ್ಲದೆ ಜನವರ್ಗದಲ್ಲಿ ಇದುವರೆಗೂ ಇಲ್ಲದ ಉತ್ಸಾಹವು ಕಂಡುಬರುತ್ತಿದೆ. ಜಾತ್ರೆಗಳೆಂಬ ಹೆಸರಿನಿಂದ ಜನರ ಕೂಟಗಳು ಹೆಚ್ಚಾಗಿ ಸೇರುತ್ತಿವೆ. ಅಲ್ಲಿ ಆಟಪಾಟಗಳೆಂಬ ಸೋಗಿನಲ್ಲಿ ಉತ್ಸಾಹವರ್ಧಕ ಸಾಧನೆಗಳು ಏರ್ಪಟ್ಟಿವೆ. ಇವೆಲ್ಲವೂ ನಿರುದ್ದೇಶವಾಗಿದ್ದರೆ ದೇಶದ ಉದ್ದಗಲಗಳಲ್ಲಿ ಹಬ್ಬುತ್ತಿದ್ದಿತೇ ಎಂದು ನನ್ನ ಸಂದೇಹ! ಅದನ್ನು ಮಹಾಸ್ವಾಮಿಯವರ ಕುಶಾಗ್ರಬುದ್ಧಿಯೂ ನೀತಿಪಾಟವವೂ ಇತ್ಯರ್ಥ ಮಾಡಬೇಕು. ಹಿಂದಿನ ಮಹಾಸ್ವಾಮಿಯವರು ಇವೆಲ್ಲವೂ ನಮ್ಮ ಉದಾರನೀತಿಯ ಉದಾತ್ತಫಲಗಳು ಎಂದು ನಂಬಿದ್ದರು'

'ಇವೆಲ್ಲ ನೀಲಕಂಠಗುಪ್ತನ ಕೈಚಳಕವಿರಬಹುದೆಂದು ತಮ್ಮ ಮತ?'

'ಹೌದೇ ಹೌದೆಂದು ನಾನೂ ಖಂಡಿತವಾಗಿ ಹೇಳಲಾರೆ. ಆದರೂ ನಿಸ್ಸಂಶಯವಾಗಿ ಅಲ್ಲವೆನ್ನಲಾರೆ. ಒಮ್ಮೆ ಮಹಾಪ್ರಭುಗಳವರು ಸಂಚಾರ ಹೊರಟು ಎಲ್ಲವನ್ನೂ ಕಣ್ಣಾರೆ ಕಂಡುಬಂದರೆ ಒಳ್ಳೆಯದು'

'ಹೌದು, ನಾವೂ ಹಾಗೆಯೇ ಎಂದುಕೊಂಡಿದ್ದೇವೆ. ಆದರೆ ನಾವು ಹೋದಾಗ ಇದ್ದುದು ಮರೆಯಾಗುವುದಲ್ಲದೆ ಕಣ್ಣಿಗೆ ಬೀಳುವುದಿಲ್ಲ. ಇರಲಿ. ಯುವರಾಜರೂ ದಯಮಾಡಿಸಲಿ. ಹೇಗಿದ್ದರೂ ಬರುವರಲ್ಲ! ಅವರ ಜೊತೆಯಲ್ಲಿ ಹೊರಟು ಸುತ್ತಿಬರೋಣ'

'ಅಪ್ಪಣೆ. ಅಂತೂ ಈ ಗುಪ್ತನ ವಿಚಾರದಲ್ಲಿ ಅನುಮಾನವಿಲ್ಲದಿದ್ದರೂ ಎಚ್ಚರಿಕೆಯಿಂದಿರಬೇಕು ಎಂದು ಅರಿಕೆ'

'ನಿಜ. ಹಾಗೆಯೇ ಇರಬೇಕು. ಈ ನಾಡಿನಲ್ಲಿ ಹಾವುಗಳೂ ಹೆಚ್ಚು ಮುಳ್ಳುಗಳೂ ಹೆಚ್ಚು. ಯಾವ ಹೆಜ್ಜೆಗೆ ಏನೋ? ನಿಜ'

ಪ್ರತಿಹಾರಿಯು ಬಂದು ದೂರದಲ್ಲಿ ನಿಂತು ಮುಖವನ್ನು ತೋರಿಸಿದನು. ನಂದಿವರ್ಮನು ಹತ್ತಿರಕ್ಕೆ ಕರೆದು ವಿಚಾರಿಸಿದನು. ಅವನು ಒಂದು ಪತ್ರವನ್ನು ಒಪ್ಪಿಸಿದನು. ನಂದಿವರ್ಮನು ಒಡೆದು ನೋಡಿದನು. ಅದರಲ್ಲಿ ಹೀಗೆ ಬರೆದಿದ್ದಿತು: 'ಶ್ರೀಶೈಲವು ಹಗೆಗಳ ಪಾಲಾಯಿತೆಂದು ಸುದ್ದಿಯು ನನಗೆ ಬಂದಿದೆ. ಕೂಡಲೇ ಈ ವಿಚಾರವನ್ನು ವಿಶದವಾಗಿ ಅರಿಕೆಮಾಡಲು ನಾನೇ ಬಂದಿದ್ದೇನೆ. ಕೂಡಲೇ ಅವಕಾಶವಾಗಬೇಕು.

ಸನ್ನಿಧಾನದ ಸೇವಕ,
ನೀಲಕಂಠಗುಪ್ತ.

——o——

## ಮೂವತ್ತಮೂರನೆಯ ಪ್ರಕರಣ

ಪತ್ರವನ್ನು ಓದುತ್ತಿದ್ದ ಹಾಗೆಯೇ ನಂದಿವರ್ಮನಿಗೆ ಮೈಬೆವರಿಟ್ಟು ಹೋಯಿತು. ಮುಖವು ಬೆಳ್ಳಗಾಯಿತು. ಮನಸ್ಸಿನ ವಿಕ್ಷೋಭವನ್ನು ಮುಚ್ಚಿಡಲಾರದವನಾಗಿ ನಂದಿವರ್ಮನೂ ಒಂದು ಗಳಿಗೆ ಪ್ರಕಟವಾಗಿ ವಿಹ್ವಲನಾದನು. ಮಾಂಡಲಿಕೇಶ್ವರನು ಈ ಸಂಕ್ಷೋಭವನ್ನು ಕಂಡು ಭೀತನಾಗಿ ಅವನ ಕೈಯ್ಯಿಂದ ಪತ್ರವನ್ನು ತಾನೇ ತೆಗೆದುಕೊಂಡು ಓದಿದನು. ಅವನ ತಲೆ ತಿರುಗಿದಂತಾಯಿತು. ಹಾಗೆಯೇ ಒರಗಿಕೊಂಡು 'ಹೋಗು ಶ್ರೀಮಂತರನ್ನು ಕರೆದುಕೊಂಡು ಬಾ' ಎಂದನು.

ಶ್ರೀಮಂತನೂ ಒಳಹೊಕ್ಕನು. ಅವನು ಇವರಿಬ್ಬರಿಗಿಂತ ಗಾಬರಿಯಾಗಿದ್ದಾನೆ. ಮುಖದಲ್ಲಿ ವರ್ಚಸ್ಸೇ ಇಲ್ಲ. ಸರ್ವನಾಶವಾದಾಗ ಆಗುವಂತೆ ಆಗಿದೆ. ಒಳಕ್ಕೆ ಬರುತ್ತಿದ್ದ ಹಾಗೆಯೇ, 'ಮಹಾಸ್ವಾಮಿಯವರು ಮನ್ನಿಸಬೇಕು. ವಿಚಾರವು ವಿಷಮವಾಗಿ ಅತ್ಯವಸರವಲ್ಲದಿದ್ದರೆ ನಾನು ತಮ್ಮನ್ನು ತೊಂದರೆ ಪಡಿಸುತ್ತಿರಲಿಲ್ಲ' ಎಂದನು.

ಕಳೆಗುಂದಿದ ಕೆಟ್ಟಮುಖದಿಂದ ರಾಜಾಧಿಕಾರಿಗಳು ಅವನನ್ನು ಬರಮಾಡಿಕೊಂಡು ವಿಚಾರಿಸಿದರು: 'ಈ ವರ್ತಮಾನವು ತಮಗೆ ಹೇಗೆ ತಿಳಿಯಿತು.?'

'ಈಚೆಗೆ ಕಳ್ಳರ ಕಾಟವು ಬಲಿತಿರುವುದು ತಮಗೆ ವೇದ್ಯವಷ್ಟೆ ? ನಮ್ಮವರೂ ಕಳ್ಳರ ಕೈಗೆ ಸಿಕ್ಕಿದರು. ಆದರೆ ಅದೃಷ್ಟವಶದಿಂದ ಕಳ್ಳರಿಗೆ ಸೋಲಾಗಿ ಅವರಲ್ಲಿ ಕೆಲವರು ಸೆರೆಸಿಕ್ಕಿದರು. ನಮ್ಮವರು ಕುತೂಹಲದಿಂದ ಬಂದಿಗಳನ್ನು ಶೋಧಿಸಿದರು. ಆಗ ಒಬ್ಬನಲ್ಲಿ ಈ ಕಾಗದವು ದೊರೆಯಿತು. ಅದನ್ನು ನಮ್ಮವರು ನನಗೆ ತಲಪಿಸಿದರು. ಕೂಡಲೇ ಆ ಕಳ್ಳರನ್ನೂ ಈ ಕಾಗದವನ್ನೂ ಸನ್ನಿಧಿಗೆ ತಲಪಿಸಬೇಕೆಂದು ಓಡಿಬಂದೆ'

ನಂದಿವರ್ಮನು ಗುಪ್ತನು ಕೊಟ್ಟ ಕಾಗದವನ್ನು ತೆಗೆದುಕೊಂಡು ಓದಿದನು. ಅವನ ಕೈನಡುಗಿತು. ಔಡುಗಳು ತಾವಾಗಿ ಕಚ್ಚಿದುವು. ಕಣ್ಣುಗಳು ಕಿಡಿಗಳನ್ನು ಕಾರಿದುವು. ಕ್ರೋಧೋದ್ದೀಪಿತನಾಗಿ ಪತ್ರವನ್ನು ಮಾಂಡಲಿಕೇಶ್ವರನ ಕೈಗೆ ಕೊಟ್ಟನು. ಆತನೂ ವಿಸ್ಮಯದಿಂದ ಓದಿದನು. ಮೇಲೆ ಹೆಸರಿಲ್ಲ ಕೆಳಗೆ ರುಜುವಿಲ್ಲ.

'ತಮ್ಮೆಲ್ಲರ ವಿಶ್ವಾಸದಿಂದ ಕೆಲಸವು ಕೈಗೂಡಿತು. ಇಲ್ಲಿನ ಮಾಂಡಲಿಕೇಶ್ವರ ವಿಷ್ಣುಗೋಪನಿಗೆ ವಿಷ್ಣುಪದ ಪ್ರಾಪ್ತಿಯಾಗಿ ಶ್ರೀಶೈಲವು ನಮ್ಮ ಕೈಸೇರಿತು. ನಾಗರಿಕರ ಮುಖಂಡರು ಇನ್ನೂ ಸಗ್ಗಿಲ್ಲ. ಇಲ್ಲಿನ ಸೈನ್ಯವೆಲ್ಲ ನಮ್ಮ ಮುಂದೆ ನಿಲ್ಲಲಾರದೆ ಚೂರ್ಣವಾಯಿತು. ಅದರಿಂದ ನಾಗರಿಕರ ಹಾರಾಟವೂ ಶಾಂತವಾಗಿ ಎಲ್ಲವೂ ನಮ್ಮದೇ ಆಗುವುದರಲ್ಲಿ ಸಂದೇಹವಿಲ್ಲ. ಅಲ್ಲಿ ನೀವು ಹಬ್ಬದ ದಿನವೇ ಬನವಾಸಿಯನ್ನು ಮುತ್ತಿದರೆ ನಾವೂ ಎರಡು ದಿನದೊಳಗಾಗಿ ಸಸೈನ್ಯರಾಗಿ ಬಂದು ಒದಗುವೆವು.

ಹಿಂದಿನಿಂದ:—ಚೋಳರೂ ಪಾಂಡ್ಯರೂ ನಮಗೆ ನೆರವಾಗಿದ್ದಾರೆ. ಇದು ಸಮ್ರಾಜರಿಗೆ ತಿಳಿದಿದೆಯಾಗಿ ರಾಜಧಾನಿಯಿಂದ ಏನೂ ಸಹಾಯವಾಗುವುದಿಲ್ಲ. ಅದರಿಂದ ನೀವು ಧೈರ್ಯವಾಗಿರಿ'

ಮಾಂಡಲಿಕನ ಬಣ್ಣವು ಬದಲಾಯಿಸಿತು: ಕೇಳಿದನು: 'ಇದನ್ನು ಯಾರಿಗೆ ಯಾರು ಬರೆದುದು ಎಂಬುದೇನಾದರೂ ತಿಳಿದಿದೆಯೋ ?'

ಗುಪ್ತನು ಹಿಂದೆ ಮುಂದೆ ನೋಡಿ ಬಹುರಹಸ್ಯವೆಂಬಂತೆ ಸಣ್ಣ ಮಾತಿನಲ್ಲಿ ಹೇಳಿದನು: 'ಇಲ್ಲಿನ ಹದಿನಾರು ಜನ ನಾಡಗೌಡರಿಗೆ ಮಯೂರನು ಬರೆದುದು'

'ಯಾವ ಮಯೂರ ?'

'ಹಿಂದಿನ ಅರಸರ ಮಗನಂತೆ'

'ನೀವು ಅವನನ್ನು ಬಲ್ಲಿರಾ ?'

'ನಾನು ಕಾಣೆ'

ನಂದಿವರ್ಮನು ಕನಸುಕಾಣುತ್ತಿದ್ದು ತಟ್ಟನೆ ಎಚ್ಚೆತ್ತವನಂತೆ ಮಿಟುಕಿಬಿದ್ದು, 'ಮಯೂರನೇ ?' ಎಂದನು.

'ಹೌದು'

ನಂದಿವರ್ಮನು ಸಂಶಯದ ಮೂರ್ತಿಯಾದನು. ತಾನು ಹಗಲಿರುಳೂ ನೀಲಕಂಠಗುಪ್ತನೇ ಮಯೂರನಿರಬಹುದು ಎಂದು ಸಂಶಯಪಡುತ್ತಿದ್ದುದಕ್ಕೂ ಈಗ ಮಯೂರನು ಅಲ್ಲಿ ದುರ್ಗವನ್ನು ಹಿಡಿದಿರುವ ಸುದ್ದಿಯನ್ನು ಈ ಗುಪ್ತನೇ ತಂದಿರುವುದಕ್ಕೂ ಸಮನ್ವಯ ಮಾಡುವುದು ಹೇಗೆ? ಸಚಿವನು ದಿಗ್ಭ್ರಾಂತನಾದನು. ಮಾಂಡಲಿಕೇಶ್ವರನೂ ಏನೂ ಹೇಳಲಾರದಾದನು.

ಗುಪ್ತನು ಪರಮ ರಾಜಭಕ್ತನಂತೆ ಹೇಳಿದನು: 'ಸನ್ನಿಧಿಯಲ್ಲಿ ಅಪ್ಪಣೆಯಾಗಬೇಕು. ನನಗಿರುವ ಸರ್ವಸ್ವವನ್ನೂ ಈಗ ರಾಜಸೇವೆಗಾಗಿ ಸನ್ನಿಧಾನಕ್ಕೆ ಸಮರ್ಪಿಸಲು ಸಿದ್ಧನಾಗಿದ್ದೇನೆ, ಒಪ್ಪಿಸಿಕೊಳ್ಳಬೇಕು. ನನ್ನಲ್ಲಿರುವ ಐಶ್ವರ್ಯ, ಅದರ ರಕ್ಷಣಕ್ಕೋಸ್ಕರ ಇರುವ ಸೇನೆ, ಸಲಕರಣೆಗಳು, ಯುದ್ಧ ಸಾಮಗ್ರಿಗಳು, ಸಮಸ್ತವನ್ನೂ ಸನ್ನಿಧಿಗೆ ಒಪ್ಪಿಸುತ್ತೇನೆ. ಒಪ್ಪಿಸಿಕೊಳ್ಳಬೇಕು'

ಅದನ್ನು ಕೇಳಿದಮೇಲಂತೂ ಸಚಿವನೂ ಈಶ್ವರನೂ ಅವಾಕ್ಕಾದರು: ಚಿತ್ರಾರ್ಪಿತ ಪ್ರತಿಮೆಗಳಾದರು. ಅವರಿಗೆ ಏನು ಹೇಳಬೇಕೋ ತೋರಲಿಲ್ಲ. ಇನ್ನೊಂದು ಗಳಿಗೆಯಾದಮೇಲೆ ಮತ್ತೆ ಗುಪ್ತನೇ ಮಾತನಾಡಿದನು: 'ಮಹಾಸ್ವಾಮಿ! ಈ ಅವಸರವು ಯೋಚಿಸುತ್ತಾ ಕುಳ್ಳಿರುವ ಕಾಲವಲ್ಲ. ಜಾಗ್ರತೆ ಮಾಡೋಣಾಗಲಿ. ಉಳಿದಿರುವುದು ಇನ್ನೆರಡು ದಿನ. ಅಷ್ಟರಲ್ಲಿ ಈ ನಾಡಗೌಡರು ತಲೆಯೆತ್ತದಂತೆ ಅಲ್ಲಲ್ಲಿ ಅವರನ್ನು ಮಟ್ಟಹಾಕುವ ಯೋಚನೆಯನ್ನು ಮಾಡೋಣಾಗಲಿ'

ಮಾತನಾಡುತ್ತಿದ್ದವನು ತಟ್ಟನೆ ನಾಲಗೆಯನ್ನು ಬಿಗಿಹಿಡಿದು ಕೈಮುಗಿದು ಅಪರಾಧ ಭೀತನಾದವನಂತೆ ಹೇಳಿಕೊಂಡನು: 'ಕ್ಷಮಿಸಬೇಕು. ರಾಜಭಕ್ತಿಯ ಭರದಲ್ಲಿ ನಾನು ದುಡುಕಿದೆ, ಇದು ನನ್ನ ಕಾರ್ಯವಲ್ಲ ಎಂಬುದನ್ನು ಮರೆತೆ'

ನಂದಿವರ್ಮನು ಏನು ಹೇಳುತ್ತಿದ್ದನೊ? ಅನಂತಗೋಪನು 'ಶ್ರೀಮಂತರ ರಾಜಭಕ್ತಿಯು ಅಪಾರವಾದುದು. ಆದರಿಂದ ಭಿನ್ನ ಭಾವನೆಗೆ ಅವಕಾಶವಿಲ್ಲ. ಹೇಳಬೇಕೆಂದಿದ್ದುದನ್ನು ತಡೆಯದೆ ಹೇಳಿ' ಎಂದನು.

ಗುಪ್ತನು ನಂದಿವರ್ಮನ ಮುಖವನ್ನು ನೋಡಿದನು. ಅವನೂ ಯತ್ನವಿಲ್ಲದೆ, 'ಅಪ್ಪಣೆಯಾಗಲಿ. ಅದಕ್ಕೇನಂತೆ? ತಾವು ಹೇಳುತ್ತಿರುವುದೂ ಸಾಮ್ರಾಜ್ಯ ಸೇವೆಗೆ ಅಲ್ಲವೇ?' ಎಂದನು.

ಗುಪ್ತನು ಸಂದೇಹದಿಂದ ಅತ್ತಿತ್ತ ತಿರುಗಿನೋಡಿದನು. ನಂದಿವರ್ಮನು ಗುಪ್ತನ ಮುಖದ ಮೇಲೆ ಅಷ್ಟು ಸಂಶಯಗ್ರಸ್ತವಾದ ಸಂಕುಚಿತ ಭಾವವನ್ನು ಅದುವರೆಗೂ ಎಂದೂ ನೋಡಿರಲಿಲ್ಲ. ಯಾರೂ ಇರಲಿಲ್ಲವೆಂದು ಮನಸ್ಸಿಗೆ ಧೈರ್ಯವಾದರೂ ತಾನು ಕುಳಿತಿದ್ದ ಆಸನವನ್ನು ಬಿಟ್ಟು ಎದ್ದು ಅವರಿಬ್ಬರ ಬಳಿಗೆ ಬಂದು, ಅವರಿಗೂ ಕೇಳಿತೋ ಇಲ್ಲವೋ ಎನ್ನುವಷ್ಟು ಸಣ್ಣ ದನಿಯಲ್ಲಿ ಗುಪ್ತನು ಹೇಳಿದನು: 'ತಮಗೆ ಸಮ್ಮತವಾದರೆ ಈಗಿರುವ ಸೈನ್ಯವನ್ನು ನಾಲ್ಕು ದಿಕ್ಕುಗಳಿಗೂ ಹಂಚಿ ಅತ್ತಿತ್ತಲಿಂದ ಬರುವ ನಾಡಗೌಡರನ್ನು ಅಲ್ಲಲ್ಲಿಯೇ ಬಲಿಹೊಯ್ಯುವುದು ಮೇಲು. 'ಈ ಕಾರ್ಯಕ್ಕೆ ನಮ್ಮ ಗಣಿಯ ಸೈನಿಕರು ಒದಗುವುದಿಲ್ಲ, ಅವರಿಗೆ ಯುದ್ಧ ಸಿದ್ಧತೆ ಅಷ್ಟಿಲ್ಲ' ವೆನ್ನುವುದಾದರೆ, ಕರುಮಾಡಗಳನ್ನು ಕಾಯುವ ಕೆಲಸವನ್ನು ನಮ್ಮವರಿಗೆ ಕೊಟ್ಟು ಅಲ್ಲಿರುವವರನ್ನೂ ಸೈನ್ಯಕ್ಕೆ ತೆಗೆದುಕೊಳ್ಳಬಹುದು. ಅದು ಸ್ವಾಮಿಯ ಚಿತ್ತ. ಈಗ ಸದ್ಯದಲ್ಲಿ ನನ್ನ ತೃಪ್ತಿಗಾದರೂ ಐದು ಮಣ ಭಂಗಾರವನ್ನು ಅರಮನೆಗೆ ಒಪ್ಪಿಸುತ್ತೇನೆ; ಅಲ್ಲಿ ಗಣಿಯ ಕಾವಲಿಗೆ ಬೇಕಾಗುವಷ್ಟು ಅಲ್ಪಾಲ್ಪ ಸೈನ್ಯವನ್ನು ಇಟ್ಟುಕೊಂಡು ಉಳಿದ ಸೈನ್ಯವನ್ನೆಲ್ಲ ಕಳುಹಿಸುತ್ತೇನೆ. ಅಪ್ಪಣೆಯಾಗಬೇಕು'

ಈಸಲ ನಂದಿವರ್ಮನಿಗೂ ಸಂಶಯ ಉಳಿಯಲಿಲ್ಲ. ತನ್ನ ಮುಖವನ್ನು ನೋಡುತ್ತಿರುವ ಮಾಂಡಲಿಕೇಶ್ವರನ ಸನ್ನೆಯಿಂದ ಅಪ್ಪಣೆಯನ್ನು ಪಡೆದು ಹೇಳಿದನು: 'ಶ್ರೀಮಂತರ ರಾಜಭಕ್ತಿಯೇನೋ ನಮಗೆಲ್ಲ ತಿಳಿದಿದ್ದರೂ ಅದಿಷ್ಟು ಅನಂತವಾಗಿದೆಯೆಂದು ಗೊತ್ತಿರಲಿಲ್ಲ. ತಮ್ಮಿಷ್ಟದಂತೆಯೇ ಆಗಲಿ. ನಮ್ಮಲ್ಲಿಯೂ ಒಂದು ಝಾಮದೊಳಗೆ ಸಮರಾಂಗಣಕ್ಕಿಳಿಯಬಲ್ಲ ಭಾರಿಯಾದ ಚತುರಂಗ ಸೈನ್ಯವು ಸರ್ವಸಿದ್ಧವಾಗಿದೆ. ಆದರೂ, 'ರಾಜಧಾನಿಯಿಂದ ಸೇನೆಯು ಒದಗುವುದಿಲ್ಲ: ಶ್ರೀಶೈಲದಿಂದ ಮಯೂರನು ಸಸೈನ್ಯವಾಗಿ ಬರುವನು: ನಾಡಗೌಡರು ದಂಗೆಯೆದ್ದು ಬನವಾಸಿಯನ್ನು ಮುತ್ತುವರು' ಎಂಬ ತಮ್ಮ ಸುದ್ದಿಯು ನಿಜವಾದರೆ, ಆಗ ನಮಗೆ ಹೊರಗಿಂದ ಎಷ್ಟು ಸಹಾಯ ಬಂದರೂ ಇನ್ನೂ ಸಹಾಯಬೇಕು ಎನ್ನುವ ಸ್ಥಿತಿಯಲ್ಲಿಯೇ ಇರುತ್ತದೆ. ಅದರಿಂದ ತಾವಾಗಿ ಒಪ್ಪಿಸಬೇಕೆಂದುಕೊಂಡಿರುವ ಈ ಸಹಾಯವನ್ನು ಮಾಂಡಲಿಕೇಶ್ವರರು ಅವಶ್ಯವಾಗಿ ಸ್ವೀಕರಿಸುವರು'

'ನನಗಾದ ಸಂತೋಷವನ್ನು ಬಾಯಿಂದ ಹೇಳಲಾರೆ. ಅಪ್ಪಣೆಯಾದರೆ ಬೆಳಗಾಗುವುದರೊಳಗಾಗಿ ಚಿನ್ನವು ಬರುವುದು. ಮತ್ತೊಂದು ಮಾತು. ಆ ಕಳ್ಳರ ಗತಿಯೇನು? ಅಪರಾಧವನ್ನು ಕ್ಷಮಿಸಬೇಕು. ನಾನೇ ಸ್ವಾತಂತ್ರ್ಯವನ್ನು ವಹಿಸಿ ಅವರಿಗೆ ತಕ್ಕಷ್ಟು ಶಿಕ್ಷೆಮಾಡಿಸಿ ಅವರಿಂದ ಕೆಲವು ಸುದ್ದಿಗಳನ್ನು ತಿಳಿದೆ. ಈಗ ಸುತ್ತುಮುತ್ತಲಿನಲ್ಲಿ ಹಾವಳಿ ಮಾಡುತ್ತಿರುವ ಚೋರದಳಗಳೆಲ್ಲ ಅವನವೇಯಂತೆ! ಅದರಲ್ಲಿ ಸುಮಾರು ಹತ್ತಿಪ್ಪತ್ತು ಸಾವಿರ ಜನರು ಇರುವರಂತೆ! ಸನ್ನಿಧಾನದಲ್ಲಿ ಅರಿಕೆಮಾಡಿ ಶಿಕ್ಷೆಯನ್ನು ತಪ್ಪಿಸುವೆನೆಂದು ಅವರಿಗೆ ಅಭಯವನ್ನು ಕೊಟ್ಟು ಅವರಿಂದ ಇಷ್ಟು ಸುದ್ದಿಯನ್ನು ಹೊರಡಿಸಿದ್ದೇನೆ. ಆದರೂ ಈ ಗಲಭೆಯು ಶಾಂತವಾಗುವವರೆಗೂ ಅವರನ್ನು ಸೆರೆಯಲ್ಲಿಟ್ಟಿದ್ದು ಆಮೇಲೆ ಬಿಡುವುದು ಒಳ್ಳೆಯದು ಎಂದು ನನ್ನ ಅಭಿಪ್ರಾಯ. ಸನ್ನಿಧಾನಕ್ಕೆ ಸೂಕ್ತವಾದ ರೀತಿಯಲ್ಲಿ ಅಪ್ಪಣೆಯಾಗಬಹುದು'

'ಈಗ ಆ ಕಳ್ಳರು ಎಲ್ಲಿದ್ದಾರೆ?'

'ಅವರು ನಮ್ಮ ಗಣಿಯಲ್ಲಿಯೇ ಬಂಧನದಲ್ಲಿದ್ದಾರೆ'

'ಅವರಿಂದ ಇನ್ನೇನಾದರೂ ಹೆಚ್ಚು ಸಂಗತಿಗಳು ತಿಳಿಯುವ ಸಂಭವವುಂಟೋ?'

'ಚಿತ್ರಹಿಂಸೆಯೂ ಕ್ಷಮಾದಾನದ ಆಶೆಯೂ ಎಷ್ಟು ಹೊರಡಿಸ ಬಹುದೋ ಅಷ್ಟೂ ಹೊರಡಿಸಿದ್ದೇನೆಂದು ನನ್ನ ನಂಬಿಕೆ'

'ಶ್ರೀಮಂತರ ವಚನದಂತೆಯೇ ನಡೆಸೋಣ. ಅದು ಅಷ್ಟು ದೊಡ್ಡದಲ್ಲ. ಈಗ ಗಮನಿಸಬೇಕಾದುದು ಈ ದಂಗೆಯ ವಿಚಾರ. ನಾಡ ಗೌಡರ ದಂಗೆಯೆಂದರೆ ಸಾಮಾನ್ಯವಲ್ಲ'

ಮಾಂಡಲಿಕೇಶ್ವರನು ಗುಪ್ತನ ಮುಖವನ್ನು ನೋಡಿದನು. ಗುಪ್ತನೂ ಆ ಸುಳಿವನ್ನರಿತು ಬೀಳ್ಕೊಂಡು ಹೊರಟನು. ಹೊರಟು ಬಾಗಿಲವರೆಗೆ ಹೋಗಿದ್ದವನು. ಹಿಂತಿರುಗಿ ನಿಂತು ಕೇಳಿದನು:-'ಅಪ್ಪಣೆಯಾದರೆ ನಾಳೆಯ ದಿನವೇ ಭಂಗಾರದ ಭಂಡಿಯು ಬರುವುದು. ಅದರ ಕಾವಲಿಗೆ ನಮ್ಮ ಭಟರನ್ನು ಕಳುಹಿಸುವುದೋ ಅಥವಾ ರಾಜಭಟರೇ ಬರುವರೋ?'

'ತಮ್ಮ ಭಟರನ್ನೇ ಕಳುಹಿಸಿ. ಈಗ ಇಲ್ಲಿರುವ ಭಟರ ಜೊತೆಗೆ ತಮ್ಮ ಭಟರ ಆವಶ್ಯಕತೆಯೂ ಉಂಟು'

ಗುಪ್ತನು ಪ್ರಕಟ ಸಂತೋಷದಿಂದ, 'ರಾಜಸೇವೆಯಿಂದ ಇಹಪರ ಗಳೆರಡೂ ಉಂಟು. ಇಷ್ಟು ವಿಷಮವಲ್ಲದಿದ್ದಿದ್ದರೆ ರಾಜಸೇವೆಗೆ ಇಂತಹ ಅವಕಾಶವು ಸಿಕ್ಕಿತಲ್ಲಾ ಎಂದು ನಿಜವಾಗಿಯೂ ಸಂತೋಷಪಡುತ್ತಿದ್ದೆ' ಎಂದು ಹೇಳಿ ಮತ್ತೆ ಕೈಮುಗಿದು ಹೋದನು.

ಮತ್ತೆ ರಹಸ್ಯದಾಲೋಚನೆಗೆ ಮೊದಲಾಯಿತು ಇಬ್ಬರೂ ಒಂದೇ ವಿಷಯವನ್ನು ಕುರಿತು ಯೋಚಿಸುತ್ತಿದ್ದಾರೆ. ಆದರೂ ಬಾಯಲ್ಲಿ ಮಾತಿಲ್ಲ. ಅಷ್ಟು ಹೊತ್ತಾದ ಮೇಲೆ ಮಾಂಡಲಿಕೇಶ್ವರನೇ ಮಾತನಾಡಿದನು: 'ಶ್ರೀಮಂತನ ಸುದ್ದಿಯು ನಿಜವಾದರೆ ಇದು ಭಾರಿಯ ವಿಪತ್ತು. ಸಂದೇಹವಿಲ್ಲ'

'ಅಷ್ಟೇ ಅಲ್ಲ. ಶ್ರೀಶೈಲವನ್ನು ಹಿಡಿದು ಮಯೂರನು ಪಲ್ಲವ ಸಾಮ್ರಾಜ್ಯವನ್ನೇ ಮುರಿದನೆಂದು ಹೇಳಬೇಕು. ಸಾಮ್ರಾಜ್ಯಕ್ಕಿರುವುದು ಮೂರು ಭಾರಿಯ ಕೇಂದ್ರಗಳು, ಪಶ್ಚಿಮ ರಾಜಧಾನಿ ಬನವಾಸಿ, ಪೂರ್ವ ರಾಜಧಾನಿ ಕಾಂಚಿ, ಉತ್ತರ ರಾಜಧಾನಿ ಶ್ರೀಶೈಲ. ಈಗ ಶ್ರೀಶೈಲವನ್ನು ಹಿಡಿದು ಮಯೂರನು ಸಾಮ್ರಾಜ್ಯ ತ್ರಿಕೋಣದ ಭುಜವೊಂದನ್ನು ಮುರಿದ

ನೆನ್ನಲೇ ಬೇಕು. ಶ್ರೀಶೈಲವನ್ನು ಹಿಡಿಯ ಹೋದರೆ ತೆಂಕಲ ಚೋಳ ಪಾಂಡ್ಯರು ಎಂತಹ ಮಿತ್ರಘಾತವನ್ನು ಮಾಡುವರೋ ಹೇಳಲು ಸಾಧ್ಯವಿಲ್ಲ. ಅಲ್ಲದೆ, ಈಗ ಶ್ರೀಶೈಲವು ಪರಾಕ್ರಾಂತವಾದ ಮೇಲಂತೂ ಬಾಣರು ಚೇತರಿಸಿಕೊಂಡು ಮಡಲಿನ ಮುಳ್ಳಾಗುವರು. ಅಲ್ಲಿ ಮಯೂರನು ಕಾಣಿಸಿಕೊಂಡನೆಂದ ಕೂಡಲೇ ಇಲ್ಲಿನವರು ಎದ್ದರೆ ಆಶ್ಚರ್ಯವಿಲ್ಲ. ನಾಡಗೌಡರು ದಂಗೆ ಏಳದಿದ್ದರೆ ವಿಶೇಷವಲ್ಲದೆ ಎದ್ದರೆ ವಿಶೇಷವೇ ಇಲ್ಲ ಅಂತೂ ಭಾರಿಯ ವಿಷಮಸಂಕಟ'

'ಅಹುದು ವಿಷಮವೆಂದರೆ ಅಷ್ಟಿಷ್ಟಲ್ಲ. ಸಾಲದೆ ಸೇನಾನಿಗಳಿಗೆ ಈ ವಿಪತ್ತು. ಈಗ ಈ ನಾಗರ ಖಂಡದವರು, ಈ ಪಡುವಲಿನ ಆಭೀರಿಯವರು, ತೆಂಕಲಿನ ಕೊಡಗು ಕೊಂಕಣದವರು ಈ ಸುದ್ದಿಯನ್ನು ತಿಳಿಯುವುದಕ್ಕಿಂತ ಮುಂಚೆಯೇ ನಾವು ಜಾಗ್ರತೆ ಮಾಡಬೇಕು'

'ಅಹುದು. ಅಪ್ಪಣೆಯಾದರೆ ಈ ರಾತ್ರಿಯೇ ಸಚಿವ ಮಂಡಲವನ್ನು ಸಮಾಲೋಚನೆಗೆ ಕರೆಯುತ್ತೇನೆ'

'ಆಗಬಹುದು. ಆಯಿತು. ಈ ನೀಲಕಂಠ ಗುಪ್ತನ ಸಹಾಯವನ್ನು ಸ್ವೀಕರಿಸುವ ವಿಚಾರದಲ್ಲ ತಮ್ಮ ಯೋಚನೆಯೇನು ?'

'ಪ್ರಭು! ಆತನ ಸಲಹೆಯನ್ನೂ ಸಹಾಯವನ್ನೂ ಸಚಿವಮಂಡಲದವರಿಗೆ ಅರಿಕೆಮಾಡಿ ಅವರ ಇಷ್ಟದಂತೆಯೇ ನಡೆಯೋಣ'

'ಆಗಬಹುದು. ಆದರೆ, ಈ ವಿಚಾರದಲ್ಲಿ ಸಂಧಿವಿಗ್ರಹಿಗಳ ಮಾತೇ ಕೊನೆಯಷ್ಟೆ ?'

'ಸನ್ನಿಧಾನದಲ್ಲಿ ಅರಿಕೆಯಿಷ್ಟೆ! ನಾನಿದುವರೆಗೂ ಈ ಗುಪ್ತನ ವಿಚಾರವಾಗಿ ಭಾರಿಯ ಸಂಶಯವಿಟ್ಟುಕೊಂಡಿದ್ದೆ. ಇವನೇ ಮಯೂರನಿರಬಹುದು ಎಂದು ನನ್ನ ಸಂಶಯ. ಈಗ ಅದನ್ನು ಬದಲಿಸಬೇಕಾಗಿ ಬಂದಿದೆ. ಮಯೂರನು ಶ್ರೀಶೈಲದ ಸೇನೆಯನ್ನೆಲ್ಲ ಧೂಳಿಪಟಲಮಾಡಿ ದುರ್ಗವನ್ನು ಸಾಧಿಸಬೇಕಾಗಿದ್ದರೆ, ಅದೂ ಅಲ್ಲಿಂದ ವರ್ತಮಾನವು ಇನ್ನೆಲ್ಲಿಗೂ ತಿಳಿಯುವುದಕ್ಕೆ ಅವಕಾಶವೇ ಇಲ್ಲದಷ್ಟು ಶೀಘ್ರವಾಗಿ, ಅವನ ಸಹಾಯ ಸಂಪತ್ತಿ ಎಷ್ಟುಮಟ್ಟಿಗೆ ಇರಬೇಕು ? ಅವನೆಂತಹ ಪಟುಭಟನಾಗಿರಬೇಕು ? ಎಂಬ

ಯೋಚನೆಯು ಬಲವಾಗಿ ಈ ಗುಪ್ತನು ಬೇರೆಯೆಂದು ಈಗ ಎನ್ನಿಸುತ್ತಿದೆ. ಅಲ್ಲದೆ, ಅವನೇ ಇವನಾಗಿದ್ದರೆ, ತಾನೇ ಬಂದು ನಮಗೆ ತನ್ನ ಸರ್ವಸ್ವವನ್ನು ಅರ್ಪಿಸುವನೆಂದರೆ ಹೇಗೆ? ಅಲ್ಲದೆ, ಒಂದುವೇಳೆ ನನ್ನ ಸಂಶಯವೇ ನಿಜವಾದರೂ ಇವನ ಸೈನ್ಯವನ್ನೂ ಧನವನ್ನೂ ನಾವು ಅಂಗೀಕರಿಸುವುದೇ ಸರಿಯೆಂದು ತೋರುತ್ತದೆ. ಆದರೂ ಮಂತ್ರಿಮಂಡಲದ ಸಲಹೆಯಂತೆ ನಡೆಯೋಣ ಎಂಬುದು ನನ್ನ ಇಷ್ಟ!'

'ನಿಜ, ಇಷ್ಟೂ ನಿಜ. ಅಲ್ಲದೆ ಇವನೇ ಮಯೂರನಾಗಿದ್ದರೆ ತನಗೋಸ್ಕರ ದಂಗೆಯೇಳುವ ನಾಡಗೌಡರ ವಿಷಯವನ್ನು ತಾನೇ ಹೇಳುತ್ತಿದ್ದನೆ? ಅಂತೂ ವಿಷಯವು ಅಗಾಧವಾಗಿದೆ. ತಾವು ಇನ್ನೊಮ್ಮೆ ಸೇನಾನಿಗಳನ್ನು ನೋಡಿಕೊಂಡು ಹೋಗಿ. ನಾನೂ ಇನ್ನಷ್ಟು ಹೊತ್ತು ಬಿಟ್ಟು ಹೋಗಿ ಬರುತ್ತೇನೆ. ಅಂತೂ ಸೇನೆಯು ಮಾತ್ರ ಸಿದ್ಧವಾಗಿರಲಿ. ವ್ಯವಸ್ಥೆಯೆಲ್ಲವನ್ನೂ ನೋಡಿಕೊಳ್ಳುವಂತೆ ಉಪಸೇನಾನಿಗಳಿಗೆ ಹೇಳಿ'

'ಅದನ್ನು ಆಗಲೇ ವ್ಯವಸ್ಥೆ ಮಾಡಿದ್ದೇನೆ. ಅಪ್ಪಣೆಯಾದರೆ ಮತ್ತೆ ಸನ್ನಿಧಿಯ ದರ್ಶನ ತೆಗೆದುಕೊಳ್ಳುತ್ತೇನೆ' ಎಂದು ಕೈಮುಗಿದು ಸಚಿವನು ಬೀಳ್ಕೊಂಡನು.

*　　*　　*　　*

ರಾತ್ರಿಯ ಎರಡನೆಯ ಝಾವದಲ್ಲಿ ಸೇರಿದ ಮಂತ್ರಿಮಂಡಲವು ಬೆಳಗಾಗುವವರೆಗೂ ಆಲೋಚನೆಯಲ್ಲಿಯೇ ಇದ್ದಿತು. ಶ್ರೀಶೈಲದ ಕಡೆಯಿಂದ ಬರಬಹುದಾದ ಮಯೂರನನ್ನು ಎದುರಿಸಲು ಬೆಳಗಾಗುವ ವೇಳೆಗೆ ಸರ್ವಸಿದ್ಧವಾದ ಒಂದು ಸೈನ್ಯದ ತುಂಡು ನಾಗರಖಂಡದ ಕಡೆಗೆ ಹೋಯಿತು.

ರಾತ್ರಿ ಮೊದಲನೆಯ ಝಾವದೊಳಗಾಗಿ ನೀಲಕಂಠಗುಪ್ತನೇ ತನ್ನ ಸೈನ್ಯದೊಡನೆ ಬನವಾಸಿಗೆ ಬಂದು ಸಚಿವನನ್ನು ಕಾಣಿಸಿಕೊಂಡನು.

ಈಗ ಸಚಿವನಿಗೆ ಗುಪ್ತನ ಮೇಲೆ ಬಹಳ ಪ್ರೇಮ!

—o—

## ಮೂವತ್ತನಾಲ್ಕನೆಯ ಪ್ರಕರಣ

ಗಜವೀಥಿಯಲ್ಲಿ ಇಂದು ಒಂದು ಹಬ್ಬ. ಶ್ರಮಣಕನು ತನ್ನ ದೇವತೆಯ ತೃಪ್ತಿಗಾಗಿ ಒಂದು ಸಣ್ಣ ಸಮಾರಾಧನೆ ಮಾಡಿದ್ದಾನೆ. ಪಾಳ್ಯದವರೆಲ್ಲರೂ ಊಟಕ್ಕೆ ಬರುವುದಿರಲಿ, ಅಲ್ಲಿ ಆಗಿರುವ ಅಡುಗೆಯು ಆನೆಗಳಿಗೂ ಸಲ್ಲಬೇಕೆಂದು ಶ್ರಮಣನ ಆಸೆ. ಕೊನೆಗೆ ಅವನ ಬಲವಂತದಿಂದ ಗಜವೀಥಿಯ ನಾಯಕನೂ ಒಪ್ಪಿದ್ದಾನೆ. ಪಾಳ್ಯದವರೇ ಬಂದು ಅಡುಗೆ ಮಾಡಿದ್ದಾರೆ. ಅದರಿಂದ ನಾಯಕನಿಗೆ ಅನುಮಾನವಿಲ್ಲ.

ಎಲ್ಲರಿಗೂ ಊಟಗಳು ಆಯಿತು. ಗಂಧ, ಹೂ, ಅಡಿಕೆಲೆಗಳನ್ನೂ ಕೊಟ್ಟು ಆಯಿತು. ಸಣ್ಣ ಪುಟ್ಟವರೆಲ್ಲರೂ ಹೊರಟು ಹೋಗಿದ್ದಾರೆ. ನಾಯಕನೂ ಅವನಿಗೆ ಬೇಕಾದ ಕೆಲವರು ಮಾತ್ರ ಉಂಡ ಊಟದ ವರ್ಣನೆಯಲ್ಲಿ ಆಸಕ್ತರಾಗಿದ್ದಾರೆ. ಆ ಹರಟೆಯಲ್ಲಿ ಮೈಮರೆತಿರುವ ಗುಂಪಿನ ಅತ್ತಕಡೆ ಶ್ರಮಣಕನು ಕುಳಿತಿದ್ದಾನೆ. ಅವನಿಗೆ ಇಂದು ಎಲ್ಲವೂ ಇಷ್ಟು ವಿಚಕ್ಷಣೆಯಿಂದ ನಡೆದುಹೋಯಿತಲ್ಲ ಎಂದು ಬೇಕಾದಷ್ಟು ಸಂತೋಷ, ಮಿಕ್ಕವರಿಗೆಲ್ಲ ತಾವುಂಡುದು ತಾವು ಚೆಲ್ಲಿದುದು ಇದನ್ನು ವರ್ಣಿಸಿಕೊಳ್ಳುವ ಸಂತೋಷ. ಹೀಗೆ ಅವರವರ ಸಂತೋಷದಲ್ಲಿ ಅವರವರು ಮೈಮರೆತಿರುವಾಗ ಶ್ರಮಣಕನು ಇದ್ದಕ್ಕಿದ್ದಹಾಗೆಯೇ ' ಹೋ ' ಎಂದು ಅರಿಚಿಕೊಂಡು ತಾನು ದೇವರು ಇಟ್ಟಿದ್ದ ಕಡೆಗೆ ಮೊಗಮಾಡಿಕೊಂಡು ಬಿದ್ದನು.

ಎಲ್ಲರ ಗಮನವೂ ಹಠಾತ್ತಾಗಿ ಅತ್ತಕಡೆಗೆ ತಿರುಗಿತು. ಎಲ್ಲರೂ ಬಂದು ಅವನನ್ನು ಮುತ್ತಿಕೊಂಡರು. ಒಬ್ಬೊಬ್ಬರಿಗೂ ಶ್ರಮಣಕನಿಗೆ ಏನಾಯಿತೋ ಉಪಚಾರ ಮಾಡಬೇಕು ಎಂದು ಆಸೆ. ಒಂದು ಗಳಿಗೆಯೊಳಗಾಗಿ ನಾಯಕನು ತಾನೇ ಬಂದು ಮಗ್ಗುಲಲ್ಲಿ ಕುಳಿತು ಉಪಚಾರ ಮಾಡುತ್ತಿದ್ದಾನೆ. ಅವನ ಅಪ್ಪಣೆಯಂತೆ ಆಗಲೇ ಕರ್ಪೂರ ಅರಿಸಿನ ಕುಂಕುಮಗಳೂ ಹಣ್ಣೂ ಕಾಯಿಗಳೂ ಅಲ್ಲಿಗೆ ಬಂದುಬಿಟ್ಟಿವೆ. ಶ್ರಮಣಕನಿಗೆ ಮೈಮೇಲೆ ದೇವರು ಬಂದಿದೆ. ಅರಿಸಿನ ಕುಂಕುಮಗಳನ್ನು ಹಿಡಿಹಿಡಿಯಾಗಿ ಒಪ್ಪಿಸಿ ಬೇಕಾದಹಾಗೆ ಧೂಪದ ಧೂಮವನ್ನು ಹಾಕಿದ ಮೇಲೆ ದೇವರು ಮಾತನಾಡುವುದಕ್ಕೆ ಆರಂಭವಾಯಿತು.

ಭಕ್ತರು ಇನ್ನಾರೂ ಇಲ್ಲದಿರಲು ನಾಯಕನೇ ಭಕ್ತನಾಗಿ ನಿಂತು ಪ್ರಶ್ನೆಗಳನ್ನು ಕೇಳಿದನು. ದೇವರೂ ಅನುಗ್ರಹಮಾಡಿ ಅಲ್ಲೊಂದು ಮಾತು ಇಲ್ಲೊಂದು ಮಾತು ಆಡಿತು. ಭಕ್ತನೂ ಸುತ್ತಮುತ್ತಲಿನ ಜನರೂ ಬಹು ಕಷ್ಟದಿಂದ ಅದನ್ನು ಅರ್ಥಮಾಡಿಕೊಂಡರು.

'ತಾವು ಯಾರು?'

ದೇವರು ಉತ್ತರಕೊಡಲಿಲ್ಲ. ಕೈಯಿಂದ ದೇವರಿದ್ದ ಕಡೆಯನ್ನು ತೋರಿಸಿತು.

'ತಾವು ವಾಸಂತಿಯಮ್ಮನವರೋ?'

ದೇವರು ತಲೆಯಲ್ಲಾಡಿಸಿ ಹೌದೆಂದಿತು.

'ಈಗ ಏನು ತಾಯಿಯವರು ದಯಮಾಡಿಸಿದುದು?'

ದೇವರು ಹಲ್ಲು ಹಲ್ಲು ಕಡಿದು ಮೊರೆಯಿತು. ಎಲ್ಲರೂ ನಡುಗಿದರು.

ಭಕ್ತನು ಇನ್ನಷ್ಟು ಅರಸಿನ ಕುಂಕುಮಗಳನ್ನರ್ಚಿಸಿ, 'ತಾಯಿ! ನಮ್ಮನ್ನು ಕಾಪಾಡು. ನಾವೇನೂ ಅಪರಾಧ ಮಾಡಿಲ್ಲ' ಎಂದು ಬೇಡಿಕೊಂಡು ನಮಸ್ಕಾರಮಾಡಿದನು.

ದೇವರು ಕೊಂಚ ಶಾಂತವಾಗಿ, 'ನೀವೆಲ್ಲ ಮಾತುಕೊಡಿ' ಎಂದಿತು.

ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡಿದರು. ಕೊನೆಗೆ ಭಕ್ತನೇ ಮುಂದಾಳಾಗಿ, 'ಅಪ್ಪಣೆಯಾಗಲಿ' ಎಂದನು.

ದೇವರು ಹೇಳಿತು: 'ನಮ್ಮ ಶ್ರಮಣ ಬಹಳ ಒಳ್ಳೆಯ ಭಕ್ತ. ಅವನ ವ್ರತವೆಲ್ಲ ನಿಮ್ಮಿಂದ ಕೆಟ್ಟಿದೆ. ನಿಮ್ಮ ಕೈ ರಕ್ತ. ನನಗೆ ರಕ್ತ ಕೂಡದು'

ಎಲ್ಲರಿಗೂ ಅರ್ಥವಾಯಿತು. 'ನ್ಯಾಯ. ಶ್ರಮಣನು ಜೈನ. ನಾವು ಮಾಂಸವನ್ನು ತಿನ್ನುವವರು. ನಮ್ಮಿಂದ ಅವನ ಪೂಜೆ ಕೆಟ್ಟಿರಬಹುದು' ಎಲ್ಲರೂ ಒಪ್ಪಿಕೊಂಡರು.

ಭಕ್ತನು ಮತ್ತೆ ಕೇಳಿದನು: 'ಅದಕ್ಕೇನು ಮಾಡಬೇಕು? ಅಪ್ಪಣೆಯಾಗಲಿ'

'ಇನ್ನು ಎರಡು ತಿಂಗಳು ನೀವು ರಕ್ತವನ್ನು ಮುಟ್ಟಲೇಕೂಡದು'

'ನಾವು ದೊರೆಗಳ ಕಡೆಯವರು. ಸೈನ್ಯದವರು. ಯಾವಾಗ ಯುದ್ಧವಾಗುವುದೋ ಏನೋ? ನಾವು ಹೇಗೆ ಆಣೆಯಿಟ್ಟುಕೊಳ್ಳುವುದು?'

'ಈ ವಿಷಯಕ್ಕೆಲ್ಲ ನಾನೇ ಒಡಿತಿ. ನಾನು ಬೇಕಾದವರನ್ನು ದೊರೆಮಾಡಬಲ್ಲೆ. ಬೇಡದವರನ್ನು ಹೀಗೆ ಹಾರಿಸಬಲ್ಲೆ' ಅರಿಶಿನವನ್ನು ತೆಗೆದುಕೊಂಡು ಊದಿತು.

ಭಕ್ತ ಕದಂಬವು ಇನ್ನೂ ಮನಸ್ಸು ಮಾಡಲಿಲ್ಲ. ದೇವರು ಮತ್ತೆ ರೇಗಿ ಹೇಳಿತು: 'ನೀವೆಲ್ಲ ಕೃತಘ್ನರು. ನನ್ನವನು ನನಗೆ ಕೊಟ್ಟ ಹಣವನ್ನು ಬಿಚ್ಚಿಕೊಳ್ಳುತ್ತೀರಿ. ನನ್ನ ಮಾತು ಕೇಳುವುದಿಲ್ಲ. ನಿಮ್ಮನ್ನೆಲ್ಲ ಧ್ವಂಸಮಾಡುತ್ತೇನೆ'

ಎಲ್ಲರೂ ಬೆಚ್ಚಿದರು. ಕೊನೆಗೆ ಎಲ್ಲರೂ ಒಬ್ಬೊಬ್ಬರಾಗಿ ಪ್ರತಿಜ್ಞೆ ಮಾಡಿದರು. ದೇವರು ಮೆಚ್ಚಿಕೆಯ ತಲೆದೂಗಿನಿಂದ ಹೇಳಿತು: 'ನೀವು ಹೆದರಬೇಕಾಗಿಲ್ಲ. ಇನ್ನು ಹತ್ತು ಹದಿನೈದು ದಿನಗಳೊಳಗಾಗಿ ಒಂದು ಆಪತ್ತು ಬರುವುದು. ಆಗ ನೀವು ಎದೆಗೆಡಬೇಡಿ. ರಾಜ್ಯವು ಕೈಬದಲಿಸುವುದು. ಈ ರಾಜನು ಹೋಗಿ ಇನ್ನೊಬ್ಬ ರಾಜನು ಬರುವನು. ನೀವೂ ಹಳೆಯ ರಾಜನನ್ನು ಬಿಟ್ಟು ಹೊಸರಾಜನನ್ನು ಹಿಡಿಯಿರಿ. ನಿಮಗೆಲ್ಲ ಗೆಲುವಾಗುವುದು'

ಭಕ್ತರು ಇನ್ನೇನೋ ಕೇಳಬೇಕೆಂದು ಹೋದರು. ದೇವರು ಉತ್ತರ ಕೊಡಲಿಲ್ಲ. ಉತ್ತರ ಪ್ರತ್ಯುತ್ತರಗಳನ್ನೆಲ್ಲ ಒಂದೇ ಮಾತಿನಲ್ಲಿ ಮುಗಿಯಿಸಿತು: 'ನನ್ನ ಮಾತು ಕೇಳದಿದ್ದರೆ ನೀವೆಲ್ಲ ಮಣ್ಣಿಗೆ ಮಣ್ಣು ಮುಕ್ಕುವಿರಿ' ಎಂದು ಎಚ್ಚರಿಕೆ ಕೊಟ್ಟು ದೇವರು ಮತ್ತೆ ಮೈ ಬಿಟ್ಟಿತು.

ಎಲ್ಲರೂ ಮತ್ತೆ ಸಂದೇಹಭ್ರಾಂತರಾಗಿ ಏನುಮಾಡುವುದು ಎಂಬುದನ್ನರಿಯದೆ ಹೋದರು. 'ಈಗಿರುವ ರಾಜನು ಹೋಗಿ ಮತ್ತೊಬ್ಬ ರಾಜನು ಬರುವನು. ನೀವು ಅವನಕಡೆ ಸೇರಿಕೊಳ್ಳಿ. ಇಲ್ಲದಿದ್ದರೆ ಮಣ್ಣು ಮುಕ್ಕುವಿರಿ' ಹಾಗಾದರೆ ಈಗ ಉಪ್ಪು ತಿನ್ನುತ್ತಿರುವ ದಣಿಗೆ ಎರಡು

ಬಗೆಯುವುದು ಹೇಗೆ? ಏನೋ ಪ್ರಾಣಸಂಕಟ. ಈ ಮಾತು ಒಪ್ಪಿಕೊಳ್ಳು ವುದು ಹೇಗೆ? ಒಪ್ಪಿಕೊಳ್ಳದಿದ್ದರೆ ಹೇಗೆ? 'ಈ ದೇವರ ಹಣ ತಿಂದ ಮೇಲೆ ಆಗಲಿ. ಏನೇನು ಆಗುತ್ತದೆಯೋ ನೋಡೋಣ ಈಗೇಕೆ ಆ ಮಾತು? ಬಹುಶಃ ಮತ್ತೊಬ್ಬ ರಾಜನು ಬರುವನು ಎನ್ನುವುದು ಈ ಹೊಸ ಮಾಂಡಲಿಕನನ್ನೇ ಕುರಿತೋ ಏನೋ?' ಎಂದು ಹಲವು ವಿಧವಾಗಿ ಮಾತನಾಡಿಕೊಂಡು ಎಲ್ಲರೂ ಒಬ್ಬೊಬ್ಬರಾಗಿ ಹೋದರು.

ಶ್ರಮಣಕನಿಗೆ ಇನ್ನೂ ಜ್ಞಾನವು ಬಂದಿರಲಿಲ್ಲವಾಗಿ ನಾಯಕನು ಅಲ್ಲಿಯೇ ಉಳಿದನು. ಅವನಿಗೆ ಪರಮಾಪ್ತರಾಗಿರುವವರು ಇಬ್ಬರು ಮಾತ್ರ ಅಲ್ಲಿ ನಿಂತರು. ಮಿಕ್ಕವರೆಲ್ಲರೂ ಹೊರಟು ಹೋದ ಮೇಲೆ ಶ್ರಮಣಕನು ಎದ್ದನು. ನಾಯಕನು, 'ಏನಯ್ಯಾ? ಒಳ್ಳೆಯ ನಾಟಕವನ್ನಾಡಿದೆ. ನಾನು ಈ ನಾಟಕವು ಇಷ್ಟು ಫಲಕಾರಿಯಾಗುವುದೆಂದುಕೊಂಡಿರಲಿಲ್ಲ' ಎಂದನು.

ಶ್ರಮಣಕನು ಸುತ್ತಲಿದ್ದವರನ್ನು ಕುರಿತು, 'ನೋಡಿಯಪ್ಪಾ! ನಾಯಕರ ಆಟವನ್ನು. ಇದು ನನ್ನ ನಾಟಕವಂತೆ! ತಾವೇ ನನ್ನ ಕುಣಿಸಿ ಈಗ ನನ್ನನ್ನೆ ದೂರುವರಲ್ಲ?' ಎಂದನು.

ಎಲ್ಲರೂ ಘೊಳ್ಳೆಂದು ನಕ್ಕರು. ನಾಯಕನೂ, 'ನೋಡಿರಯ್ಯಾ! ಮರಳಿ, ಮರಳಿ, ಮಂಚಕ್ಕೆಷ್ಟೇ ಕಾಲು ಎಂದರೆ ಮೂರೂ ಮತ್ತೊಂದು ಎಂದಳಂತೆ! ಹಾಗೆ! ಇವನು ಬಂದಾಗ ಆ ಗಾಬರಿಯೇನು? ಆ ಪೊಣಕಾಟ ಏನು? ಈಗ ನೋಡಿ, ನಮ್ಮನ್ನೆಲ್ಲ ಬುಟ್ಟಿಗೆ ಹಾಕಿಕೊಂಡು ಬೇಕಾದ ಹಾಗೆ ಕುಣಿಸುತ್ತಿದ್ದಾನೆ' ಎಂದನು.

ಮಿಕ್ಕವರೆಲ್ಲರೂ, 'ಇಲ್ಲ, ಇಲ್ಲ, ನಾಯಕರ ಮಾತು ನಾವು ನಂಬು ವುದಿಲ್ಲ. ಶಮಣಪ್ಪನು ಆಗಲೂ ಒಂದೇ! ಈಗಲೂ ಒಂದೆ! ಪ್ರಭು ಗಳವರು ದೊಡ್ಡ ಮನಸ್ಸು ಮಾಡಿ ಆವನನ್ನು ಹತ್ತಿರ ಸೇರಿಸಿಕೊಂಡಿದ್ದಾರೆ, ಅಷ್ಟೆ!' ಎಂದರು.

ನಾಯಕನಿಗೂ ಆ ಸ್ತುತಿಯ ಮಾತು ಒಪ್ಪಿತು: ಅಡ್ಡಮಾತು ತೆಗೆದು ಹೇಳಿದನು: 'ಆಯಿತು, ಇಪೊತ್ತು ರಾತ್ರಿಗೆ ಧೂಮಕೇತು ತೋರಿಸುವುದಕ್ಕೆ ನವಿಲು ಸಿಕ್ಕಿತೇನಪ್ಪ?'

'ನವಿಲು ಬೇಡ, ಗಿಣಿಯಾಗಲಿ ಎಂತ ಅಪ್ಪಣೆಯಾಯಿತು?'

'ಮರೆತಿದ್ದೆ. ಅದರ ಬಾಲಕ್ಕೆ ಇನ್ನಷ್ಟು ಏನಾದರೂ ಕಟ್ಟಿ, ದೊಡ್ಡ ಮರದ ಮೇಲಿಂದ ಹಾರಿಸಿ. ಮೊನ್ನೆ ಹಾಗೆ ಮಾಡಬೇಡಿ. ಅದು ಯಾರು ಕಟ್ಟಿದರೋ ಆ ಒಣ ಕೊಂಪೆಯನ್ನು, ಅದು ಭದ್ರವಾಗಿರಲಿಲ್ಲ, ಅದು ಮುದುಕನ ತಲೆಯ ಹಾಗೆ ನಡುಗುತ್ತಿತ್ತು'

'ಇಲ್ಲ. ಈ ಸಲ ನೇರವಾಗಿರುತ್ತದೆ'

ನಾಯಕನು ಇಷ್ಟು ಮಾತನಾಡುತ್ತಿದ್ದರೂ ಶ್ರಮಣನು ಉಸಿರೆತ್ತಲಿಲ್ಲ, ಕೊನೆಗೆ ಅವನಾಗಿ ಮಾತನಾಡಿಸಿದ ಮೇಲೆ, 'ಈ ನಾಟಕದಲ್ಲಿ ಅರ್ಥವಾಯಿತು' ಎಂದನು.

ಶ್ರಮಣಕನು ಒಂದೊಂದು ಮಾತಿನವನು. ಅದರಿಂದ ಅವನು ಹೆಚ್ಚು ಹೇಳಲಿಲ್ಲವೆಂದು ಯಾರೂ ಅಸಂತುಷ್ಟರಾಗಲಿಲ್ಲ.

ಎಲ್ಲರೂ ಹೊರಟಾಗ ಶ್ರಮಣನು ನಾಯಕನನ್ನು ಕರೆದು 'ಅಲ್ಲಿನ ಗಜವೀಧಿಯ ಸಮಾಚಾರವೇನು?' ಎಂದು ಕೇಳಿದನು.

'ಅದೂ ಗೆದ್ದ ಹಾಗೆ! ನಾನು ಅದು ಸುಲಭವೆಂದುಕೊಂಡಿರಲಿಲ್ಲ. ಅಲ್ಲಿ ನಮ್ಮ ಧೂಮಕೇತುಗಳು ಬೇಕಾದಷ್ಟು ಕೆಲಸಮಾಡಿವೆ. ಹೊನ್ನೂ ಅಷ್ಟು ಹೆಚ್ಚು ಬೇಕಾಗಿಲ್ಲ. ಅಂತೂ ಮೀನು ಗಾಳ ಮುಟ್ಟಿದೆ ಎಂದು ಧೈರ್ಯವಾಗಿ ಹೇಳಬಹುದು. ಇನ್ನೂ ನುಂಗಿಲ್ಲ ಅಷ್ಟೆ! ಆಯಿತು, ಶ್ರೀಶೈಲದ ವಿಚಾರವೇನಂತೆ'

'ದುರ್ಗವು ಕೈಸೇರಿತು'

'ಆ! ನಿಜವಾಗಿಯೂ?'

'ನಾಳೆ ಇಲ್ಲ ನಾಳಿದ್ದು ಬನವಾಸಿಯೂ ಬುಟ್ಟಿಗೆ ಬಿದ್ದಾಗಲಾದರೂ ನಂಬಬಹುದಲ್ಲ?'

——o——

## ಮೂವತ್ತೈದನೆಯ ಪ್ರಕರಣ.

ಅಮಾವಾಸ್ಯೆ. ರಾತ್ರಿ ಮೊದಲನೆಯ ಝಾವ. ನಂದಿವರ್ಮನು ಆಗತಾನೇ ಕಾರ್ಯಕ್ಷೇತ್ರದಿಂದ ಹಿಂತಿರುಗಿ ಬಂದಿದ್ದಾನೆ. ನಗರಾಧ್ಯಕ್ಷನು ಬಂದು ಕಾಣಿಸಿಕೊಂಡನು. ನಂದಿವರ್ಮನಿಗೆ ಬೇಕಾದಷ್ಟು ಬೇಸರವಾಗಿ ಹೋಗಿದ್ದರೂ ನಗುತ್ತಲೇ ಮಾತನಾಡಿದನು: 'ಓಹೋ! ಸ್ಥಾನಾಧಿಪತಿಗಳೇ! ದಯಮಾಡಿಸಿ. ವರ್ತಮಾನವೇನು? ನಾಳೆಯ ರಾಜಸಭೆಗೆ ಬೇಕಾದ ಎಲ್ಲವೂ ಸಿದ್ಧವಾಗಿದೆಯೋ?'

ಸ್ಥಾನಾಧಿಪತಿಯು ಅಂಜಿಕೊಂಡವನಂತೆ ಅರೆ ಅರೆಯಾಗಿ ಮಾತನಾಡುತ್ತ ಹೇಳಿದನು: 'ಪ್ರಭು! ನಾಳೆ ಯುದ್ಧವಾಗುವುದೆಂದು ನಗರದಲ್ಲಿ ಸುದ್ದಿಯೊಂದು ಹೊರಟಿದೆ. ಅದರಿಂದ ಎಲ್ಲರೂ ಕೊಂಚ ಹೆದರಿದ್ದಾರೆ. ಯಾರಿಗೂ ಅಷ್ಟು ಉತ್ಸಾಹವಿಲ್ಲ!'

'ಈ ಸುದ್ದಿಗಳಿಗೇನು? ರಾಜಧಾನಿಯ ಬಳಿಯಲ್ಲಿ ಯುದ್ಧವಾಗಬೇಕಾಗಿದ್ದರೆ ಮಿಕ್ಕ ಕಡೆಗಳಲ್ಲಿ ಎಲ್ಲಿಯೂ ಅದರ ಸುಳಿವೇ ಬೇಡವೇ? ಯುದ್ಧಕ್ಕೆ ಶತ್ರುವೆಲ್ಲಿ? ಅವನ ಸೈನ್ಯವೆಲ್ಲಿ? ಆ ಅಭಿನವ ಶಾಲಿವಾಹನನು ಎಲ್ಲಿಂದ ಬಂದ? ಈ ಜೊಳ್ಳುಸುದ್ದಿಗಳಿಗೆಲ್ಲ ಅನುಭವಶಾಲಿಗಳಾದ ತಾವೂ ಕಿವಿಜೋಲು ಬಿಡಬಹುದೆ? ನಗರಾಲಂಕಾರಾದಿಗಳು ಎಂದಿನಂತೆ ನಡೆಯಲಿ. ಹಬ್ಬವೂ ಎಂದಿನಂತೆ ಸಂಭ್ರಮವಾಗಿ ನಡೆಯುವುದು. ರಾಜಧಾನಿಯ ಬಳಿಯಲ್ಲಿ ನಾಳೆ ಯುದ್ಧ! ಸಮ್ರಾಜನ ಅಧಿಕಾರಿಗಳು ಏನು ಅರಳು ತಿನ್ನುತ್ತಿರುವರೋ? ದಿಗಿಲಿಲ್ಲ. ಯುದ್ಧವಿದ್ದರೆ ನಮಗಿರಲಿ, ಹಬ್ಬವನ್ನು ತಾವು ಮಾಡಿಸಿ'

ಸ್ಥಾನಾಧಿಪತಿಯು ಶಂಕಿಸುತ್ತ ಹೇಳಿದನು: 'ಪ್ರಭೂ! ಶ್ರೀಶೈಲದಂತೆ ಬನವಾಸಿಯೂ ಆದೀತು ಎಂದು ಜನಗಳು ಹೆದರಿದ್ದಾರೆ'

ನಂದಿವರ್ಮನು ಬೆಚ್ಚಿದನು: 'ಏನು? ಶ್ರೀಶೈಲದಂತೆ ಬನವಾಸಿಯೂ ಆದೀತು? ಹಾಗಿದ್ದರೆ ಜನರಿಗೆಲ್ಲ ತಿಳಿದಿದೆ. ಇನ್ನು ಕಷ್ಟ! ಈ ಊರಿನಲ್ಲಿ

ಎಷ್ಟು ಜನರು ಪ್ರತಿಭಟಿಸುವರೋ ? ಈ ಊರಿಗೆ ತಿಳಿದುದು ಈ ನಾಡಿಗೂ ತಿಳಿದಿದ್ದರೆ?' ಎಂದು ಒಳಗೊಳಗೇ ಬೆಚ್ಚಿದರೂ ಸಚಿವನು ಸುಪ್ರಸನ್ನವದನದ ಹಾಸ್ಯಮುದ್ರೆಯಿಂದಲೇ ಕೇಳಿದನು: 'ತಮಗೆ ಈ ಸುದ್ದಿಯನ್ನು ಹೇಳಿದವರಾರು ?'

'ಮಹಾಸ್ವಾಮಿ! ಈ ಊರಿನ ಸಮುದ್ರ ಸೆಟ್ಟಿಗೆ ಶ್ರೀಶೈಲದಲ್ಲಿ ವ್ಯಾಪಾರವುಂಟು. ಅಲ್ಲಿಂದ ಆತನಿಗೆ ರಹಸ್ಯವಾಗಿ ಪತ್ರಬಂದಿದೆ. ಅಲ್ಲದೆ ಅದೆಂತೋ ಏನೋ ಊರಲ್ಲೆಲ್ಲಾ ಈ ಸುದ್ದಿ ಹೊರಟಿದೆ. ನನ್ನ ಕರಣೀಕನು ಈ ದಿನ ಸಾಯಂಕಾಲ ಬಂದು ನನಗೆ ತಿಳಿಸಿದನು. ಕೂಡಲೆ ಸಮುದ್ರ ಸೆಟ್ಟಿಯನ್ನು ಕರೆಯಿಸಿ ಕೇಳಿದೆ. ಆತನು ರಾಜರಹಸ್ಯವೆಂದು ತನಗೆ ತಿಳಿದುದನ್ನು ಹೇಳಿದನು. ಎಲ್ಲದಕ್ಕಿಂತಲೂ ಅತಿಶಯವೆಂದರೆ, ಆ ಹಿಂದಿನ ಅರಸರ ವಂಶದ ಮಯೂರನು ಈ ದಿನ ಇಲ್ಲಿಗೆ ಬಂದಿರುವನಂತೆ!'

'ಏನು!'

'ಮಯೂರನು ಇಲ್ಲಿಗೆ ಬಂದಿರುವನಂತೆ!'

'ಇದು ಸುಳ್ಳು. ಅಪ್ಪಣೆಯ ಚೀಟಿಯಿಲ್ಲದೆ ಯಾರೂ ನಗರವನ್ನು ಪ್ರವೇಶಿಸಲಾರರು'

'ಹೌದು. ಅದನ್ನು ನಾನು ಬಲ್ಲೆ. ಆದರೂ ವದಂತಿ'

'ಅದನ್ನು ನಂಬುವುದಕ್ಕಾಗುವುದಿಲ್ಲ'

'ಈಗಲಾದರೂ ನಂಬಬಹುದಲ್ಲ?' ಎಂದು ಯಾರೋ ಒಳಗೆ ಬಂದರು.

ಸಚಿವನು ತಟ್ಟನೆದ್ದು ತನ್ನ ಅಧಿಕಾರದರ್ಪವನ್ನು ಸಂಪೂರ್ಣವಾಗಿ ತೋರಿಸುತ್ತ, 'ಯಾರು ನೀನು ? ಅಪ್ಪಣೆಯಿಲ್ಲದೆ ಹೇಗೆ ಬಂದೆ ?' ಎಂದು ಗದರಿಸಿದನು.

ಬಂದವನು ಮಿಂಚಿನ ವೇಗದ ನೋಟದಿಂದ ಸುತ್ತಲೂ ಒಮ್ಮೆ ನೋಡಿ ಸಣ್ಣ ನಗು ನಗುತ್ತಾ ಹೇಳಿದನು: 'ಇವೊತ್ತಿಗೆ ತಮ್ಮ ಅಪ್ಪಣೆಯು ಮುಗಿಯಿತು. ಇನ್ನು ಮುಂದಿನ ಅಪ್ಪಣೆಯು ನನ್ನದು. ನಾನೇ ನರಸಿಂಹದತ್ತ! ತಾವು ಹುಡುಕುತ್ತಿದ್ದವನು!' ಎಂದನು.

ನಂದಿವರ್ಮನಿಗೆ ಏನು ಹೇಳಲೂ ತೋರಲಿಲ್ಲ. ತಲೆಯು ತಿರುಗಿದಂತಾಗಿ ತಲೆಯಲ್ಲಿದ್ದ ಬುದ್ಧಿಯೆಲ್ಲವೂ ಒಂದೇ ಸಲಕ್ಕೆ ಉರಿದುಹೋದಂತಾಗಿ ಏನೂ ತೋರದೆ ಕುಸಿದು ಬಿದ್ದಂತೆ ಆಸನದಲ್ಲಿ ಕುಕ್ಕುರಿಸಿಕೊಂಡನು. ಸ್ಥಾನಾಧಿಪತಿಯು ಬೆಪ್ಪಾಗಿ ಹೋಗಿದ್ದಾನೆ. ಅಂಗಾಂಗಗಳ ಚೇಷ್ಟೆಗಳೇ ಉಡುಗಿಹೋಗಿವೆ.

ದತ್ತನು ಸಣ್ಣ ಸಿಳ್ಳು ಹೊಡೆಯುತ್ತಾ ಇಬ್ಬರು ಅಧಿಕಾರಿಗಳನ್ನೂ ಆ ಕೋಣೆಯನ್ನೂ ಮಿಂಚಿನ ವೇಗದಿಂದ ಪರೀಕ್ಷಿಸಿ, ತಾನು ನಿಂತಿರುವ ಸ್ಥಳದಲ್ಲಿ ತಾನು ಮೇಲೆ ಬೀಳುವುದಕ್ಕೆ ಇರುವ ಅನುಕೂಲಗಳನ್ನು ಗ್ರಹಿಸಿ, ಸೆಡೆದುಕೊಂಡು ಹೇಳಿದನು: 'ಸಂಧಿವಿಗ್ರಹಿಗಳೂ ಸ್ಥಾನಾಧಿಪತಿಗಳೂ ಸೆರೆಯಾಗಿದ್ದಾರೆ. ಒಂದು ಹಜ್ಜೆ ಮುಂದಿಟ್ಟರೆ ಅಪಾಯವಾಗುವುದರಲ್ಲಿ ಸಂಶಯವಿಲ್ಲ'

ಅಷ್ಟರೊಳಗಾಗಿ ಭಟರು ಬಂದರು. ನಂದಿವರ್ಮನು ಚೇತರಿಸಿಕೊಳ್ಳುವುದರೊಳಗಾಗಿ ನಾಲ್ವರು ಆತನನ್ನು ಆಕ್ರಮಿಸಿದರು. ಭಟರು ಸಚಿವನನ್ನು ಮುಟ್ಟುವುದಕ್ಕೂ ದತ್ತನ ಅಪ್ಪಣೆಯಿಲ್ಲ. ಅವರು ಹಿರಿದ ಕತ್ತಿಗಳನ್ನು ಹಿಡಿದು ಆತನ ಸುತ್ತಲೂ ನಿಂತಿದ್ದರು. ಸ್ಥಾನಾಧಿಪತಿಗೆ ನಾಲಗೆಯೇ ಆಡಲಿಲ್ಲ. ಉದ್ದಿನ ಮೂಟೆಯನ್ನು ಉರುಳಿಸುವುದಕ್ಕಿಂತಲೂ ಸುಲಭವಾಗಿ ಅವನನ್ನು ಕಟ್ಟಿ ಎಳೆದುಕೊಂಡು ಹೋದರು. ಮತ್ತೆ ದತ್ತನು ನಂದಿವರ್ಮನನ್ನು ವಿನಯದಿಂದ ಮಾತನಾಡಿಸಿದನು:

'ಸಚಿವರು ಇನ್ನು ಏಳುವುದು ಉತ್ತಮ. ಎರಡು ದಿನದಿಂದಲೂ ತಮಗೆ ಲಭಿಸದಿದ್ದ ವಿಶ್ರಾಂತಿಯನ್ನು ಕೊಡುವುದಕ್ಕೆ ಬಂದಿರುವ ನಾನು ತಮ್ಮ ಮಿತ್ರನಲ್ಲದೆ ಶತ್ರುವಲ್ಲ. ತಾವಿನ್ನು ಹೊರಡೋಣವಾಗಲಿ'

ನಂದಿವರ್ಮನ ನಾಲಗೆಯಾಡಿತು: 'ಎಲ್ಲಿಗೆ?'

'ಅದು ತಮ್ಮ ಕೈಯಲ್ಲಿದೆ. ನಾಳಿನ ದಿನ ಸಿಂಹಾಸನದ ಮುಂದೆ ನಿಂತು ರಾಜಭಕ್ತಿ ಪ್ರಮಾಣವನ್ನು ಮಾಡಿದರೆ ಇಲ್ಲಿಯೇ ಇರಬಹುದು. ಇಲ್ಲವಾದರೆ ತಾವು ಬೇಕೆಂದಲ್ಲಿಗೆ ಹೋಗಬಹುದು. ಆದರೆ ಅದಕ್ಕೆ

ಕೊಂಚ ಸಾವಕಾಶ. ಸಮ್ರಾಜರು ಸರಿಯಾಗಿ ಸಂಧಿಯನ್ನು ಮಾಡಿಕೊಳ್ಳು ವವರೆಗೆ ತಾವೆಲ್ಲ ನಮ್ಮ ಮಾನ್ಯ ಅತಿಥಿಗಳು'

ನಂದಿವರ್ಮನಿಗೆ ಹಿಂದಿನ ಹುಮ್ಮಸ್ಸು ತಲೆದೋರಿತು: 'ನಿಮ್ಮದು ರಾಜದ್ರೋಹ, ರಾಜದ್ರೋಹಿಗಳಿಗೆ ತಕ್ಕ ಶಿಕ್ಷೆಯನ್ನು ಮಹಾ ಮಾಂಡಲಿ ಕೇಶ್ವರರು ವಿಧಿಸುವರು' ಎಂದು ಗರ್ಜಿಸಿದನು.

ಬಾಗಿಲಿಂದ ಅಪಹಾಸ್ಯದ ನಗುವು ಕೇಳಿಸಿತು. ಇನ್ನೊ ಒಬ್ಬನು ಪ್ರವೇಶಿಸಿದನು: 'ಹೌದು, ರಾಜದ್ರೋಹವೇ! ಸಂದೇಹವಿಲ್ಲ'

ಬಂದವನು ನಾಡಗೌಡ ಬೀರಯಗೌಡ, ದುರ್ಗದಲ್ಲಿ ಕಾವಲಲ್ಲಿದ್ದ ವನು. ಬಂದವನೇ ಸಚಿವನನ್ನು ನುಂಗುವಂತಹ ನೋಟದಿಂದ ನೋಡುತ್ತ ಹೇಳಿದನು: 'ಮಾಂಡಲಿಕ! ರಾಜದ್ರೋಹಿಯಾರು? ರಾಜಭಕ್ತರಾಗಿದ್ದವ ರನ್ನೆಲ್ಲ ಅನುಮಾನದಿಂದ ಸೆರೆಹಿಡಿದು ಅಪಮಾನಮಾಡಿ ಅವರ ಮನಸ್ಸಿ ನಲ್ಲಿ ವಿಷಬೀಜಗಳನ್ನು ಬಿತ್ತಿದ ನೀನೋ? ಅಪಮಾನವನ್ನು ತಾಳಲಾರದೆ ವಿರೋಧಿಸಿದ ನಾವೋ? ರಾಜದ್ರೋಹಿಗೆ ಶಿಕ್ಷೆಯಾಗಬೇಕು, ನಿಜ. ಆದರೆ ಶಿಕ್ಷೆಯಾಗಬೇಕಾದುದು ನಿನಗೋ ನಮಗೋ?'

'ಆಗಲಿ. ಈಗೇಕೆ ಮಾತು? ಈ ಸುದ್ದಿ ಅರಮನೆಗೆ ತಿಳಿಯಲಿ'

'ಆಹಾ! ಅಗತ್ಯವಾಗಿ! ಇನ್ನೊಂದು ಗಳಿಗೆಯಲ್ಲಿ ಮಹಾಮಾಂಡಲಿ ಕೇಶ್ವರರು ಸಪರಿವಾರರಾಗಿ ತಮ್ಮ ಸಚಿವಮಂಡಲದೊಡನೆ ಹಿಂದಿನ ಅರ ಮನೆಯ ನೆಲಮಾಳಿಗೆಯಲ್ಲಿ ಮಂತ್ರಾಲೋಚನೆಯನ್ನು ನಡೆಯಿಸಬಹುದು'

ನಂದಿವರ್ಮನು ಒಂದೇ ಹಾರಿಗೆ ಹಾರಿ ಬೀರಯನ ಬಳಿಗೆ ಬಂದು, 'ಗೌಡರೇ! ನಿಜ ಹೇಳಿ ಮಾಂಡಲಿಕೇಶ್ವರರ ಗತಿಯೇನಾಗಿದೆ?' ಎಂದು ಗಾಬರಿಯಿಂದ ಕೇಳಿದನು.

ಬೀರಯನು ಈಗ ಮೊದಲಿನಷ್ಟು ಕಠಿಣವಾಗಿ ಹೇಳಲಿಲ್ಲ: 'ಅವರೂ ತಮ್ಮಂತೆಯೇ...............' ಮುಂದೆ ಮಾತು ಹೊರಡಲಿಲ್ಲ.

ಆ ಮಾತನ್ನು ದತ್ತನು ಮುಗಿಸಿದನು: 'ಸಚಿವಾ! ತಾವೆಲ್ಲರೂ ಏಕಕಾಲದಲ್ಲಿ ಆಕ್ರಾಂತರಾಗಿ ಬಂಧಿತರಾಗಿದ್ದೀರಿ. ತಮ್ಮ ಆಲೋಚನಾ

ಮಂದಿರವನ್ನೇ ಮುತ್ತಬೇಕೆಂದು ನಾನು ಸಲಹೆ ಕೊಟ್ಟೆ. ರಕ್ತಪಾತವಾಗ ಬಾರದೆಂದು ಸನ್ನಿಧಾನದ ಅಪ್ಪಣೆಯಾಯಿತು. ಅದರಿಂದ ತಾವೆಲ್ಲರೂ ತಮ್ಮ ತಮ್ಮ ಭವನಗಳನ್ನು ಸೇರಲೆಂದು ಕಾದಿದ್ದೆವು. ಈಗ ಈ ಬನ ವಾಸಿಯ ನಗರದಲ್ಲಿ ಮಾತ್ರವಲ್ಲ. ಈ ಬನವಾಸಿಯ ನಾಡಿನಲ್ಲೇ ತಮ್ಮ ಕಡೆಯವನಾಗಿ ಒಬ್ಬ ಅಧಿಕಾರಿಯೂ ಉಳಿದಿಲ್ಲ. ಇದುವರೆಗೂ ತಮಗೆ ಮೋಸಮಾಡಬೇಕಾಗಿದ್ದಿತು. ಮಾಡಿದೆವು. ಈಗ ಇನ್ನು ನಿಜವನ್ನು ಹೇಳುವ ಕಾಲ ಬಂದಿದೆ: ಹೇಳುತ್ತಿದ್ದೇನೆ, ನಂಬಿ'

ನಂದಿವರ್ಮನು ಹತಾಶನಾದನು. ಆದರೂ ತನ್ನ ಸ್ಥಿತಿಯನ್ನು ತೋರ್ಪಡಿಸಿಕೊಳ್ಳದೆ ಕೇಳಿದನು: 'ಸನ್ನಿಧಾನವೆಂದರೆ ?'

'ಸನ್ನಿಧಾನವೆಂದರೆ ನಮ್ಮ ಅರಸುಕುಮಾರ: ತಮ್ಮ ಮಯೂರ: ಬನವಾಸಿಯ ನ್ಯಾಯವಾದ ಅರಸು'

ದತ್ತನು ಮತ್ತೆ ಹೇಳಿದನು: 'ತಾವು ಬಲಪ್ರದರ್ಶನಮಾಡಿ ಆಪತ್ತಿಗೆ ಗುರಿಯಾಗುವುದು ನನಗೆ ಸಮ್ಮತವಿಲ್ಲ'

ನಂದಿವರ್ಮನು ಮಾತನಾಡದೆ ಅವರ ಹಿಂದೆ ಹೊರಟುಹೋದನು.

———o———

## ಮೂವತ್ತೇಳನೆಯ ಪ್ರಕರಣ

ರಾತ್ರಿಯ ಎರಡನೆಯ ಝಾಮ. ಅದರಲ್ಲಿ ಅರ್ಧವು ಕಳೆಯುವುದ ರೊಳಗಾಗಿ ರಾಜಾಧಿಕಾರಿಗಳೆಲ್ಲರೂ ಸಪರಿವಾರರಾಗಿ ಬಂಧಿತರಾಗಿ ಗುಪ್ತ ಗೃಹದಲ್ಲಿ ಸೇರಿಹೋಗಿದ್ದಾರೆ. ಕೋಟೆಯ ಬಾಗಿಲುಗಳಲ್ಲಿ ಕಾವಲಿದ್ದ ಸೇನಾದಳಗಳ ನಾಯಕರು ಶತ್ರುವಿನ ಕೃತ್ರಿಮಕ್ಕೆ ಒಳಗಾಗಿ ಬಂಧಿತರಾಗಿ ದ್ದಾರೆ. ಇಷ್ಟಾದರೂ ಬನವಾಸಿಯಲ್ಲಿ ಗದ್ದಲವಿಲ್ಲ. ಎಲ್ಲರೂ ಅಲ್ಲಲ್ಲಿ ತಮ್ಮ ತಮ್ಮ ಪಾಡಿಗೆ ತಾವು ತಾವು ಮರುದಿನದ ಹಬ್ಬಕ್ಕಾಗಿ ಎಲ್ಲವನ್ನೂ ಸಿದ್ಧಮಾಡಿ ಕೊಳ್ಳುತ್ತಿದ್ದಾರೆ. ಹೆಂಗುಸರು ಬಾಗಿಲಿಗೆ ಸುಣ್ಣಬಣ್ಣಗಳನ್ನು ಮಾಡು ತ್ತಿದ್ದಾರೆ: ಮನೆಯ ಮುಂದಿನ ಅಂಗಳಗಳನ್ನು ಸಾರಿಸಿ ರಂಗವಲ್ಲಿಗಳನ್ನಿಕ್ಕು ತ್ತಿದ್ದಾರೆ. ಕೆಲವರು ಅವಸರಗಾರರು ಆಗಲೇ ಮಾವಿನ ತೋರಣಗಳನ್ನು

ಕಟ್ಟಿ ಕೊನೆಗಳಲ್ಲಿ ಬೇವಿನ ಕೊನೆಯನ್ನು ಸೆಕ್ಕಿದ್ದಾರೆ. ಇನ್ನು ಕೆಲವರು ವರ್ಷಕ್ಕೊಂದು ಹಬ್ಬವೆಂದು ಬಾಗಿಲಿಗೆ ಬಾಳೆಯ ಕಂಬಗಳನ್ನು ಕಟ್ಟಿದ್ದಾರೆ. ಅಂತೂ ನಗರಲಕ್ಷ್ಮಿಯು ಹೊಸವರ್ಷದ ಹಬ್ಬಕ್ಕೆ ಸಂಭ್ರಮವಾಗಿ ಸಿಂಗರಿಸಿಕೊಳ್ಳುತ್ತಿದ್ದಾಳೆ.

ರಾತ್ರಿಯ ಮೂರು ಝಾಮಗಳು ಕಳೆದುಹೋದುವು. ನಾಲ್ಕನೆಯ ಝಾಮವೂ ಕಳೆಯುತ್ತ ಬಂದಿದೆ. ಇನ್ನೇನು ಕೊಂಚಹೊತ್ತಾದರೆ ಬೆಳಗಿನ ಮುಂಬೆಳಗಿನಲ್ಲಿ ಒಬ್ಬರ ಮುಖವನ್ನೊಬ್ಬರು ನೋಡಬಹುದು. ಹಕ್ಕಿಗಳೆಲ್ಲ ಚಿಲಿಪಿಲಿಗುಟ್ಟುತ್ತಿವೆ. ನಾಗರಿಕರಲ್ಲಿ ಕೆಲವರು ಆಗಲೇ ಎದ್ದಿದ್ದಾರೆ. ದಿಡ್ಡಿಗಳ ಬಾಗಿಲು ತೆಗೆದು ಪ್ರಾತಸ್ಸ್ನಾನಾದಿಗಳಿಗೆ ನದಿಗೆ ಹೋಗುವವರು ಹೋಗುತ್ತಿದ್ದಾರೆ.

ಆ ವೇಳೆಗೆ ಒಂದು ಸೈನಿಕದಳವು ಪೂರ್ವದಿಕ್ಕಿನ ಹೆಬ್ಬಾಗಿಲಿಗೆ ಬಂದು ಅಲ್ಲಿ ಕಾವಲಿದ್ದ ನೂರುಜನ ಸೈನಿಕರನ್ನು ಮಾತನಾಡಿಸಿತು. ಬಂದ ದಳದ ನಾಯಕನು ಮುಂದರಿದು ಬಂದು ಮಾತನಾಡಿದನು: 'ನಾವು ಮಿತ್ರರು, ನೀವು ಆಯುಧಗಳನ್ನು ಎಳೆಯಬೇಕಾಗಿಲ್ಲ'

ಅಲ್ಲಿದ್ದ ದಳದವರಿಗೆ ಆ ಮುಂಬೆಳಗಿನಲ್ಲಿಯೂ ಬಂದಿದ್ದವರ ವೇಷ ಭೂಷಣಗಳು ಬೇರೆಯಾಗಿರುವುದು ತಿಳಿಯಿತು. ಆದರೆ ಮಿತ್ರರೆಂದು' ಹೇಳುತ್ತಿರಲು ದುಡುಕುವುದೆಂತು? ಆದರೂ ಕೇಳದಿರುವುದೆಂತು? ಅದ ರಿಂದ ಆ ದಳದ ಉಪನಾಯಕನು ಕೇಳಿದನು: 'ನೀವು ಯಾರು?'

'ನಾವೂ ನಿಮ್ಮಂತೆಯೇ ರಾಜಸೈನಿಕರು. ನಿಮ್ಮ ನಾಯಕರೆಲ್ಲಿ? ಅವರು ನಮ್ಮನ್ನು ಬಲ್ಲರು'

'ನಿನ್ನೆಯ ರಾತ್ರಿ ಸನ್ನಿಧಿಯಿಂದ ಅರಮನೆಗೆ ಬರಬೇಕೆಂದು ಅಪ್ಪಣೆಯಾಯಿತು. ನಾಯಕರು ಅಲ್ಲಿಗೆ ಹೋಗಿದ್ದಾರೆ'

'ಸರಿ ನಾನೂ ಹೋಗಿದ್ದೆ. ನಮಗೆಲ್ಲ ನಿನ್ನೆಯ ರಾತ್ರಿಯೇ ಉಡು ಗೆರೆಗಳನ್ನು ಕೊಟ್ಟರು. ಈಗ ಸೇನಾನಿಗಳ ಅಪ್ಪಣೆಯಾಗಿದೆ. ಇಲ್ಲಿನ ಕಾವಲು ನಮ್ಮದು. ನೀವು ಅರಮನೆಯ ಮುಂದಕ್ಕೆ ಹೋಗಿ'

ಉಪನಾಯಕನು ತನ್ನ ಕಡೆಯವರ ಮುಖನೋಡಿ ಕೇಳಿದನು:

'ಏನು ಸ್ವಾಮಿ! ನಿನ್ನೆಯ ಸಂಜೆ ಬಂದವರು ನಾವು. ನಾಲ್ಕು ಪಹರಿಗಳು ಕಾದಿದ್ದೇವೆ. ಈಗ ಮತ್ತೆ ಅರಮನೆಯ ಬಳಿಗೆ ಹೋಗಬೇಕೇ?'

ಹೊಸನಾಯಕನು ಹೇಳಿದನು: 'ಅದೇನೋ ನನಗೆ ತಿಳಿಯದು: ಸೇನಾನಿಗಳ ಅಪ್ಪಣೆಯನ್ನು ನಾನು ತಿಳಿಸಿದ್ದೇನೆ. ತಮಗೆ ಸಮ್ಮತವಾಗಿದ್ದರೆ ತಾವು ಹೋಗಬಹುದು. ಇಲ್ಲವಾದರೆ ಇಲ್ಲ, ನಾವಂತೂ ನಮಗೆ ಅಪ್ಪಣೆಯಾದಂತೆ ಕಾವಲಿಗೆ ಬಂದಿದ್ದೇವೆ. ದಯವಿಟ್ಟು ನಮಗೆ ಬೀಗದ ಕೈಗಳನ್ನು ಕೊಟ್ಟುಬಿಡಿ'

'ನಾಯಕರಿಲ್ಲವಲ್ಲ, ನಿಮಗೆ ಬೀಗದ ಕೈಯನ್ನು ಯಾರು ಕೊಡಬೇಕು?'

ಹೊಸದಳದ ನಾಯಕನು ರೇಗಿಹೇಳಿದನು: 'ಏನಿರಿ? ಪಹರಿ ಬಿಟ್ಟುಕೊಡಿ ಎಂದು ಬಂದು ಕೇಳಿದರೆ ತೋರಿದ ಹಾಗೆಲ್ಲ ಮಾತನಾಡುತ್ತೀರಿ? ಬಿಟ್ಟುಕೊಡುವಿರೋ ಇಲ್ಲವೋ? ಅಷ್ಟು ಹೇಳಿ. ನಾನು ಹೋಗಿ ಈಕ್ಷಣ ಸೇನಾನಿಗಳ ಸನ್ನಿಧಿಯಲ್ಲಿ ಅರಿಕೆಮಾಡುತ್ತೇನೆ'

ಕಾವಲಿದ್ದವರಲ್ಲಿಯೇ ಮಾತುಗಳಾಯಿತು. 'ಗುರುತಿನ ಮಾತು ಕೇಳದೆ, ಗುರುತು ತೆಗೆದುಕೊಳ್ಳದೆ, ಬೀಗದ ಕೈಗಳನ್ನೆಂತು ಕೊಡುವುದು? ಹಾಗೆಂದು ಕೊಡದಿರುವುದೆಂತು?' ಕೊನೆಗೆ ಅವರವರಲ್ಲಿಯೇ ಇತ್ಯರ್ಥವಾಯಿತು: 'ಉಪನಾಯಕನು ಗುರುತಿನ ಮಾತು ಕೇಳಿ ಗುರುತು ತೆಗೆದುಕೊಂಡು ಬೀಗದಕೈಗಳನ್ನು ಕೊಟ್ಟು ಬಿಡುವುದು'

ಅದರಂತೆ ಉಪನಾಯಕನು ಬೀಗದ ಕೈಗಳನ್ನು ಹೊರಿಸಿಕೊಂಡು ಮುಂದೆ ಬಂದು ಪ್ರಣಾಮ ವಿಧಿಗಳನ್ನು ಕ್ರಮವಾಗಿ ಆಚರಿಸಿ, 'ಗುರುತೇನು?' ಎಂದು ಕೇಳಿದನು.

ಬಂದವನೂ ವಿಧಿವತ್ತಾಗಿ ಪ್ರತಿಪ್ರಣಾಮವನ್ನು ಆಚರಿಸಿ ನೇರವಾಗಿ ಮುಂದಕ್ಕೆ ಬಂದು ಅವನ ಕೈಹಿಡಿದು ಕುಲಕಿ, 'ಗುರುತಿನ ಮಾತು 'ಯುದ್ಧ' ಇಕೋ ಗುರುತು' ಎಂದು ಅವನ ಕೈಗೆ ಒಂದು ಕಪಿಯ ಬೊಂಬೆಯನ್ನು ಕೊಟ್ಟನು: ಉಪನಾಯಕನಿಗೆ ಆಶ್ಚರ್ಯವಾಯಿತು: ಅವನು ಬೆಪ್ಪಾಗಿ ನಿಂತನು.

ಬಂದವನೂ ಆಶ್ಚರ್ಯವನ್ನು ನಟಿಸಿ, 'ನೀವೇನು ನಿನ್ನೆ ಸಾಯಂಕಾಲ ಬಂದವರೋ? ಅದರಿಂದಲೇ ನಾಲ್ಕನೆಯ ಪ್ರಹರದ ಗುರುತು ನಿಮಗೆ ತಿಳಿಯದು' ಎಂದನು.

ಉಪನಾಯಕನಿಗೆ ಅದು ಸರಿಯಾಗಿ ತೋರಿತು. ಅವನ ಬೀಗದ ಕೈಗಳನ್ನು ಒಪ್ಪಿಸಿ ತನ್ನ ಕಡೆಯವರನ್ನೆಲ್ಲ ಕರೆದುಕೊಂಡು ಹೊರಟನು.

ಬಂದವನು ಅವನನ್ನು ಕರೆದು ಗುಟ್ಟಾಗಿ ಹೇಳಿದನು: 'ನಾಯಕರೇ! ಒಂದು ಗುಟ್ಟು. ತಮ್ಮ ನಾಯಕರು ಎಲ್ಲಿರುವರೋ ಕಾಣೆ. ತಮಗೆ ತಿಳಿದಿರಲಿ. ಈ ದಿನ ಯುದ್ಧವಾಗುವ ಸಂಭವವಿದೆ. ಅದರಿಂದ ನೀವೂ ನಿಮ್ಮವರೂ ಹೊಟ್ಟೆಗೆ ಅಷ್ಟು ನೋಡಿಕೊಂಡು ಅರಮನೆಗೆ ಹೋಗಿ. ಇದರಮೇಲೆ ನಿಮ್ಮಿಷ್ಟ! ಬೇಕಾದರೆ ನಿಮ್ಮ ಆಯುಧಗಳನ್ನೆಲ್ಲ ಇಲ್ಲಿಯೇ ಬಿಟ್ಟುಹೋಗಿ'

ಉಪನಾಯಕನಿಗೆ ಅದು ಸಮ್ಮತವಾಗಿ ತೋರಿತು: 'ನಾಯಕನಿಲ್ಲ, ಒಂದು ವೇಳೆ ಹೋಗಿ ತಿಂಡಿ ತಿಂದು ಬರುವುದು ಅಪರಾಧವಾದರೂ ಆ ಅಪರಾಧದ ಹೊರೆಯು ನಾಯಕನ ಮೇಲೆ ಹೊತ್ತು ತಮಗೆ ಮಾತ್ರ ಒಳ್ಳೆಯ ಹೆಸರೇ ಬರುವುದು. ಹಾಗೆ ಹೋಗಿ ಹೀಗೆ ಬಂದು ಆಯುಧಗಳನ್ನು ತೆಗೆದುಕೊಂಡು ಹೋದರೆ ಆಯಿತು. ಸರಿ' ಎಂದು ತಮ್ಮ ಆಯುಧಗಳನ್ನೆಲ್ಲ ಅಲ್ಲಿಯೇ ಇರಿಸಿ ತಾನು ತನ್ನ ಕಡೆಯವರನ್ನೆಲ್ಲ ಕರೆದುಕೊಂಡು ಹೊರಟನು.

ಇನ್ನೊಂದು ಗಳಿಗೆಯೊಳಗಾಗಿ ಪೂರ್ವದಿಕ್ಕಿನ ಹೆಬ್ಬಾಗಿಲು ತೆರೆದು ಆಗತಾನೇ ಉದಯಿಸುತ್ತಿದ್ದ ಸೂರ್ಯನ ಅರುಣ ಕಿರುಣಗಳು ತೆರೆದ ಬಾಗಿಲಿಂದ ಬನವಾಸಿಯನ್ನು ಪ್ರವೇಶಿಸಿದುವು. ಹೊಸದಳದ ನಾಯಕನು ತನ್ನ ಸೇನಾಧಿಪತಿಗೆ, 'ಕಾರ್ಯವು ನಾವು ನೆನೆಸಿದ್ದುದಕ್ಕಿಂತಲೂ ಸುಲಭವಾಗಿ ಕೈಸೇರಿತು. ನಾವೂ ಕೈಗೊಂಡ ಕಾರ್ಯವನ್ನು ನೆರವೇರಿಸಿ ಕೃತಕೃತ್ಯರಾದೆವು' ಎಂದು ಸುದ್ದಿಯನ್ನು ಕಳುಹಿಸಿದನು.

ಸೈನ್ಯಾಧಿಪತಿ ನರಸಿಂಹದತ್ತನು ತನ್ನ ಕಾರ್ಯಸ್ಥಾನದಲ್ಲಿ ಯೋಚಿಸುತ್ತ ಕುಳಿತಿದ್ದನು: ‹ ಈಗ ಕಂಡ ಹಾಗೆ ಕೋಟೆಯೊಳಕ್ಕೆ ಬಂದಿರುವುದು ಒಂದು ಸಾವಿರ ಪದಾತಿ. ಇಲ್ಲಿ ಈಗ ಒದಗುವುದು ಐದುಸಾವಿರ ಪದಾತಿ, ಎರಡು ಸಾವಿರ ಕುದುರೆ, ದೇವಸ್ಥಾನದಲ್ಲಿರುವುದು ಮೂರುಸಾವಿರ, ಎರಡು ಸಾವಿರ ಇಷ್ಟು ಎಂದರೆ ಐದುಸಾವಿರ ಕುದುರೆ, ಒಂಭತ್ತುಸಾವಿರ ಪದಾತಿ, ಈದಿನ ಒದಗುವುವು. ಇನ್ನೊಂದು ದಿನಗೊಳಗಾಗಿ ಹದಿನಾರು ಗೌಡರ ಹದಿನಾರು ಸಾವಿರ ಕುದುರೆಯ ಸೈನ್ಯವು ಸೇರುವುದು ಮೂರನೆಯ ದಿನಕ್ಕೆ ಅವರ ಹದಿನಾರು ಸಾವಿರ ಪದಾತಿಯೂ ಒದಗುವುದು. ಇದರ ಜೊತೆಗೆ ಒಂದು ಐನೂರು ಆನೆಯಿದ್ದಿದ್ದರೆ, ಈ ಪಲ್ಲವರ ಸೈನ್ಯವನ್ನೆಲ್ಲ ಒಟ್ಟುಸೇರಿಸಿ ಸೊಳ್ಳೆಯನ್ನು ಹೊಸಗಿಬಿಡುವಂತೆ ಹೊಸಗಿಬಿಡುತ್ತಿದ್ದೆ............ ’

ಪ್ರಹರಿಯು ಬಂದು ಅರಿಕೆಮಾಡಿದನು: ‘ ಹೆಬ್ಬಾಗಿಲುಗಳಿಂದ ಸೈನಿಕರು ದರ್ಶನಕ್ಕೆ ಬಂದಿದ್ದಾರೆ’

ಪ್ರಹರಿಗಳು ಬಂದು ಬಗ್ಗಿ ನೆಲಮುಟ್ಟಿ ಕೈಮುಗಿದು ಹೇಳುವ ವರದಿಯನ್ನು ಕೇಳಿ ದತ್ತನಿಗೆ ಬಹುಕಾಲವಾಗಿದ್ದಿತು. ಈ ವರ್ಷಾಂತರಗಳು ಪಟ್ಟಣವನ್ನೂ ಪ್ರವೇಶಿಸದೆ, ಕಳ್ಳರಂತೆ ವೇಷಗಳನ್ನು ಕಟ್ಟಿಕೊಂಡು, ಅನೇಕ ವೇಳೆಗಳಲ್ಲಿ ಹೊಟ್ಟೆಗೂ ಇಲ್ಲದೆ ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಇದ್ದುದೂ ತಲೆಮರೆಯಿಸಿಕೊಂಡು ತಿರುಗುತ್ತಿದ್ದುದೂ ನೆನಪಾಗಿ ದತ್ತನಿಗೆ ನಗು ಬಂದಿತು: ಆದರೂ ಅಧಿಕಾರದ ಗೌರವವನ್ನು ಕಾಪಾಡುವ ಗಾಂಭೀರ್ಯದಿಂದ ‘ ಬರಮಾಡು ’ ಎಂದನು.

ನಾಲ್ವರೂ ಒಬ್ಬೊಬ್ಬರಾಗಿ ಬಂದು ಕೃತಕಾರ್ಯರಾದುದನ್ನು ತಿಳಿಸಿ ಹೋದರು. ದತ್ತನು ‘ನಿಜ. ಅವನು ಹೇಳುವುದು ನಿಜ. ದೈವಸಹಾಯವಿಲ್ಲದಿದ್ದಿದ್ದರೆ, ಈ ಕಾರ್ಯಗಳು ಇಷ್ಟು ಸುಲಭವಾಗಿ ಆಗುವುದೆಂದರೆ ಹೇಗೆ ? ನಿಜ. ಅನುಕೂಲಕಾಲದಲ್ಲಿ ಅಲ್ಪಪ್ರಯತ್ನದಿಂದ ಮಹತ್ತಮವಾದ ಫಲವಾಗುವುದು ’ ಎಂದುಕೊಳ್ಳುತ್ತಾ ಎದ್ದು ಈಚೆಗೆ ಬಂದು ಅರಮನೆಯ ಕಡೆಗೆ ನೋಡಿದನು. ಅಲ್ಲಿನ ಸಿಂಹಧ್ವಜವು ಮಾಯವಾಗಿ ಅದರ ಸ್ಥಾನದಲ್ಲಿ ಕಪಿಧ್ವಜವು ಬೆಳಗಿನ ತಂಗಾಳಿಯೊಡನೆ ನರ್ತಿಸುತ್ತಾ ಬಾಲಸೂರ್ಯನ

ಭಂಗಾರದ ಕಿರಣಗಳೊಡನೆ ಆಟವಾಡುತ್ತಿದ್ದಿತು. ಅದನ್ನು ಕಂಡ ಮೇಲಂತೂ ಆತನ ಆನಂದಕ್ಕೆ ಪಾರವೇ ಇಲ್ಲ. 'ಹೋಗಲಿ. ಬದುಕಿದುದು ಸಾರ್ಥಕವಾಯಿತು. ಕೊನೆಗೆ ಉಪ್ಪಿಟ್ಟ ಒಡೆಯನ ಋಣವನ್ನು ತೀರಿಸಿದೆ ಎಂದುಕೊಳ್ಳುವ ಹಾಗಾದರೂ ಆಯಿತು' ಎಂದು ಆನಂದದ ಕಣ್ಣೀರು ಹರಿಸಿದನು.

ಹಾಗೆಯೇ ಇನ್ನೂ ಏನೇನೋ ಭಾವಗಳು ತಲೆದೋರಿ ಆತನಿಗೆ ಸಹಿಸಲಸಾಧ್ಯವಾದ ಅನಿವರ್ಚನೀಯವಾದ ದುಃಖವೂ ತಲೆದೋರಿ ಆ ವೇದನೆಯನ್ನು ಸಹಿಸಲಾರದೆ ದತ್ತನು ಗಳಗಳಗೆ ಅತ್ತನು.

ದತ್ತನು ಅಳುತ್ತಿರುವಾಲೇ ಪ್ರಹರಿಯು ಮತ್ತೆ ಪ್ರವೇಶಿಸಿ 'ಅರಿಕೆ! ಈಶಭಟ್ಟರು ದಯಮಾಡಿಸಿದ್ದಾರೆ' ಎಂದನು. ಅವನು ಹೇಳಿ ಮುಗಿಸು ವುದರೊಳಗಾಗಿ 'ಸಮಸ್ತ ಸನ್ಮಂಗಳಾನಿ ಭವಂತು' ಎಂದು ಆಶೀರ್ವಾದ ಮಾಡುತ್ತಾ ಈಶಭಟ್ಟನು ಪ್ರವೇಶಿಸಿದನು. ಬಂದ ಹಳೆಯ ಗೆಳೆಯನನ್ನು ಆದರದಿಂದ ಬರಮಾಡಿಕೊಳ್ಳಬೇಕೆಂದು ದತ್ತನು ತನ್ನ ದುಃಖವನ್ನು ನುಂಗಿ ಕೊಳ್ಳಬೇಕೆಂದು ಬಹು ಯತ್ನ ಮಾಡಿದನು. ಆದರೂ ಸಿದ್ಧಿಸಲಿಲ್ಲ.

ಹಾಗೆಯೇ ಕಣ್ಣೀರನ್ನು ಕರೆಯುತ್ತಿರುವ ಕಣ್ಗಳ ಮ್ಲಾನವದನ ದಿಂದಲೇ ದತ್ತನು ಈಶಭಟ್ಟನಿಗೆ ಸ್ವಾಗತವನ್ನು ನೀಡಿದನು. ಭಟ್ಟನನ್ನು ಕಾಣುತ್ತಲೇ ದತ್ತನ ದುಃಖವಿಮ್ಮಡಿಸಿ ಹೋಯಿತು.

ಭಟ್ಟನೂ ಆ ದುಃಖದಿಂದ ಆಹತನಾದನು. ಆದರೂ ತನ್ನ ನಗು ವನ್ನು ಅದಕ್ಕೆ ಮಾರದೇ ಎಳೆನಗು ನಗುತ್ತಾ 'ದತ್ತ! ನಿನಗೇನು ಹುಚ್ಚೇ? ಏಳೇಳೋ? ಇನ್ನಷ್ಟು ಕೆಲಸವಿದೆ. ಅದು ಮುಗಿಸಿಬಿಟ್ಟು ಆಮೇಲೆ ನೀನು ಒಂದು ಮೂಲೆ ಹಿಡಿ. ನಾನೊಂದು ಮೂಲೆ ಹಿಡಿಯುತ್ತೇನೆ. ಇಬ್ಬರೂ ಒಂದೇ ಸಮನಾಗಿ ಒಂದು ಯುಗದ ಅಳುವನ್ನೆಲ್ಲ ಒಂದು ದಿನದಲ್ಲಿ ಅತ್ತು ಬಿಡೋಣ. ಈಗ ಏಳು' ಎಂದನು.

ದತ್ತನು ಎದ್ದು ಭಟ್ಟನನ್ನು ಕರೆದುಕೊಂಡು ಹೋಗಿ ಅರಮನೆಯ ಮೇಲೆ ಹಾರಾಡುತ್ತಿದ್ದ ಕಪಿಧ್ವಜವನ್ನು ತೋರಿಸಿ 'ನೋಡಿದೆಯಾ?'

ಏಂದನು. ಭಟ್ಟನು ಅದನ್ನು ಕಂಡನೋ ಇಲ್ಲವೋ ಆನಂದದಲ್ಲಿ ಮೈಮರೆತು ಹೋದನು. ಆ ಆನಂದದ ಭರದಲ್ಲಿ ದತ್ತನನ್ನು ತಬ್ಬಿಕೊಂಡು ಕುಣಿದು ಬಿಟ್ಟನು. ಅರ್ಥವಿಲ್ಲದ ಸಂಬೋಧನೆಗಳು, ಸಂಬಂಧವಿಲ್ಲದ ವಾಕ್ಯಗಳು, ಅಡಿಗಡಿಗೆ ಕಟ್ಟಿಕೊಳ್ಳುತ್ತಿರುವ ಕಂಠದಿಂದ ಈಚೆಗೆ ಬರಲಾರದೆ ಬರುತ್ತಿರುವ ಅರ್ಧ ಅರ್ಧ ಪದಗಳು, ಹೀಗೆ ಹುಚ್ಚಾಪಟ್ಟೆಯಾಗಿ, ಮೈಮೇಲಿನ ಬಟ್ಟೆಗಳು ಜಾರುತ್ತಿರುವುದನ್ನೂ ಅರಿಯದೆ ಕುಣಿದಾಡುತ್ತಿರುವ ಭಟ್ಟನನ್ನು ನೋಡಿ ದತ್ತನು ತನ್ನ ದುಃಖವನ್ನು ಮರೆತನು. ಭಟ್ಟನನ್ನು ಮತ್ತೆ ಶಾಂತಗೊಳಿಸಿ ಸಮಾಧಾನಪಡಿಸಿ ಮೊದಲಿನಂತೇ ಮನುಷ್ಯನನ್ನು ಮಾಡುವುದಕ್ಕೆ ಅಷ್ಟು ಹೊತ್ತು ಹಿಡಿಯಿತು.

ಕೊನೆಗೆ ಭಟ್ಟನು ಶಾಂತನಾಗಿ 'ದತ್ತ! ಏನೋ ದೈವಕೃಪೆ! ಇಷ್ಟು ದಿನದ ಕಷ್ಟವೂ ಸಾರ್ಥಕವಾಯಿತು ಕಣೋ!' ಎಂದು ಸೊಪ್ಪಾಗಿ ಅಲ್ಲಿದ್ದ ಭವ್ಯಾಸನದ ಮೇಲೆ ಬಿದ್ದನು. ಮತ್ತೆ ಒಂದು ಗಳಿಗೆ ದತ್ತನು ಉಪಚರಿಸಿದ ಮೇಲೆ ಭಟ್ಟನು ಕಣ್ಣುಬಿಟ್ಟು ಕೇಳಿದನು: 'ದತ್ತ! ನಿಜ ಹೇಳು. ಸುಳ್ಳಾಡ ಬೇಡ. ನನ್ನಾಣೆ! ನಿಜಹೇಳು. ಬನವಾಸಿಯು ನಮಗೆ ಸಿಕ್ಕಿದೆಯೇ?'

'ಭಟ್ಟ! ನಿಜವಾಗಿ ಸಿಕ್ಕಿದೆ. ಬನವಾಸಿಯು ಕೈಸೇರಿದೆ. ರಾಜ್ಯಲಕ್ಷ್ಮಿಯು ತಾನಾಗಿ ಬಂದು ಮಾಲೆಯಿಕ್ಕಿದ್ದಾಳೆ. ನಿನ್ನ ಮಯೂರಶರ್ಮನು ಭದ್ರಾಸನದಲ್ಲಿ ಮಂಡಿತನಾಗಿ ರಾಜಾ ಮಯೂರವರ್ಮನಾಗುವ ಸೌಭಾಗ್ಯವನ್ನು ನೋಡುವ ಅದೃಷ್ಟವು ಇಂದು ನಿನ್ನದಾಗಿದೆ. ನಿಜ. ನಂಬು'

ಭಟ್ಟನು ಇನ್ನೂ ಅಪನಂಬಿಕೆಯಿಂದಲೇ ಕೇಳಿದನು: 'ಅವರು ಇಪ್ಪತ್ತು ವರ್ಷ ರಾಜ್ಯವಾಳಿದ್ದಾರೆ. ಇಲ್ಲಿದ್ದವರೆಲ್ಲ ನಮ್ಮವರೇ ಅಹುದು. ಆದರೂ ಅವರಲ್ಲಿ ಎಷ್ಟುಜನ ಅವರ ಕಡೆಗೆ ತಿರುಗಿದ್ದಾರೆಯೋ? ಎಷ್ಟು ಜನರು ನಮ್ಮ ಮೇಲೆ ತಿರುಗಿಬೀಳುವರೋ?'

'ನಿನಗೇಕೆ ಭ್ರಾಂತಿ ಭಟ್ಟ! ನನಗೇ ಮನದಟ್ಟಾಗಿದೆ. ಇದೆಲ್ಲವೂ ಆ ದೈವದ ವಿಚಿತ್ರದ ಆಟ. ಸೂಜಿಯ ಮೊನೆಯನ್ನು ತೋರಿಸಿದರೆ ಗುಂಡುಗಳು ಒಡೆದು ಪುಡಿಯಾಗುತ್ತಿವೆ. ಹೀಗಿರಲು, ಈ ಊರಿನವರು ನಮಗೆ ಪ್ರತಿಯಾಗುವುದುಂಟೆ? ಒಂದು ವೇಳೆ ಆದರು ಎನ್ನು. ಹಿಂದಿನ ರಾಜರ

ಮೇಲಿನ ಭಕ್ತಿಯು ಮಣಿಯಿಸದವರನ್ನು ಈ ರಟ್ಟೆಯು ಮಣಿಯಿಸುವುದು. ಅದರ ದಿಗಿಲಿಲ್ಲ. ಇನ್ನುಳಿದಿರುವುದೆಲ್ಲವೂ ಒಂದು ಚುಟಿಕೆಯಷ್ಟು. ನಂಬು. ಆಯಿತು. ನಿನ್ನ ಕೆಲಸವೇನಾಯಿತು ಹೇಳು. ಅದು ಎಲ್ಲದಕ್ಕೂ ಮುಖ್ಯ!'

'ಆಗುವುದೇನು? ಎಲ್ಲವೂ ಹಣ್ಣೇ! ಆರು ವೀಧಿಗಳ ನಾಯಕರೂ ಒಪ್ಪಿಕೊಂಡಿದ್ದಾರೆ. ಈ ದಿನ ಸಂಜೆಯೋ ನಾಳೆಯ ಬೆಳಿಗ್ಗೆಯೋ ಅವರು ಇಲ್ಲಿಗೆ ಬರುತ್ತಾರೆ. ಅವರನ್ನು ಒಳಗೆ ಕರೆಯಿಸಿಕೊಂಡು ರಾಜ ದರ್ಶನ ಮಾಡಿಸಿ ಅವರಿಂದ ರಾಜಭಕ್ತಿಯ ಪ್ರಮಾಣವನ್ನು ಮಾಡಿಸು'

'ಅಬ್ಬಾ! ಬದುಕಿದಹಾಗಾಯಿತು. ಆನೆಗಳೊಂದಿಲ್ಲವಲ್ಲಾ ಎಂದು ತಲ್ಲಣಿಸುತ್ತಿದ್ದೆ. ಈ ಮಾತು ನಿಜವಾಗಿ, ಇವರು ನಮ್ಮ ಬಲೆಗೆ ಬಿದ್ದಿದ್ದರೆ....'

ಭಟ್ಟನು ಅರ್ಧದಲ್ಲಿಯೇ ಬಾಯಿ ಹಾಕಿ 'ನಿಜವಾಗಿ....ಬಿದ್ದಿದ್ದರೆ....? ಇನ್ನೊಂದುಸಲ ಹಾಗೆ ಟೊಳ್ಳು ಮಾತಾಡೀಯೇ! ಹೇಳುತ್ತಿರುವವನು ನಾನು, ಭಟ್ಟ, ಎಚ್ಚರಿಕೆ' ಎಂದನು.

ದತ್ತನು 'ಹೌದು! ಹೌದು! 'ಪದವಾಕ್ಯ ಪ್ರಮಾಣಿಕರು' ತಾವು! ಶಿಖಾಯಜ್ಞೋಪವೀತಗಳನ್ನೂ ಬಿಟ್ಟು ಶ್ರಮಣನಾಗಿದ್ದವರು. ತಮ್ಮ ಮಾತನ್ನಲ್ಲವೇ ನಂಬಬೇಕು?' ಎಂದನು.

ಭಟ್ಟನೂ ಬಹು ವಿನಯದಿಂದ ಕೈಮುಗಿದು 'ಪ್ರಭು! ಈ ವಿಚಾರವನ್ನು ಶಾಂತೀಶ್ವರನನ್ನು ಕೇಳಬೇಕು' ಎಂದನು.

ದತ್ತನು ಕೇಕೇ ಹಾಕಿ ನಕ್ಕು, 'ಆಯಿತು ಅವನ ತಲೆ ಕುಟ್ಟ. ಆ ಶಾಂತೀಶ್ವರನು ಬರಲಿ. ಮಹಾರಾಜರಿಗೆ ಹೇಳಿ ಅವನನ್ನು ನೇಣುಹಾಕಿಸುತ್ತೇನೆ, ಬಾ. ಹೋಗೋಣ. ಇನ್ನು ನಗರ ಪ್ರದಕ್ಷಿಣೆ ಮಾಡಿ ಎಲ್ಲವನ್ನೂ ನೋಡಿ ಬರೋಣ. ಇನ್ನೇನು ರಾಜಸಭೆ ಸೇರುವುದು. ಅಚ್ಚುಕಟ್ಟಾಗಿ ದೊಡ್ಡ ಶೀರ್ಷಕವನ್ನು ಕಟ್ಟಿ ಭಾರಿಯ ಕಲಾಪತ್ತಿನ ಶಾಲು ಹೊದೆದು ಬಾ. ರಾಜದರ್ಶನವನ್ನು ಮಾಡಿಸುತ್ತೇನೆ. ಏಳು, ಹೋಗೋಣ' ಎಂದು ಏನೋ ಹೇಳುತ್ತಿದ್ದ ಭಟ್ಟನನ್ನು ತಳ್ಳಿಕೊಂಡು ಒಳಕ್ಕೆ ಕರೆದುಕೊಂಡು ಹೋದನು.

——o——

## ಮೂವತ್ತೇಳನೆಯ ಪ್ರಕರಣ

ಬೆಳಗಿನ ಒಂದು ಝಾವವು ಕಳೆದು ಮತ್ತೊಂದು ಝಾವವು ಹುಟ್ಟು ತ್ತಿದೆ. ಅರಮನೆಯಲ್ಲಿ ಬನವಾಸಿಯ ಪ್ರಮುಖರೆಲ್ಲರೂ ಸೇರಿದ್ದಾರೆ. ಅರ ಮನೆಯಲ್ಲಿ ಎಲ್ಲಾ ಪ್ರಹರಿಗಳೂ ಹೊಸಬರು. ಅಲ್ಲಲ್ಲಿ ನಿಂತಿರುವ ಅಂಗರಕ್ಷ ಕರು ದ್ವಾರಪಾಲಕರು ಮೊದಲಾಗಿ ಎಲ್ಲರೂ ಹೊಸಬರು. ಒಬ್ಬೊಬ್ಬರೂ ಪಿಸಪಿಸ ಗುಟ್ಟುತ್ತಿದ್ದಾರೆ.

'ನಮ್ಮ ಮನೆಗೆ ಕರೆಯುವುದಕ್ಕೆ ಬಂದಿದ್ದವನು ಯಾರೋ ಹೊಸಬ'

'ಹೌದು. ನಮ್ಮ ಮನೆಗೆ ಬಂದಿದ್ದವನೂ ಹೊಸಬ'

'ಇಲ್ಲಿ ನೋಡಿ ಇಲ್ಲಿ ನಿಂತಿರುತ್ತಿದ್ದ ಭಟನು ಹಾಕಿಕೊಳ್ಳುತ್ತಿದ್ದ ಉಡುಪು ಹೀಗಿರುತ್ತಿತ್ತೆ ? ಅದು ಕೆಂಪು. ಈಗಿನವನು ತೊಟ್ಟಿರುವುದು ಕೇಸರಬಣ್ಣ'

'ಹಬ್ಬವೆಂದು ಬದಲಿಸಿದ್ದಾರು ?'

'ಇಲ್ಲರೀ ! ಇತ್ತನೋಡಿ. ತಲೆಯಮೇಲೆ ಇರುವ ಪಾಗಿನ ಬದಲು ಲೋಹದ ಶಿರಸ್ತ್ರಾಣ, ತಲೆಯಮೇಲೆ ಕಪಿಯ ಗುರುತಿದೆ'

'ಹಾದರೀ ! ನಾನದನ್ನು ನೋಡಲೇ ಇಲ್ಲ'

'ಇದೇನು ? ಇಷ್ಟು ಹೊತ್ತಾಗಿ ಮಾಂಡಲಿಕೇಶ್ವರರು ಇನ್ನೂ ದಯ ಮಾಡಿಸಿಲ್ಲ?'

'ಆಯಿತು ! ಇದೇನು ಹೊಸತರಹ ? ಯುಗಾದಿಯ ದಿನ ಸಂಜೆಯಲ್ಲ ಅಲ್ಲವೇ ರಾಜಸಭೆಯು ನೆರೆಯುತ್ತಿದ್ದುದು. ಇವೊತ್ತು ಬೆಳಗಾಗಲೇ ಸೇರಿದೆ !

'ಇವೊತ್ತಿನಿಂದ ರಾಜ್ಯಭಾರಕ್ರಮ ಬೇರೆ! 'ಹಬ್ಬದಲ್ಲೂ...............' ಎಂದು ಗಾದೆಯುಲ್ಲವೇ ? ಹಾಗೆ. ಇವೊತ್ತಿನಿಂದ ಎಲ್ಲಾ ಹೊಸದು. ನೀವೂ ಕೂಡ ಹೊಸಬರಾಗಬೇಕು ! ಎಚ್ಚರಿಕೆ'

'ಆಗತ್ಯವಾಗಿ ಆಗಬಹುದು. ಸ್ವಾಮಿ ! ಹಾವಿನಂತಹದೂ ವರ್ಷ ವರ್ಷಕ್ಕೂ ಪೊರೆಕಳಚಿ ಹೊಸದಾಗುತ್ತದೆ. ಅಂಥದುದರಲ್ಲಿ ನಾವು ಮನು ಷ್ಯರು ಯುಗಾದಿ ಯುಗಾದಿಗೂ ಹೊಸಬರಾಗದೇ ಹೋದರೆ ಆದೀತೆ ?'

'ಆಕಾಶದಲ್ಲಿ ಧೂಮಕೇತುಗಳು, ನೆಲದಮೇಲೆ ಉತ್ಪಾತಗಳು, ಸಾಲದೆ ಯಾವ ಜೋಯಿಸನನ್ನು ಕೇಳಿ, 'ರಾಜ್ಯ ಬದಲಾಯಿಸುತ್ತದೆ. ರಾಜ್ಯ ಬದಲಾಯಿಸುತ್ತದೆ' ಹೀಗೆ ಹೊಸದರ ಸೂಚನೆ ಎಲ್ಲೆಲ್ಲೂ ತುಂಬಿರುವಾಗ ನಾವೇಕೆ ಹಳಬರಾಗಿರಬೇಕು? ನಾವೂ ಹೊಸಬರಾಗೋಣ. ಏನೇನಾಗುತ್ತದೆಯೋ ಎಲ್ಲಾ ನೋಡೋಣ'

'ಇದೇನ್ರಿ? ರಾಜಾಧಿಕಾರಿಗಳು ಒಬ್ಬರನ್ನೂ ಕಾಣೆ! ಈ ವೇಳೆಗೆ ಆ ಅಧಿಕಾರಿಗಳದೇ ಒಂದು ಗುಂಪಾಗಿ ಒಂದು ಮೂಲೆಯಲ್ಲಿ ಸಣ್ಣ ಸಭೆಯಾಗುತ್ತಿರಬೇಕು. ಇವೊತ್ತು ಒಬ್ಬರನ್ನೂ ಕಾಣೆನಲ್ಲ.'

'ಅದಿರಲಿ! ತಡೆಯಿರಿ. ನೀವು ಅರಮನೆಯನ್ನು ಯಾವ ಬಾಗಿಲಿಂದ ಹೊಕ್ಕು ಬಂದಿರಿ?'

'ನಾನು ಉತ್ತರದ ಬಾಗಿಲಿಂದ ಬಂದೆ'

'ಏನು ವಿಶೇಷ ಕಂಡಿರಿ?'

'ಏನೂ ಇಲ್ಲವಲ್ಲ?'

'ಮಂಕಪ್ಪ! ಅರಮನೆಯ ಮೇಲಿನ ಧ್ವಜ ನೋಡಿದಿರೋ?'

'ಯುಗಾದಿಯ ಹಬ್ಬ! ಗಂಗಾಸ್ನಾನಮಾಡಿ ದೇವರ ಪೂಜೆಯಲ್ಲಿದ್ದೆ. ಅವಸರವಸರವಾಗಿ ಅರಮನೆಗೆ ಅಪ್ಪಣೆಯಾಗಿದೆ ಎಂದು ಬಂದು ಕರೆದರು. ನಾನೂ ಓಡಿಬಂದಿದ್ದೇನೆ. ಈ ಗದ್ದಲದಲ್ಲಿ ತಲೆಯೆತ್ತಿ ಧ್ವಜ ಯಾರು ನೋಡಿದರು? ಏನು ವಿಶೇಷ?'

'ಸಿಂಹಧ್ವಜವಿಲ್ಲ, ಕಪಿಧ್ವಜವಿದೆ'

'ಆ! ಏನು?'

'ಹೌದು. ಸಿಂಹವಿಲ್ಲ ಕಪಿ'

'ನಿಜವಾಗಿಯೂ?'

'ಹೌದರಿ! ಇದೋ ನೋಡಿ. ಆ ಪದಾತಿದಳದ ಧ್ವಜ ನೋಡಿ. ಆ ಅಶ್ವಸೈನ್ಯದ ಧ್ವಜನೋಡಿ ಎಲ್ಲವೂ ಕಪಿಧ್ವಜಗಳೇ—'

'ಇದೇನು ಬಂತಪ್ಪ ಹೇಷ್ಯ! ಎಲ್ಲವೂ ಬದಲಾಯಿಸಿಕೊಳ್ಳಲಿ. ಸೈನಿಕರ ಬಟ್ಟೆಗಳ ಬಣ್ಣ ಬದಲಾಯಿಸಿದ್ದಾರೆ. ಶಿರಸ್ತ್ರಾಣದ ಲಾಂಛನ ಬದಲಾಯಿಸಿದ್ದಾರೆ. ಹೋಗಲಿ. ಧ್ವಜವನ್ನೂ ಬದಲಾಯಿಸುವುದೇ? ಏನೋ ವಿಚಿತ್ರ!'

'ಪಲ್ಲವ ಸಮ್ರಾಜರು ಸಾಮಾನ್ಯರೇ? ನೋಡಿಕೊಂಡಿರಿ. ನಿಮ್ಮ ಮುಖಕೂಡ ಬದಲಾಯಿಸುತ್ತಾರೆ. ಎಚ್ಚರಿಕೆ'

'ಹೂಂ ಹೌದು! ಹೌದು! ನಾವು ಅರಮನೆಗೆ ಬಂದಾಗ ಒಂದು ಮುಖ. ಈಗ ಹೋಗುವಾಗ ಒಂದು ಮುಖ. ಆದರೆ ವಿಷಯ ಮನೆಯಲ್ಲಿ ಹೆಂಡತಿ ಮಕ್ಕಳಿಗೆ ತಿಳಿಸಿರುವುದು ಒಳ್ಳೆಯದು. ಇಲ್ಲವಾದರೆ—'

'ಅದಕ್ಕೇನಿ! ಹಳೆಯ ಮುಖ ತೆಗೆದುಕೊಂಡು ಹೋಗಿರುವುದು. ಅವರು ಹೊಸಮುಖವನ್ನೇ ಗುರ್ತಿಸಿದರೆ ಅನುಕೂಲವಾಯಿತು ಇಲ್ಲದಿದ್ದರೆ ಅವರೆದುರಿಗೇ ಹಳೆಯ ಮುಖ ಹಾಕಿಕೊಂಡಿದ್ದು ಅದನ್ನು ತೆಗೆದುಹಾಕಿ ಹೊಸಮುಖಮಾಡಿಕೊಳ್ಳುವುದು'

'ಅದಿರಲಿ. ಆ ಕಟ್ಟೆಗೆಯವನನ್ನು ಕರೆದು ಕೇಳೋಣವೇನು? ಇದೇನು ಇಷ್ಟು ಬದಲಾವಣೆ ಎಂದು?'

'ಯಾಕಪ್ಪ ಅವಸರ? 'ಸ್ಪಷ್ಟಮಗ್ರೆ ಭವಿಷ್ಯತಿ!' ಒಂದು ಗಳಿಗೆ ತಾನೆ?'

'ಇವರೆಲ್ಲ ಬದಲಾಯಿಸಿದ ಹಾಗೇ ಮಾಂಡಲಿಕೇಶ್ವರರೂ ಬದಲಾಯಿಸಿದ್ದಾರೇನೋ?'

'ಬದಲಾಯಿಸುವುದೇನು? ಹೊಸ ಮಾಂಡಲಿಕೇಶ್ವರರು ಬಂದೇ ಇದ್ದಾರಲ್ಲ?'

'ಅವರೂ ಬದಲಾಯಿಸಿದ್ದಾರೆಯೋ ಏನೋ ಎಂದು ನಾನು ಹೇಳಿದುದು'

'ಏನೋಪ್ಪ? ಅದೂ ಹೇಳುವುದಕ್ಕಾಗುವುದಿಲ್ಲ. ಈ ಮಾಂಡಲೀಕೇಶ್ವರರು ಒಬ್ಬೊಬ್ಬರಿಗೂ ಒಂದೊಂದು ರೀತಿನೀತಿಗಳು. ನಾನೂ ಐದು ಜನರನ್ನು ಕಂಡೆ. ಇವರು ಆರನೆಯವರು. ಇವರು ಏನು ಏನು ಮಾಡುತ್ತಾರೆಯೋ ನೋಡಬೇಕು!'

' ನೋಡುವುದೇನು ? ಮಯೂರನು ಬಂದಿದ್ದಾನೆಯಂತೆ ! '

' ಬಂದರೇನು ? '

' ಬಂದರೇನೇ ? ಬಜಬೆಣ್ಣೆ ಕಕ್ಕಿಸುತ್ತಾನೆ. ಇಷ್ಟು ವರ್ಷಗಳಿಂದ ಆಕ್ರಮಿಸಿದ ರಾಜ್ಯವನ್ನು ಚಕ್ರಬಡ್ಡಿ ಸಮೇತ ಕಕ್ಕಿಸುತ್ತಾನೆ'

' ಬಂದರೆ ಅಲ್ಲವೆ ? '

' ಬಂದಿದ್ದಾನಂತೆ ಸ್ವಾಮಿ ! ನಾವೂ ಅದಷ್ಟು ಜಾಗ್ರತೆಯಿಂದಿರುವುದು ಒಳ್ಳೆಯದು '

' ಬಂದಿದ್ದರೆ ಇದುವರೆಗೂ ಈ ಊರು ಹೀಗಿರುತ್ತಿದ್ದಿತೆ ? ಸಾಕು. ಸುಮ್ಮನಿರಿ ಸ್ವಾಮಿ ! ಹಾಗೇನಾದರೂ ಇದ್ದಿದ್ದರೆ ಸಂಧಿವಿಗ್ರಹಿ ಮಾಂಡಲಿಕ ಈ ವೇಳೆಗೆ ಈ ಊರನ್ನೆಲ್ಲ ಬುಗರಿಯ ಹಾಗೆ ತಿರುಗಿಸಿಬಿಡುತ್ತಿದ್ದ '

'ಅದಿರಲಿ. ಒಂದುವೇಳೆ ಅವನೂ ಬಂದಿದ್ದು ರಾಜಧಾನಿಯೂ ಅವನ ಕೈಸೇರಿದರೆ ನೀವು ಏನು ಮಾಡುತ್ತೀರಿ ? '

' ಮಾಡುವುದೇನ್ರಿ ! ಈ ಸಮ್ರಾಜರ ಪಕ್ಷವಾಗಿ ನಮಗೆ ಆಗಬೇಕಾದುದೇನು ? ' ರಾಮಾ ಸ್ವಸ್ತಿ ರಾವಣಾ ಸ್ವಸ್ತಿ ! ' ಎಂದುಕೊಂಡು ಸುಖವಾಗಿರುವುದು ಬಿಟ್ಟು ನಮಗೇನು ? ಇನ್ನೂ ಈ ಸಮುದ್ರಸೆಟ್ಟರನ್ನು ಕೇಳಿ. ಅವರಿಗಾದರೆ ಕಷ್ಟ ! '

' ಸಮುದ್ರಸೆಟ್ಟರು ಸಮುದ್ರದ ಪಾಲಾಗಿದ್ದಾರೆ. ನೀವೇನು ಬಲ್ಲಿರಿ ನಮ್ಮ ಕಷ್ಟ ? '

' ಬೊಜ್ಜು ಮಾತ್ರ ಇದ್ದದ್ದು ಇದ್ದಹಾಗೇ ಇದೆ. ಏನಪ್ಪ ಅಂತಹ ಕಷ್ಟ ! ಪಾಪ ! '

ಸಮುದ್ರ ಸೆಟ್ಟಿಯು ಏನೋ ಹೇಳುವುದಕ್ಕೆ ಹೊರಟಿದ್ದವನು, 'ಇನ್ನೇನು ಮಾಂಡಲಿಕೇಶ್ವರರು ಬರುವ ಹೊತ್ತಾಯಿತು. ಮನೆಗೆ ಹೋಗುವಾಗ ಹೇಳುತ್ತೇನೆ. ನನಗೆ ದೊಡ್ಡಜೀವ ಹಾರಿಹೋಗಿದೆ ' ಎಂದನು.

ಪ್ರಹರಿಯ ದೀರ್ಘಗಂಭೀರ ಸ್ವನವು ಕೇಳಿಸಿತು : ' ಪಂಚಮಹಾಬಿರುದ ವಿರಾಜಿತಾ ! ಬನವಾಸೀ ವಿಷಯ ಸಮುದ್ರ ರಾಕಾ ನಿಶಾನಾಥಾ !

ದೇವಸೇನಾಧೀಶ್ವರ ಪ್ರಸಾದಾಸಾದಿತ ಭೂಮಂಡಲ ಸಾಮ್ರಾಜ್ಯ ಚಕ್ರೇಶ್ವರಾ! ಕದಂಬ ಕುಲೋದ್ಧಾರ ಶ್ರೀ ಮಯೂರವರ್ಮ ಧರ್ಮ ಮಹಾರಾಜಾ ಜಯಜಯಾ!'

ಎಲ್ಲರೂ ಕೇಳಿದರು: ಯಾರಿಗೂ ಅರ್ಥವಾಗಲಿಲ್ಲ ನೆರವಿಯು ಮುಂದೆ ಬಂದು ಭದ್ರಾಸನದ ಹಿಂದೆ ಯಥಾಸ್ಥಾನದಲ್ಲಿ ನಿಂತಿತು. ಶುದ್ಧ ಶ್ವೇತ ವಸನಧಾರಿಗಳಾದ ನಾಲ್ವರು ವೀರಭಟರು ಬಿಚ್ಚುಕತ್ತಿಗಳನ್ನು ಹಿಡಿದು ನಾಲ್ಕುದಿಕ್ಕಿನಲ್ಲಿಯೂ ಬರುತ್ತಿರಲು, ಮತ್ತೊಬ್ಬ ಮಾಂಡಲಿಕ ವೇಷಧಾರಿಯು ಹಸ್ತಲಾಘವವನ್ನು ಕೊಡುತ್ತಿರಲು, ಮಯೂರವರ್ಮ ಮಹಾರಾಜನು ಬಂದು ಭದ್ರಾಸನವನ್ನು ಮಂಡಿಸಿದನು.

ಎಲ್ಲರೂ ಬೆರಗಾಗಿ ಚಿತ್ರಾರ್ಪಿತ ಪ್ರತಿಮೆಗಳಂತೆ ನಿಂತಲ್ಲಿ ನಿಂತು ಹೋದರು. ಎಲ್ಲರೂ ನಿರೀಕ್ಷಿಸುತ್ತಿದ್ದುದು ಮಹಾಮಾಂಡಲಿಕೇಶ್ವರ ಪಲ್ಲವ ಸಮ್ರಾಜ ಪ್ರತಿನಿಧಿ ಅನಂತಗೋಪನನ್ನು; ಇಲ್ಲಿ ಬಂದು ರಾಜಾಸನದಲ್ಲಿ ಮಂಡಿಸಿರುವುದು ಮಯೂರವರ್ಮ ಮಹಾರಾಜ! ಯಾರಿಗೂ ಏನು ಹೇಳುವುದಕ್ಕೂ ತೋರದೆ ಹೋಯಿತು. ಆಶ್ಚರ್ಯಸ್ತಬ್ಧರಾಗಿ ಎಲ್ಲರೂ ಬಿಟ್ಟಕಣ್ಣು ಬಿಟ್ಟು ನೋಡುತ್ತಿರುವಾಗ ಮಹಾರಾಜನೇ ಮಾತನಾಡಿದನು. ಪ್ರಹರಿಯು ಮುಂಬರಿದು ಹಸ್ತವನ್ನೆತ್ತಿ ಹೇಳಿದ ಅವಧಾನದ ಉದ್ಘೋಷವು ಅಡಗುತ್ತಿದ್ದ ಹಾಗೆಯೇ ಮತ್ತೊಂದು ಮೇಘಗಂಭೀರವಾದ ಕಂಠವು ಕೇಳಿಸಿತು.

'ಪೌರಪ್ರಮುಖರೇ! ಸಮ್ರಾಜರ ಪ್ರತಿನಿಧಿಯು ಮಂಡಿಸಬೇಕಾಗಿದ್ದ ಈ ಆಸನದಲ್ಲಿ ಅಪರಿಚಿತನು ಬಂದು ಕುಳಿತಿರುವುದನ್ನು ಕಂಡ ತಮಗೆ ಆಶ್ಚರ್ಯವಾಗಿರಬಹುದು. ಆದರೆ ತಮ್ಮಲ್ಲಿ ಅನೇಕರಿಗೆ ನನ್ನ ನಿಜವಾದ ಪರಿಚಯವಿದೆಯಾಗಿ ಅವರ ಸಹಾಯದಿಂದಲೇ ನಾನಿಲ್ಲಿ ಕುಳಿತುಕೊಳ್ಳಲು ಸಾಧ್ಯವಾಯಿತಾಗಿ ನಾನು ಹೊಸದಾಗಿ ಹೆಚ್ಚಿಗೆ ಹೇಳಬೇಕಾಗಿಲ್ಲ. ನನ್ನ ಕೃತ್ರಿಮ ವೇಷದ ಪರಿಚಯವಿಲ್ಲದವರು ಈ ನಾಡಿನಲ್ಲಿಯೇ ಇಲ್ಲ. ಅಂತೂ ಒಂದಲ್ಲ ಒಂದು ವಿಧವಾಗಿ ನಾನೂ ಎಲ್ಲರ ಪರಿಚಯವನ್ನೂ ಪಡೆದಿರುವೆನು. ನನ್ನನ್ನು ಇಲ್ಲಿರುವವರಲ್ಲಿ ಅನೇಕರು ತಮ್ಮ ಹಿಂದಿನ ರಾಜನ ಕುಮಾರ

ನೆಂದು ಅರಿತಿರುವರು. ಇತರರು ನೀಲಕಂಠ ಗುಪ್ತನೆಂದು ಬಲ್ಲರು. ಇಂದಿನ ದಿನ ನಾನು ತಮ್ಮ ಸಮ್ಮುಖದಲ್ಲಿ ಅರಿಕೆಮಾಡಬೇಕಾಗಿರುವುದು ಇಷ್ಟು. ಶತ್ರುಗಳು ರಾಜ್ಯಪಹಾರ ಮಾಡಿದ ಮೇಲೆ ಗೋಪ್ಯವಾಗಿ ಬ್ರಾಹ್ಮಣವೇಷ ದಿಂದ ಕಾಲಯಾಪನ ಮಾಡುತ್ತಿದ್ದ ಮಯೂರನೂ ನಾನೇ! ರಾಜಭಕ್ತಿಯ ಭರದಿಂದ ಬೀಗಿದ ಉದಾರ ಹೃದಯದಿಂದ ಸಹಾಯ ಮಾಡಿದವರ ಬಲ ದಿಂದ ನನ್ನ ರಹಸ್ಯವನ್ನು ಕಾಪಾಡಿಕೊಂಡು, ಇಂದಿನವರೆಗೂ ರಾಜಾಧಿ ಕಾರಿಗಳೊಡನೆ ಸ್ವಕಾರ್ಯಸಾಧನೆಗಾಗಿ ಮೈತ್ರಿಯನ್ನು ಸಂಪಾದಿಸಿಕೊಂಡು, ರಾಜ್ಯೈಕ್ಯಕ್ಕಾಗಿ ಹಗಲಿರುಳು ಹೆಣಗುತ್ತಿದ್ದರೂ ವ್ಯಾಪಾರಿಯಂತೆ ಇದ್ದು ಅಧಿ ಕಾರಿಗಳ ಸುತ್ತಲೂ ಬಲೆಯನ್ನು ಬೀಸುತ್ತಿದ್ದ ನೀಲಕಂಠಗುಪ್ತನೂ ನಾನೇ! ಶ್ರೀಶೈಲವನ್ನು ಸಾಧಿಸಿದ ದೊಂಬನೂ ನಾನೇ! ಇಂದು ನಾನು ವೇಷಾಂತರ ಗಳನ್ನೆಲ್ಲ ಕಿತ್ತೆಸೆದು ತಮ್ಮ ಮುಂದೆ ಬಂದು ನಿಂತಿದ್ದೇನೆ.

ಹಿಂದಿನ ಅರಸರ ನೆನೆಪುಳ್ಳವರೇ! ಧರ್ಮಮಹಾರಾಜರೆಂದು, ಧರ್ಮ ಪಾಲಕರೆಂದು, ಧರ್ಮ ಮೂರ್ತಿಗಳೆಂದು ತಾವು ಕೊಂಡಾಡುತ್ತಿದ್ದ ಚಂದ್ರ ವರ್ಮನ ಮಗನು ತಮ್ಮ ಮುಂದೆ ನಿಂತಿದ್ದಾನೆ. ಅಂದಿನ ರಾಜಭಕ್ತಿ ಯನ್ನು ಇಂದೂ ಮೆರೆದು ಅವನನ್ನು ಮತ್ತೆ ಸಿಂಹಾಸನದಲ್ಲಿಟ್ಟು ಕಾಪಾಡು ವುದೂ ಬಿಡುವುದೂ ತಮ್ಮ ಕೈಯಲ್ಲಿದೆ. ಹಿಂದಿನ ನೆನೆಪಿಲ್ಲದ ಇಂದಿನ ಶ್ರೀಮಂತರೇ! ಪ್ರಮುಖರೇ! ದೈವಭಕ್ತನೆಂದು, ಧರ್ಮಪರನೆಂದು, ದಯಾ ವಂತನೆಂದು, ದಾನ ಶೌಂಡನೆಂದು ನೀವು ಹೊಗಳುತ್ತಿದ್ದ ನೀಲಕಂಠ ಗುಪ್ತನೇ, ಕ್ಷತ್ರಿಯೋಚಿತವಾದ ರೀತಿಯಲ್ಲಿ ಕೃತ್ರಿಮಿಗಳಿಗೆ ಕೃತ್ರಿಮವನ್ನೇ ಪ್ರಯೋಗಿಸಿ, ಒರೆಯಲ್ಲಿದ್ದ ಕತ್ತಿಯನ್ನೆಳೆಯುವುದಕ್ಕೂ ಅವಕಾಶ ಕೊಡದೆ, ಒಂದು ತೊಟ್ಟಿನಷ್ಟು ರಕ್ತಪಾತವಿಲ್ಲದೆ ಶ್ರೀಶೈಲವನ್ನು ಹಿಡಿದ ಮಯೂ ರನೇ, ಇಂದು ಅದೇ ಕೃತ್ರಿಮದಿಂದ ಒಂದು ರಾತ್ರಿಯೊಳಗಾಗಿ ಬನವಾಸಿ ಯನ್ನೂ ಸಾಧಿಸಿ, ತನ್ನ ವಿಜಯವನ್ನು ತಮ್ಮ ಮುಂದೆ ಇಟ್ಟಿದ್ದಾನೆ. ದೈವ ಕೃಪೆಯಿಂದ ಲಭಿಸಿದ ವಿಜಯಲಕ್ಷ್ಮಿಯ ವರಮಾಲಿಕೆಯನ್ನು ತಮ್ಮ ಮುಂದಿಟ್ಟು ಮಣಿದು ಕೈಮುಗಿದು ನಿಂತಿದ್ದಾನೆ. ರಾಜಭಕ್ತರು ಸಂಪಾದಿಸಿ ಕೊಟ್ಟಿರುವ ಸಿಂಹಾಸನವನ್ನು ನಡೆಯಿಸಿಕೊಂಡು ಬರುವುದು ತಮಗೂ ಸಮ್ಮತವಾದರೆ ಆ ವಿಜಯಮಾಲಿಕೆಯನ್ನು ತಾವೂ ಅನುಗ್ರಹಿಸಿ. ನಾನು

ರಾಜ್ಯದ ಸೂತ್ರಗಳನ್ನು ಹಿಡಿದು ಆಳುವುದಾದರೆ ಕಾಲದೇಶವರ್ತಮಾನ ಗಳಿಗೆ ಅನುಗುಣವಾಗಿ ಪ್ರತಿಯೊಬ್ಬನಿಗೂ ಸೌಖ್ಯವಾಗುವಂತೆ ಧರ್ಮ ಪಾಲನೆಗೆ ನಡುಗಟ್ಟಿ ನಿಂತಿರುವೆನೆಂಬುದು ನನ್ನ ಪ್ರತಿಜ್ಞೆ. ಸುಖದುಃಖ ಗಳೆರಡರಲ್ಲಿಯೂ ನನ್ನೊಡನಿದ್ದು ನನ್ನ ಆಗು ಹೋಗುಗಳನ್ನು ತಾವೂ ಹಂಚಿಕೊಂಡು ನನ್ನವರಾಗಿರಲು ತಮಗೆ ಒಪ್ಪಿತವಾದರೆ ಬನ್ನಿ. ನನಗೆ ಆಶ್ವಾಸನವನ್ನು ನೀಡಿ. ಅದಿಲ್ಲವೆಂದರೆ, ಯುಕ್ತಿಯಿಂದ ಸಾಧಿಸಿದುದನ್ನು ಶಕ್ತಿಯಿಂದ ಅರಗಿಸಿಕೊಳ್ಳಲು ಅನುಜ್ಞೆಕೊಡಿ. ನನ್ನ ವಂಶದ ನೆನೆಪನ್ನು ಕಾಪಾಡಿಕೊಂಡು ಬಂದು ನನ್ನನ್ನೂ ಅಭಿಮಾನದಿಂದ ಕಾಯ್ದ ಮಿತ್ರರೇ! ತಮ್ಮೆಲ್ಲರ ಆಶೀರ್ವಾದ ಆಶಾವಾದಗಳನ್ನು ಮತ್ತೊಮ್ಮೆ ನನ್ನಮೇಲೆ ವರ್ಷಿಸಿ ನನ್ನ ಪೂರ್ವಜರಲ್ಲಿ ಯಾವ ಯಾವ ಮಹದ್ಗುಣಗಳಿದ್ದು ತಮ್ಮನ್ನು ಮೆಚ್ಚಿಸಿ ದುವೋ ಆ ಗುಣಗಳು ನನ್ನಲ್ಲಿಯೂ ಆವಿರ್ಭವಿಸುವಂತೆ ಅನುಗ್ರಹಮಾಡಿ. ತಾವೆಲ್ಲರೂ ಸೇರಿ ಸಿಂಹಾಸನವನ್ನು ನನಗೆ ಕೊಟ್ಟರೆ ಮಾತ್ರ ನಾನು ಇದನ್ನು ಏರುವೆನಲ್ಲದೆ ಅನ್ಯಥಾ ಇಲ್ಲವೆಂಬುದು ತಮ್ಮ ಮನಸ್ಸಿನಲ್ಲಿರಲಿ.

ಇಂದೇ ತಾವು ಇತ್ಯರ್ಥಮಾಡಿರೆಂದು ನಾನು ಹೇಳುವುದಿಲ್ಲ ನಾಡ ಗೌಡರಿನ್ನೂ ಇಲ್ಲಿಗೆ ದಯಮಾಡಿಸಿಲ್ಲ. ಅವರು ಈ ದಿನ ಸಂಜೆಗೆ ಬರು ತ್ತಾರೆ. ನಾಳೆಯ ಸಂಜೆಗೆ ಮತ್ತೆ ರಾಜ ಸಭೆಗೆ ತಾವೆಲ್ಲರೂ ದಯಮಾಡಿಸಿ ಈ ವಿಷಯವನ್ನು ಇತ್ಯರ್ಥಮಾಡಿ ಪುರಪ್ರಮುಖರೇ! ಮತ್ತೊಂದು ವಿಷಯ ತಮಗೆ ತಿಳಿದಿರಲಿ. ರಾಜ್ಯಾಧಿಕಾರಿಗಳಾಗಿದ್ದವರು ಪಲ್ಲವರ ಕಡೆ ಯವರು ಒಬ್ಬರೂ ಈ ರಾಜ್ಯದಲ್ಲಿಲ್ಲ. ಎಲ್ಲರೂ ನಮಗೆ ಕೈಸೆರೆಯಾಗಿರು ವರು. ಇಲ್ಲಿ ಮಾಂಡಲಿಕರನ್ನೂ ಮಾಂಡಲಿಕೇಶ್ವರರನ್ನೂ ಕೈಸೆರೆಗೊಂಡಾ ಗಲೇ ಈ ನಾಡಿನ ಪ್ರತಿಯೊಬ್ಬ ಅಧಿಕಾರಿಯನ್ನೂ ಹಿಡಿದಿರುವೆವು. ಆದರೂ ನಮಗೆ ಮಾನವದ್ವೇಷವಿಲ್ಲ. ಶತ್ರುವೆಂದಮಾತ್ರಕ್ಕೆ ಕಂಠದ ರಕ್ತವನ್ನು ಚೆಲ್ಲಬೇಕೆಂಬ ಕೆಟ್ಟ ಬುದ್ಧಿಯು ನಮಗಿಲ್ಲ. ನಮಗೆ ಬೇಕಾದುದು ನಮ್ಮ ರಾಜ್ಯವಲ್ಲದೆ ಶತ್ರುಗಳ ರಕ್ತವಲ್ಲ. ಹಾಗೆಯೇ ನಮ್ಮ ಮಿತ್ರರಾಗಿ ಇರಲು ಒಪ್ಪಿಕೆಯಿಲ್ಲದವರನ್ನೂ ಹಿಂಸಿಸದೆ ಅವರು ಬೇಕೆಂದ ಕಡೆಗೆ ಕಳುಹಿಸಿ ಕೊಡಲು ನಾವು ಸಿದ್ಧವಾಗಿದ್ದೇವೆ. ಮಿತ್ರರನ್ನು ನಮ್ಮಂತೆಯೇ ಭಾವಿಸಲು

ಸಿದ್ಧರಾಗಿ ನೀಡಿದ ಮೈತ್ರಿಯ ಕೈಯ್ಯನ್ನು ಹಿಡಿಯಲು ಆತುರರಾಗಿರುವ ನಾವು, ತದಿತರರ ರಕ್ಷಣೆಗೂ ಅದೇ ಕೈಯ್ಯನ್ನು ನೀಡಲು ಸಿದ್ಧರಾಗಿದ್ದೇವೆ. ವಿಚಾರ ವಿಮರ್ಶೆಗಳಿಂದ ಏನುಮಾಡಬೇಕೆಂಬದನ್ನು ಗೊತ್ತುಮಾಡಿಕೊಳ್ಳಿ.

ನಮ್ಮ ರಾಜ್ಯದಲ್ಲಿ ಪರವಿರೋಧಿಯಲ್ಲದ ಧರ್ಮಸ್ವಾತಂತ್ರ್ಯವುಂಟು. ಬೌದ್ಧರಾಗಲೀ ಬ್ರಾಹ್ಮಣರಾಗಲಿ ಜೈನರಾಗಲಿ ಶೈವರಾಗಲಿ ಪ್ರಜೆಗಳಾದ ಎಲ್ಲರೂ ನಮಗೆ ಒಂದೇ! ನಾಸ್ತಿಕನೂ ನಮಗೆ ಮಾನ್ಯನೇ! ಹಾಗೆಯೇ ನ್ಯಾಯವಿರುದ್ಧವಲ್ಲದ ವ್ಯವಹಾರವನ್ನು ನಡೆಯಿಸುವ ಪ್ರತಿಯೊಬ್ಬನೂ ನಮಗೆ ಆಪ್ತನೇ! ಇದಕ್ಕೆ ತಪ್ಪದಂತೆ ನಡೆಯುವುದು ನಮ್ಮ ಕೆಲಸ. ತಪ್ಪಿದರೆ ಈ ಸ್ಥಾನದಿಂದ ನಮ್ಮನ್ನು ತಪ್ಪಿಸುವುದು ತಮ್ಮ ಕೆಲಸ. ಈ ಕೆಲಸಗಳನ್ನು ಮಾಡುವುದಕ್ಕೆ ನಮ್ಮಿಬ್ಬರಿಗೂ ಪರಮೇಶ್ವರನು ಶಕ್ತಿಯನ್ನು ಕೊಡಲಿ'

ಎಲ್ಲರೂ ಮೊದಲೇ ಆಶ್ಚರ್ಯದಿಂದ ಮೂಕರಾಗಿದ್ದರು. ಭಾಷಣವನ್ನು ಕೇಳಿದ ಮೇಲಂತೂ ಇನ್ನೂ ವಿಚಿತ್ರವಾಗಿ ಹೋಯಿತು. ಹಿಂದಿನ ರಾಜಭಕ್ತರು ಆನಂದದ ಅತಿಶಯದಿಂದ ಬಾಷ್ಪವರ್ಷವನ್ನು ಕರೆಯುತ್ತಿದ್ದರು. ಮಹಾರಾಜರ ಭಾಷಣವು ಮುಗಿಯುತ್ತಿದ್ದ ಹಾಗೆಯೇ ಅವರು ಭದ್ರಾಸನದಲ್ಲಿ ಕುಳಿತುಕೊಳ್ಳುತ್ತಿದ್ದ ಹಾಗೆಯೇ ಸಭಿಕರು ಭಾಷಣ ಶ್ರವಣದ ಅಶ್ಚರ್ಯದಿಂದ ಆದ ಸ್ತಂಭ ರೋಮಾಂಚ ಭಾವಗಳನ್ನು ಅತಿಕ್ರಮಿಸುತ್ತಿದ್ದ ಹಾಗೆಯೇ ಸಭಾವಿಸರ್ಜನದ ಕೂಗು ಕೇಳಿಸಿತು. ರಾಜಪರಿವಾರವು ಹೊರಟು ಪಟಾಂತರಿತವಾಯಿತು.

———:———

## ಮೂವತ್ತೆಂಟನೆಯ ಪ್ರಕರಣ

ಮಯೂರವರ್ಮನು ಬನವಾಸಿಯ ಅರಮನೆಯ ಅಂತರ್ಗೃಹಗಳೊಂದರಲ್ಲಿ ಕೌಳುಡೆಯನ್ನು ಒರಗಿಕೊಂಡು ಉನ್ನತಾಸನದ ಮೇಲೆ ಕುಳಿತಿದ್ದಾನೆ. ರಾಜ ಚಿಹ್ನಗಳಾದ ಛತ್ರ ಚಾಮರಗಳನ್ನು ಹಿಡಿದಿರುವ ಭಟರು ಕೊಂಚ ದೂರದಲ್ಲಿ ನಿಂತಿದ್ದಾರೆ. ಒಬ್ಬ ಚಾರಕನು ಬೀಸಣಿಗೆಯನ್ನು ಬೀಸುತ್ತಿದ್ದಾನೆ.

ಮಂತ್ರಿ ಷಡಾನನ ಶರ್ಮನು ತನ್ನ ಬೈರಾಗಿಯ ವೇಷವನ್ನು ಬಿಟ್ಟು ರಾಜಯೋಗ್ಯವಾದ ಉಡುಪುಗಳನ್ನು ಧರಿಸಿ ರಾಜನ ಎಡಗಡೆಯಲ್ಲಿ ಮತ್ತೊಂದು ಭವ್ಯಾಸನದಲ್ಲಿ ಕುಳಿತಿದ್ದಾನೆ. ಅವನ ಮಗ್ಗುಲಲ್ಲಿ ಸೇನಾನಿ ನರಸಿಂಹದತ್ತನು ಅಧಿಕಾರ ಸೂಚಕವಾದ ಸಮವಸ್ತ್ರಗಳನ್ನು ಧರಿಸಿ ವೀರ ರಸವೇ ಮೂರ್ತಿಯಾದಂತೆ ಮತ್ತೊಂದು ಭವ್ಯಾಸನದಲ್ಲಿ ಮಂಡಿಸಿದ್ದಾನೆ. ಬಲಗಡೆಯಲ್ಲಿ ಯತಿಯು ತನ್ನ ಎಂದಿನ ಉಡುಪಿನಲ್ಲಿ ಅದೇ ಶಾಂತಿಭೂಷಿತ ಸುಖ ಮುಖ ಮುದ್ರೆಯಲ್ಲಿ ಬಂದು ಆಸನವನ್ನು ಅಲಂಕರಿಸಿದ್ದಾನೆ. ಪಕ್ಕದಲ್ಲಿ ವೈದಿಕ ಯೋಗ್ಯವಾದ ವಸ್ತ್ರಭೂಷಣಗಳಿಂದ ಭೂಷಿತನಾಗಿ ರೂಹುಗೊಂಡ ಸಂತೋಷದಂತೆ ಕಾಣುತ್ತಿರುವ ಈಶಭಟ್ಟನು ಆಸನವನ್ನು ತುಂಬಿದ್ದಾನೆ.

ಷಡಾನನ ಶರ್ಮನು ಎದ್ದು ಕೈಮುಗಿದು ಹೇಳಿದನು; 'ಅಪ್ಪಣೆಯಾದರೆ ಸಂಧಿವಿಗ್ರಹಿ ಸಚಿವನನ್ನು ಕರೆಯಿಸುತ್ತೇನೆ'

ಮಯೂರನು ಕಣ್ಣೀರಿಟ್ಟು ಕೈಮುಗಿದುಕೊಂಡು ಹೇಳಿದನು: 'ಆರ್ಯ! ಇದೆಲ್ಲಿಯ ನ್ಯಾಯ? ಭಿಕ್ಷುಕ ಬಾಲಕನನ್ನು ಹಿಡಿದು ತಂದು ಸಿಂಹಾಸನದ ಮೇಲೆ ಕುಳ್ಳಿರಿಸಿರುವವರು ತಾವು. ಈಗ ತಾವೇ ನನ್ನ ಅಪ್ಪಣೆಯನ್ನು ಕೇಳುವುದು! ಚೆನ್ನಾಯಿತು. ಪ್ರಭುತ್ವವು ಪ್ರಭುಪಟ್ಟವನ್ನು ಕಟ್ಟಿದ ತಮ್ಮದಲ್ಲದೆ ನನ್ನದು ಎಂದಿಗೂ ಅಲ್ಲ. ನಾನು ನಾಮ ಮಾತ್ರ ಪ್ರಭು. ಮಿಕ್ಕೆಲ್ಲದಕ್ಕೂ ನಾನು ತಮ್ಮ ಕೈಯ ಬೊಂಬೆ. ತಮಗೆ ತೋರಿದಂತೆ ಮಾಡಬಹುದು'

ಷಡಾನನ ಶರ್ಮನು ಯತಿಯ ಮುಖವನ್ನು ನೋಡಿದನು. ಯತಿಯು ಆಗಬಹುದೆಂದು ಸನ್ನೆಮಾಡಿದನು. ದತ್ತ ಭಟ್ಟರ ಕಡೆಯಿಂದಲೂ ಅದೇ ಸನ್ನೆಯಾಯಿತು. ಶರ್ಮನು ಹೇಳಿದನು: 'ಪ್ರಭು! ಸನ್ನಿಧಿಯ ಅಭಿಪ್ರಾಯಕ್ಕೆ ವಿರೋಧವಾಗಿ ಮಾತನಾಡುವ ಸಂದರ್ಭವು ಇಷ್ಟು ಬೇಗ ಒದಗುವುದೆಂದು ನಾನು ತಿಳಿದಿರಲಿಲ್ಲ. ಆದರೂ, ಸನ್ನಿಧಾನದಲ್ಲಿ ನಮಗಿರುವ ಸ್ವಾತಂತ್ರ್ಯವನ್ನವಲಂಬಿಸಿ ಎರಡು ಮಾತು ಅರಿಕೆಮಾಡಲು ಅಪ್ಪಣೆಯಾಗಬೇಕು. ತಾವು ತಮ್ಮ ಬಾಲ್ಯದ ಸ್ಥಿತಿಯ ನೆನೆಪನ್ನು ತಂದುಕೊಂಡಿರಿ.

ಶತ್ರುನಿಗ್ರಹ ದಕ್ಷರಲ್ಲದ ಇದೇ ನಾವೇ ತಮಗೆ ಆ ವಿರೂಪವನ್ನು ಅಳವಡಿಸಿದೆವು. ತಮ್ಮ ರಕ್ಷಣೆಗೆ ಅದು ಅತ್ಯವಶ್ಯಕವೆಂದು ನಮ್ಮ ಮನಸ್ಸಿಗೆ ದೃಢವಾಗದೆ ಹೋಗಿದ್ದರೆ ನಾವು ಅಂತಹ ವಿಪರೀತವನ್ನು ಮಾಡುತ್ತಲೂ ಇರಲಿಲ್ಲ: ಮಾಡಿದ್ದರೂ ನಾವೇ ಅದಕ್ಕೆ ತಕ್ಕ ಪ್ರಾಯಶ್ಚಿತ್ತಮಾಡಿಕೊಳ್ಳದೆಯೂ ಇರುತ್ತಿರಲಿಲ್ಲ. ಎರಡನೆಯದು ಸಿಂಹಾಸನ ಲಾಭದ ವಿಚಾರ. ಪ್ರಭುಗಳವರು ಜನ್ಮಿಸುತ್ತಿದ್ದ ಹಾಗೆಯೇ ಈ ಸಿಂಹಾಸನಕ್ಕೆ ಅಧಿಕಾರಿಗಳಾಗಿಯೇ ಜನ್ಮಿಸಿದರಲ್ಲವೆ? ನಾವು ಅಜಾಗರೂಕರಾಗಿದ್ದು ಪ್ರಭುವನ್ನೂ ರಾಜ್ಯವನ್ನೂ ಬಲಿಕೊಟ್ಟು ತಮ್ಮನ್ನು ಇಷ್ಟು ದೀರ್ಘಕಾಲ ಸಿಂಹಾಸನದಿಂದ ಈ ವಂಚಿಸಿದ್ದ ಮಹಾಪಾತಕಿಗಳು: ನಮಗೆ ತಮ್ಮಿಂದ ಸಲ್ಲಬೇಕಾದುದು ರಾಜದ್ರೋಹಿಗಳಿಗೆ ತಕ್ಕ ಪ್ರಾಯಶ್ಚಿತ್ತ ರೂಪವಾದ ರಾಜದಂಡವಲ್ಲದೆ ಕೃತಜ್ಞತೆಯಲ್ಲ. ಒಂದುವೇಳೆ ಮಹಾಸನ್ನಿಧಾನವು ಔದಾರ್ಯದಿಂದ ಈ ರಾಜದ್ರೋಹವನ್ನು ಕ್ಷಮಿಸಿದರೂ ನಾವು ಈಗ ಮಾಡಿದುದೇನು? ಮಹಾ ಮಾತೃಶ್ರೀಯವರು ಪರಂಧಾಮವನ್ನೈದಿದಾಗ ನಮಗಿತ್ತ ಒಂದು ಆಜ್ಞೆ. ಅದನ್ನೂ ನೆರವೇರಿಸುವುದಕ್ಕೆ ಎಷ್ಟು ಕಾಲವಿಳಂಬ! ಕೊನೆಗೆ ಮತ್ತೆ ತಾವೇ ಅಧ್ವರ್ಯ ದೀಕ್ಷಿತರಾಗಿ ಬಂದು ನಿಂತ ಮೇಲೆ, ತಮ್ಮ ತಪೋಬಲದಿಂದ, ತಮ್ಮ ಅದೃಷ್ಟಬಲದಿಂದ ನಾವು ಮಾಡುವ ಕಾರ್ಯಗಳೆಲ್ಲವು ಒಂದೊಂದಾಗಿ ಸಫಲವಾಗುತ್ತ ಬಂದುವು. ನಿಜವಾಗಿಯೂ ಶ್ರಮಪಟ್ಟವರು ನಾಡಗೌಡರು. ನಮ್ಮ ಅರಸರನ್ನು ಕಂಡೇವೆ ಎಂದು ತಪಿಸುತ್ತ, ನಮ್ಮ ಅರಸನ ಮಗನಿಗೆ ಗೆಲುವಾಗಲೆಂದು ಕಂಡಕಂಡ ದೇವರಿಗೆಲ್ಲ ಹರಕೆಯನ್ನು ಹೊರುತ್ತ, ಸನ್ನಿಧಿಗಾಗಿ ತಮ್ಮ ಸರ್ವಸ್ವವನ್ನು ಕಳೆದುಕೊಳ್ಳುವುದಕ್ಕೂ ಸಿದ್ಧರಾದ ಆ ವೀರರತ್ನಗಳು. ಸನ್ನಿಧಾನವು ಉಪಕಾರ ಸ್ಮರಣೆಮಾಡುವುದಾದರೆ, ಆಗೋ! ಅಲ್ಲಿ ಜ್ವಾಲಮಾಲಾರಹಿತವಾಗಿ ಪ್ರಜ್ವಲಿಸುವ ಅಗ್ನಿಪುರುಷನಂತೆ ತೇಜೋವಿರಾಜಮಾನರಾಗಿ ಕುಳಿತಿರುವ ಆ ತಪೋನಿಧಿಗಳ ಉಪಕಾರವನ್ನು ಸ್ಮರಿಸೋಣವಾಗಲಿ. ನಾನು, ದತ್ತ, ಭಟ್ಟ, ಎಲ್ಲರೂ ವೇತನಗ್ರಾಹಿಗಳು, ಭೃತ್ಯರು: ನಾವು ಸನ್ನಿಧಾನದ ಅನ್ನಪ್ರಭಾವದಿಂದ ವಿಜಯಿಗಳಾದವರು. ನಮ್ಮ ವಿಜಯವೆಲ್ಲವೂ ಸನ್ನಿಧಾನದ ಪ್ರಭಾವ!

ಅಲ್ಲದೆ ಮತ್ತೊಂದನ್ನು ಯೋಚಿಸೋಣವಾಗಲಿ. ನಾವೇ ಸ್ವಂತವಾಗಿ ಒಂದು ಮೂರ್ತಿಯನ್ನು ಮಾಡಿಸಿ ಅದನ್ನು ಪ್ರತಿಷ್ಠಾಪಿಸುವೆವು. ಪ್ರಾಣ ಪ್ರತಿಷ್ಠಾಪನೆಯನ್ನು ಮಾಡುವವರೂ ನಾವೇ! ಆದರೂ ಅಲ್ಲಿ ಕಳಾಸ್ಥಾಪನೆಯಾದ ಮೇಲೆ ನಾವು ಸ್ವತಂತ್ರಿಸಲು ಸಾಧ್ಯವೇ? ಈ ವಿಚಾರದಲ್ಲಿಯೂ ಹಾಗೆಯೇ! ರಾಜನು ಜನ್ಮಿಸುವಾಗಲೇ ದಿವ್ಯಕಳಾ ಸಂಪನ್ನನಾಗಿಯೇ ಜನಿಸುವನೆಂಬುದು ಶಾಸ್ತ್ರಸಿದ್ಧವು. ಪ್ರಜಾಪಾಲನವೆಂಬ ಸ್ವಧರ್ಮವನ್ನು ಪಾಲಿಸದೆ ತಾನಾಗಿ ವೇನನಂತೆ ಭ್ರಷ್ಟರಾದವರನ್ನು ಬಿಟ್ಟರೆ, ಮಿಕ್ಕ ಎಲ್ಲೆಡೆಯಲ್ಲಿಯೂ ಪ್ರಭುಗಳಿಗೆ ತಲೆಬಾಗುವುದೇ ಧರ್ಮವು! ಅದರಿಂದ ಸನ್ನಿಧಾನವು ಸ್ವಭಾವಸಿದ್ಧವಾಗಿರುವ ಈ ಪ್ರಭುತ್ವವನ್ನು ಅಧಿರೋಹಿಸಿ ನಮ್ಮೆಲ್ಲರಿಗೂ ಆಜ್ಞೆಮಾಡುವುದೇ ವಿಹಿತವು. ಇದೇ ಸಂಜೆಗೆ ರಾಜಸಭೆಯಾಗಬೇಕಾಗಿರುವುದು. ಅದರಿಂದ ಕಾಲವಿಳಂಬವಾಗದಂತೆ ರಾಜಕಾರ್ಯವನ್ನು ನೆರವೇರಿಸಲು ಅಪ್ಪಣೆಯಾಗಬೇಕು'

ಮಯೂರನು ಮರುಮಾತನಾಡಲಿಲ್ಲ. ನಡುಬೇಸಿಗೆಯಲ್ಲಿ, ಸಂಜೆಯ ಮುಂದೆ, ಒಂದು ಗಳಿಗೆಯೊಳಗಾಗಿ ಬಲವಾದ ಮಳೆಯು ಬಡಿದರೂ ಅದನ್ನು ಹಿತನೆಂದೇ ಭಾವಿಸುವ ಜನದಂತೆ ಸಭೆಯಲ್ಲಿದ್ದ ಸರ್ವರೂ ಪರುಷವಾದರೂ ಯಥಾರ್ಥವಾಗಿ, ನೋಯಿಸಿದರೂ ನಿಜವಾದ ಷಡಾನನ ಶರ್ಮನ ಮಾತಿನಿಂದ ಸಂತೋಷಗೊಂಡಿದ್ದರು. ಎಲ್ಲರ ಕಣ್ಣಿನಲ್ಲಿಯೂ ಒಂದೆರಡು ಸಲ ನೀರೂ ಆಡಿದ್ದಿತು. ಆದರೂ ಮಂತ್ರಿಯಾಗಿ ರಾಜಸಭೆಯನ್ನು ನಿರ್ವಹಿಸಲು ನಿಂತಿರುವ ಆತನ ಮಾತಿಗೆ ಪ್ರತಿಯಾಡುವವರಾರು? ಎಲ್ಲರೂ ಅವಾಕ್ಕಾಗಿದ್ದರು. ಮಾತನಾಡಲು ಅವಕಾಶವು ದೊರೆತಿದ್ದರೆ ಪ್ರತಿಯೊಬ್ಬರೂ ಒಂದೊಂದು ವಾಕ್ಪ್ರವಾಹವನ್ನು ಹರಿಸಲು ಸಿದ್ಧರಾಗಿದ್ದರೆಂದು ಮುಖಮುದ್ರೆಗಳೇ ಸೂಚಿಸುತ್ತಿದ್ದುವು.

ಮಂತ್ರೀಶ್ವರನು ಮತ್ತೊಮ್ಮೆ ಅರಿಕೆಮಾಡಿದನು: 'ಅಪ್ಪಣೆಯಾದರೆ ಸಂಧಿವಿಗ್ರಹಿ ಸಚಿವನನ್ನು ಸನ್ನಿಧಿಗೆ ಕರೆಯಿಸುತ್ತೇನೆ'

'ಆಗಬಹುದು'

ನಂದಿವರ್ಮನು ನತಶಿರಸ್ಕನಾಗಿ ರಾಜಸನ್ನಿಧಿಯನ್ನು ಪ್ರವೇಶಿಸಿದನು. ರಾಜಸಭೆಯವರೆಲ್ಲರೂ ಎದ್ದು ಆದರದಿಂದಲೇ ಸ್ವಾಗತಮಾಡಿದರು. ನಂದಿವರ್ಮನು ತನ್ನನ್ನು ಬಂದಿಗಳಿಗೆ ತಕ್ಕಂತೆ ನಡೆಯಿಸಿಕೊಳ್ಳುವರೆಂದಿದ್ದನು. ಆದರೆ ತನ್ನ ನಿರೀಕ್ಷೆಯು ವಿಫಲವಾದುದು ಅವನಿಗೆ ಆಶ್ಚರ್ಯವೆನಿಸಿತು. ಮಯೂರನೇ ಹೇಳಿದನು: 'ಸಚಿವೋತ್ತಮರು ಇತ್ತ ದಯಮಾಡಿಸಬೇಕು'

ಮಂತ್ರಿಸೇನಾನಿಗಳೂ ಪ್ರೀತಿಯಿಂದಲೇ ಅವನನ್ನು ಆಸನದಲ್ಲಿ ಕುಳ್ಳಿರಿಸಿದರು. ಸಚಿವನು ಅಪ್ರತಿಭನಾಗಿದ್ದರೂ ನಿಷ್ಠುರನಾಗಲಿಲ್ಲ. ಹೆಚ್ಚು ಉಪಚಾರಗಳನ್ನು ಹೇಳಿಕೊಳ್ಳದೆಯೇ ಆಸನಪರಿಗ್ರಹ ಮಾಡಿದನು. ಒಮ್ಮೆ ಸುತ್ತಲೂ ನೋಡಿ, 'ಈ ಸಭೆಯಲ್ಲಿರುವವರನ್ನೆಲ್ಲ ಬಲ್ಲೆನೆನ್ನುವ ಭಾಗ್ಯ ನನಗಿದ್ದಂತೆ ತೋರಲಿಲ್ಲ' ಎಂದನು.

ದತ್ತನು ಎದ್ದು ಹೇಳಿದನು: 'ಇವರೆಲ್ಲರೂ ತಮಗೆ ಒಂದಲ್ಲ ಒಂದು ರೀತಿಯಲ್ಲಿ ಪರಿಚಿತರೇ! ಆದರೂ ಪ್ರತ್ಯಕ್ಷಪರಿಚಯವಿಲ್ಲದೆ ಇರಬಹುದು. ಇದೋ ಇವರೇ ಕದಂಬರಾಜಕುಮಾರ ಮಯೂರವರ್ಮ ಮಹಾರಾಜರು!'

ನಂದಿವರ್ಮನು ನಂಬಲಾರದೆ ಹೋದನು. ಇದುವರೆಗೂ ತನ್ನ ಅನುಮಾನಕ್ಕೆ ಪಾತ್ರನಾಗಿದ್ದ ನೀಲಕಂಠಗುಪ್ತನೇ ಮಯೂರನೆನ್ನುತ್ತಲೂ ನಂದಿವರ್ಮನು ಅವಾಕ್ಕಾಗಿ ಹೋದನು: ಅವನಲ್ಲಿದ್ದ ಚೈತನ್ಯವೆಲ್ಲ ಒಮ್ಮೆಯೇ ನಂದಿಹೋದಂತಾಯಿತು: ಎದ್ದು ವಂದನಾದಿಗಳನ್ನು ಮಾಡುವ ಸಭ್ಯೋಚಿತ ವರ್ತನವನ್ನೂ ಮರೆತನು. ದತ್ತನು ಅವನ ವೃತ್ತಿಪ್ರಳಯವನ್ನು ಕಂಡುಕೊಂಡು ಮುಂದೆ ಹೇಳಿದನು: 'ಅತ್ತ ಕುಳಿತಿರುವವರು ಕದಂಬ ಕುಲಪುರೋಹಿತರು ಶ್ರೀವೀರಶರ್ಮರು, ಚತುರ್ವೇದಿಗಳು. ಇವರು ಈ ನಾಡಿನ ಮಂತ್ರಿಗಳಾದ ಷಡಾನನ ಶರ್ಮರವರು. ಅವರು ರಾಜಕುಮಾರನ ಪೋಷಣೆಯ ಭಾರವನ್ನು ವಹಿಸಿದ್ದ ಈಶಭಟ್ಟರವರು'

ನಂದಿವರ್ಮನು ಕೇಳಿದನು: 'ಇವರೆಲ್ಲರೂ ಯಾವ ಯಾವ ಗುಪ್ತ ನಾಮ ವೇಷಗಳಿಂದ ಈ ಮಂಡಲದಲ್ಲಿ ಚರಿಸುತ್ತಿದ್ದರೋ ಅಪ್ಪಣೆಯಾಗಲಿ'

'ಇವರು ಯತೀಶ್ವರರು ಎಂಬ ಹೆಸರಿನಿಂದ ರಾಜ್ಯದಲ್ಲೆಲ್ಲಾ ಸಂಚರಿಸುತ್ತಿದ್ದರು'

'ಸರಿ. ಯಾತ್ರಾರ್ಥಿಗಳಂತೆ ಸಂಚಾರಮಾಡುತ್ತ ಶಿಶುಗೋಪನಾಲಯಗಳನ್ನೂ ಸತ್ರಗಳನ್ನೂ ಕಟ್ಟಿಸುತ್ತಿದ್ದವರು ಇವರೇನೋ?'

'ಹೌದು. ಇವರು ಬೈರಾಗಿಗಳಾಗಿ ಜೋಯಿಸ ಹೇಳಿಕೊಂಡು ನಗರ ಪ್ರವೇಶಮಾಡುವುದಿಲ್ಲವೆಂದು ವ್ರತಮಾಡಿದ್ದವರು'

'ಸರಿ. ಕಂದಮೂಲಫಲಾಹಾರಿಗಳಾಗಿ ಎಲ್ಲರಿಗೂ ಸಾಮುದ್ರಿಕಾದಿಗಳನ್ನು ಹೇಳುತ್ತಿದ್ದವರು. ನಾಡಗೌಡರನ್ನೆಲ್ಲ ಎತ್ತಿ ಕಟ್ಟಿದವರು. ಬೀರಯ ಗೌಡರಿಗೂ ನಮಗೂ ಪ್ರತ್ಯಕ್ಷವಿರೋಧವು ಪ್ರಕಟವಾಗುವುದಕ್ಕೆ ಕಾರಣರು'

'ಇವರು ಶ್ರಮಣಕನ ವೇಷದಿಂದ ಅಲ್ಲಲ್ಲಿ ಕಾರ್ಯಾರ್ಥಿಗಳಾಗಿ ತಿರುಗುತ್ತಿದ್ದವರು'

'ಹಾಗಾದರೆ ಗಜವೀಧಿಗೆ ಬಂದಿದ್ದ ಶ್ರಮಣಕನೂ ಇವರೇ! ಸ್ವರ್ಣಲಾಭದ ಮೊಂಕುಬೂದಿಯನ್ನು ಎರೆಚಿ ಗಜನಾಯಕರನ್ನು ಹಿಡಿದವರು ಇವರೇ!'

'ಅದು ತಮಗೆ ತಿಳಿದಿದ್ದಿತೇನು?'

'ಪ್ರಭು! ತಿಳಿದಿದ್ದಿತು. ಆದರೆ ಬಹು ನಿಧಾನವಾಗಿ ತಿಳಿಯಿತು. ನನಗೆ ತಿಳಿದುದು ಅಮಾವಾಸ್ಯೆಯ ದಿನ. ಆದಿನ ಸಾಯಂಕಾಲವೇ ತಾವು ನನ್ನನ್ನು ಸೆರೆಹಿಡಿದಿರಿ. ಹೋಗಲಿ, ಈಗ ನನ್ನನ್ನು ಕರೆಯಿಸಿದ ಕಾರಣವೇನು?

ಷಡಾನನಶರ್ಮನು ಹೇಳಿದನು: 'ರಾಜಧಾನಿಯಿಂದ ತಮಗೆ ಒಂದು ಪತ್ರ ಬಂದಿದೆ'

'ಅದನ್ನು ನಾನಿದ್ದಲ್ಲಿಗೇ ಕಳುಹಿಸಬಹುದಾಗಿದ್ದಿತಲ್ಲವೆ?'

'ಇಲ್ಲ, ಅದನ್ನು ಮುಖತಃ ತಮಗೆ ಕೊಟ್ಟು ತಮ್ಮನ್ನು ಪ್ರಾರ್ಥಿಸಿಕೊಳ್ಳುವ ಅಂಶವೂ ಇದ್ದಿತು'

'ಅಪ್ಪಣೆಯಾಗಬೇಕು. ಸಿದ್ಧವಾಗಿದ್ದೇನೆ'

'ನಾವು ಬನವಾಸಿಯನ್ನೂ ಕೈವಶಪಡಿಸಿಕೊಂಡಿರುವುದಾಗಿಯೂ ಕೂಡಲೇ ಸಂಧಿಪ್ರಯತ್ನಗಳನ್ನು ನಡೆಯಿಸದಿದ್ದರೆ ರಾಜಧಾನಿಯ ಕಡೆಗೂ ನಮ್ಮ ಕೈಯನ್ನು ನೀಡುವುದಾಗಿಯೂ ನಾವು ನಿನ್ನೆಯ ದಿನ ಪತ್ರವನ್ನು

ಬರೆದು ಪಾರಿವಾಳದ ಮೂಲಕ ಕಳುಹಿಸಿದೆವು. ಈ ದಿನ ಮಧ್ಯಾಹ್ನ ಈ ಉತ್ತರ ಬಂದಿತು '

ಷಡಾನನಶರ್ಮನು ಒಂದು ಸಣ್ಣ ಚೀಟಿಯನ್ನು ಕೊಟ್ಟನು. ಅದರಲ್ಲಿ, 'ಸಂಧಿವಿಗ್ರಹಿಗಳನ್ನು ಕಳುಹಿಸಿಕೊಡಿ. ಅವರಿಲ್ಲದೆ ಸಂಧಿಯ ವಿಷಯ ಪ್ರಸ್ತಾಪಿಸಲಾಗುವುದಿಲ್ಲ' ಎಂದು ಬರೆದಿದ್ದಿತು.

ನಂದಿವರ್ಮನು ಕಾಗದವನ್ನು ಪರೀಕ್ಷಿಸಿ ನೋಡಿದನು. ಅದು ರಾಜಧಾನಿಯಿಂದ ಸಮ್ರಾಜರ ಕಡೆಯಿಂದಲೇ ಬರುವ ಕಾಗದ. ಇನ್ನು ಯಾವ ತೆರದಲ್ಲಿಯೂ ಅನುಮಾನವುಳಿಯದಿರಲು ಹೇಳಿದನು: 'ಇದು ನಿಜವಾಗಿಯೂ ಆಶ್ಚರ್ಯವಾಗಿದೆ. ನ್ಯಾಯವಾಗಿ ಮಾಂಡಲಿಕರೂ ಮಾಂಡಲಿಕೇಶ್ವರರೂ ತಮ್ಮ ಕರ್ತವ್ಯವನ್ನು ಪಾಲಿಸಲಿಲ್ಲವೆಂದು ಸಮ್ರಾಜರ ಆಗ್ರಹಕ್ಕೆ ಪಾತ್ರರಾಗಬೇಕು. ಹಾಗಿಲ್ಲದೆ ಸಂಧಿಗೆ ಸಂಧಿವಿಗ್ರಹಿಯನ್ನು ಬರಹೇಳುವುದು! ಇರಲಾರದು'

'ತಮ್ಮ ಚಿತ್ತ. ತಮ್ಮ ಪ್ರಭುಗಳವರ ಅಪ್ಪಣೆಯನ್ನು ತಮಗೆ ತಿಳುಹಿಸಿಯಾಯಿತು. ಇನ್ನು ತಮಗೆ ತೋರಿದಂತೆ ಮಾಡಬಹುದು'

ನಂದಿವರ್ಮನು ಏನೇನೋ ಆಲೋಚಿಸಿದನು: 'ಒಂದು ವೇಳೆ ನಿಜವಿರಬಾರದೇಕೆ? ಇಲ್ಲಿನ ಬಲಾಬಲಗಳನ್ನು ತಿಳಿದು ಸಂಧಿಸಮರಗಳಲ್ಲಿ ಯಾವುದು ಸರಿಯೆಂದು ಗೊತ್ತುಮಾಡಲು ನನ್ನನ್ನು ಕೋರಿರಬಹುದು'

ಷಡಾನನ ಶರ್ಮನು ಹೇಳಿದನು: 'ಸಚಿವರಲ್ಲಿ ವಿಜ್ಞಾಪನೆಯಿಷ್ಟೆ! ನಮ್ಮ ಸಮಕ್ಷದಲ್ಲಿದ್ದು ಆಲೋಚಿಸುವುದು ತಮ್ಮ ಮನಸ್ಸಿಗೆ ಬರದಿದ್ದರೆ ತಾವು ತಮ್ಮ ಅಂತರ್ಗೃಹದಲ್ಲಿ ಯೋಚಿಸಿ ಗೊತ್ತುಮಾಡಬಹುದು. ತಾವು ರಾಜಧಾನಿಗೆ ಹೊರಡುವುದಾಗಿ ಮನಸ್ಸು ಮಾಡಿದರೆ ಪ್ರಹರಿಯೊಡನೆ ಹೇಳಿಕಳುಹಿಸೋಣವಾಗಲಿ. ತಾವು ರಾಜಧಾನಿಗೆ ಹೋಗುವುದಾದರೆ ರಾಜಸಭೆಗೆ ಬರುವ ಶ್ರಮವನ್ನು ವಹಿಸಬೇಕಾಗುತ್ತದೆ. ಇಲ್ಲವಾದರೆ ಬೇಕಿಲ್ಲ'

'ನನ್ನನ್ನು ಬಂದಿಯನ್ನಾಗಿ ರಾಜಸಭೆಯಲ್ಲಿ ಮೆರೆಯಿಸಬೇಕೆಂದು ತಮ್ಮ ಇಷ್ಟವೋ?'

'ಶಿವಶಿವಾ! ನಮಗಂತಹ ದ್ವೇಷವಿಲ್ಲ ಸಚಿವಾ! ತಾವು ಇಲ್ಲಿದ್ದು ಬನವಾಸಿಯ ಜನರೂ ಬನವಾಸಿಯ ಮಂಡಲದ ನಾಡಗೌಡರೂ ನಮ್ಮಲ್ಲಿ ಹೇಗೆ ನಡೆಯುವರೆಂಬುದನ್ನು ನೋಡಿದ್ದರೆ ಮುಂದೆ ಸಂಧಿಪ್ರಸ್ತಾಪನೆಯ ಕಾಲದಲ್ಲಿ ಬಲಾಬಲಗಳನ್ನು ತಿಳಿದು ಮಾತನಾಡಲು ಸಾಧ್ಯ! ಅದಕ್ಕಾಗಿ'

'ಎಂದರೆ ತಮಗೆ ಸಂಧಿಯಲ್ಲಿ ಇರುವಷ್ಟು ಕುತೂಹಲ ಸಮರದಲ್ಲಿಲ್ಲ ವೆಂದೋ?'

'ಹೌದು ತಮ್ಮ ಊಹೆಯು ಸರಿ. ಈ ವಿಷಯದಲ್ಲಿ ನಮ್ಮ ಮಹಾ ರಾಜರು ತಮ್ಮ ಯುವರಾಜರ ಶಿಷ್ಯರು'

ನಂದಿವರ್ಮನು ತಲೆದೂಗಿದನು. ಅವನಿಗೆ ಅರ್ಥವಾಯಿತು. ಯುದ್ಧ ಮಾಡದೆ ಮರ್ಗಗಳನ್ನು ಹಿಡಿಯುವ ಕಾರ್ಯದ ಗುಟ್ಟು ತಿಳಿಯಿತು. ಮತ್ತೆ ಕುತೂಹಲಿಯಾಗಿ ಕೇಳಿದನು: 'ಈ ನನ್ನ ಪ್ರಶ್ನೆಗೆ ನೇರವಾದ ನಿಜವಾದ ಉತ್ತರವು ಸಿಕ್ಕಿದರೆ ನಾನು ಹೊರಡುವುದನ್ನೂ ಬಿಡುವುದನ್ನೂ ಈಗಲೇ ಗೊತ್ತುಮಾಡುತ್ತೇನೆ. ನಮ್ಮ ಸೇನೆಯೆಲ್ಲ ಏನಾಯಿತು?'

'ನಾಡಗೌಡರ ಮತ್ತು ನಮ್ಮ ಕೃತ್ರಿಮದಿಂದ ಮೋಸಹೋಗಿ ನಮಗೆ ಶರಣಾಯಿತು. ಅದೆಲ್ಲ ಒಂದು ಕಣ್ಣು ಕಟ್ಟಾಟ! ತಾವು ಸೋತಿರುವುದರಿಂದ ನಂಬುಸಿರಲ್ಲದೆ ಅನ್ಯಥಾ ಇಲ್ಲ. ಆ ಕೌಟಿಲ್ಯನ ಕುಟಿಲ ನೀತಿಯ ಮಾತು ಈಗೇಕೆ?'

'ಆಯಿತು. ನಾನು ಸೈನ್ಯದವರೊಡನೆ ಒಂದೆರಡು ಮಾತು ಆಡ ಬಹುದೆ?'

'ಆಗಬಹುದು. ಆದರೆ ಅದು ಒಂದು ನಿಬಂಧನೆಗೆ ಒಳಪಟ್ಟಿರಬೇಕು'

'ಏನು?'

'ತಾವು ಯಾರೆಂಬುವುದು ಅವರಿಗೆ ತಿಳಿಯಕೂಡದು'

'ಆಗಬಹುದು. ನಾನು ಈ ದಿನ ರಾಜಸಭೆಗೆ ಬರುತ್ತೇನೆ. ಸೇನಾನಿ ಗಳು ಏನಾದರು?'

'ಅವರು ನಿನ್ನೆಯೇ ಸ್ವರ್ಗವಾಸಿಗಳಾದರು.'

'ಹಾಗಾದರೆ ಬೀರಯ ಗೌಡನನ್ನು ಬಿಡಿಸಿದವರು ನಿಮ್ಮ ಕಳ್ಳರು?'

'ಹೌದು'

———o———

## ಮೂವತ್ತೊಂಭತ್ತನೆಯ ಪ್ರಕರಣ.

ನಿಯತಕಾಲಕ್ಕೆ ರಾಜಸಭೆಯು ಸೇರಿತು. ಬನವಾಸಿಯ ನಾಗರಿಕ ಪ್ರಮುಖರೆಲ್ಲರೂ ಸೇರಿದ್ದಾರೆ. ನಾಡಗೌಡರೂ ಬಂದಿದ್ದಾರೆ. ಈಗಲೂ ಮಯೂರನು ಭದ್ರಾಸನದಲ್ಲಿಯೇ ಇದ್ದಾನೆ. ರಾಜಸಭೆಯು ಆರಂಭವಾಯಿತು. ಹಿರಿಯಗೌಡ ಕರಿಯಪ್ಪನಾಯಕನು ಮುಂದೆ ಬಂದು ಕೈ ಮುಗಿದು ಅರಿಕೆಮಾಡಿದನು. ಕಣ್ಣೀರು ಕಾಲುವೆಗಟ್ಟಿ ಹರಿಯುತ್ತಿದ್ದಿತು.

'ಮಹಾಪ್ರಭುವಿನ ಸನ್ನಿಧಿಯಲ್ಲಿ ಅಡ್ಡಬಿದ್ದು ಕೈಜೋಡಿಸಿ ಅರಿಕೆ ಮಾಡಬೇಕೆಂದು ನಾಡಗೌಡರೆಲ್ಲ ನನಗೆ ಅಪ್ಪಣೆಮಾಡಿದ್ದಾರೆ. ನಾವೆಲ್ಲರೂ ತಲೆತಲಾಂತರದಿಂದ ಮಹಾಸ್ವಾಮಿಯವರ ಉಪ್ಪುತಿಂದವರು. ಹಿಂದೆ ಅಚಾತುರ್ಯದಿಂದ ಕತ್ತಿಯೆಳೆದು ಬೀಸುವುದಕ್ಕೂ ಅವಕಾಶವಿಲ್ಲದಂತೆ ರಾಜ್ಯವನ್ನು ಹೆರವರು ಆಕ್ರಮಿಸಿದಂದಿನಿಂದ ನಮ್ಮಾಳ್ದನ ಅಂಕುರವೂ ಮಾಯವಾಯಿತಲ್ಲ ಎಂದು ಕುದಿಯುತ್ತಿದ್ದೆವು ಮಹಾಪ್ರಭು! ನಮ್ಮ ಪುಣ್ಯದಿಂದ, ನಮ್ಮ ಹೆತ್ತಪ್ಪ ಮುತ್ತಪ್ಪರ ಸತ್ಯದಿಂದ, ತಾವು ಉಳಿದು ಇರುವುದು ಗೋಚರವಾಯಿತು. ಅದು ಇಂದಿಗೆ ಮೂರುವರ್ಷದ ಮಾತು. ಮೂರು ವರ್ಷದಿಂದಲೂ ತಮ್ಮ ಹೆತ್ತಪ್ಪ ಮುತ್ತಪ್ಪರ ಸಿಂಹಾಸನದಲ್ಲಿ ತಾವು ವಿರಾಜಿಸುವುದನ್ನು ಕಂಡು ಕಣ್ಣು ಹುಟ್ಟಿದುದಕ್ಕೆ ಸಾರ್ಥಕ ಮಾಡಿಕೊಳ್ಳಬೇಕೆಂದು ಹಗಲೂ ರಾತ್ರಿ ದೇವರು ದೇವರಿಗೆಲ್ಲ ಹರಕೆಯನ್ನು ಹೊತ್ತುದಿರಲಿ, ನಮ್ಮ ಆಳೂ ಕಾಳೂ, ಮಕ್ಕಳು ಮರಿ, ತಮ್ಮ ಸುದ್ದಿಯು ತಿಳಿಯುವವರೆಗೂ ಹಬ್ಬದೂಟ ಉಣಲಿಲ್ಲ; ಪಾಯಸದ ಸೀಯನ್ನು ನಾಲಿಗೆಯರಿಯಲಿಲ್ಲ; ಹೋಳಿಗೆಯನ್ನು ಹೀಗೆ ಮುರಿಯಲಿಲ್ಲ. ನನ್ನಪ್ಪನ ವಂಶದಂಕುರವಿದೆ, ಹೋಗಿಲ್ಲ, ಸತ್ಯದ ಮನೆಯ ದೀಪವಳಿಯುವುದಿಲ್ಲ, ಎಂಬ ಕುರುಡು ನಂಬಿಕೆಯಿಂದ ನಾನು ಬದುಕಿದ್ದೆ ನಮ್ಮಪ್ಪ! ಈ ಶುಭದಿನವನ್ನು ಕಾಣುವು

ದಕ್ಕೆಂದು ಈ ಉಸಿರು ಈ ಎಲುಬಿನ ಹಂದರದಲ್ಲಿ ಇನ್ನೂ ಎಲ್ಲಿಯೋ ಸಿಕ್ಕಿಕೊಂಡಿತ್ತು. ಇದು ನನ್ನೊಬ್ಬನ ಮಾತಲ್ಲ, ಈ ಹದಿನಾರು ಜನ ನಾಡಗೌಡರ ಮಾತು ಮಾತ್ರವಲ್ಲ, ಈ ಗೌಡರ ಆಸರೆಯಲ್ಲಿ ಬಾಳುವ ಎಲ್ಲರ ಮಾತು. ಈ ನಗರದಲ್ಲಿಯೂ ರಾಜಕುಮಾರನು ಬದುಕಿರುವನೆಂದು ತಿಳಿಯುವವರೆಗೂ ಮನೆಯ ಬಾಗಲಿಗೆ ತೋರಣ ಕಟ್ಟದವರು ಎಷ್ಟು ಸಹಸ್ರ ಮಂದಿ ಇದ್ದರು! ದೇವಾ! ಅವರೆಲ್ಲರ ಭಾಗ್ಯವಾಗಿ ಬಂದಿರಿ! ಬನವಾಸಿ ನಾಡಿನ ಭಾಗ್ಯಲಕ್ಷ್ಮಿಯಾಗಿ ಬಂದಿರಿ! ಅಪ್ಪಿ ತಪ್ಪಿ ಕೈಜಾರಿದ್ದ ರಾಜ್ಯಲಕ್ಷ್ಮಿಯು ನಿನ್ನ ಮನೆಯಲ್ಲಿ ನೆಲೆಯಾಗಿ ಬಾಳಲಿ ನಿನ್ನ ಮಕ್ಕಳು ಮರಿಗಳನ್ನು ಓಲೈಸಿಕೊಂಡು ಬಾಳುವ ಭಾಗ್ಯ ನಮಗೂ ನಮ್ಮ ಮಕ್ಕಳು ಮರಿಗಳಿಗೂ ಆಗಲಿ. ಇಗೋ! ಇಂದು, ಬನವಾಸಿಯ ನಾಡಿಗರೇ! ನಾಡಗೌಡರು ತಮ್ಮ ಸಮ್ಮುಖದಲ್ಲಿ ತಮ್ಮರಸನ ಗುಟ್ಟೊಂದು ಹೇಳುವರು ಕೇಳಿ. ಈ ಹದಿನೈದು ಗೌಡರಲ್ಲಿ ಅರಸರದಾಗಿ ಹತ್ತು ಹತ್ತು ಲಕ್ಷ ದ್ರವ್ಯವಿದೆ. ಮೈಯಿನ ರಕ್ತಕ್ಕಿಂತ ಹೆಚ್ಚೆಂದು ಅದನ್ನು ಅವರು ಕಾಪಾಡಿಕೊಂಡು ಬಂದಿದ್ದಾರೆ. ನನ್ನಲ್ಲಿ ನಮ್ಮ ಅರಸನದಾಗಿ ಒಂದು ಕೋಟಿ ದ್ರವ್ಯವಿದೆ. ಇದಿಷ್ಟನ್ನೂ ಅರಮನೆಗೆ ಒಪ್ಪಿಸಲು ಎಲ್ಲರೂ ಕಾದಿದ್ದೇವೆ. ಅರಸಾ! ಒಡೆಯಾ! ನಮ್ಮಪಾಲಿನ ದೈವವೇ! ಇದನ್ನೊಪ್ಪಿಸಿಕೊಂಡು ನಮ್ಮನ್ನು ಋಣಮುಕ್ತನನ್ನಾಗಿ ಮಾಡು. ಅರಸಾಗುವವರೆಗೂ ಈ ಹಣವನ್ನು ಒಪ್ಪಿಸಕೂಡದೆಂದು ಹಿಂದಿನ ಅರಸರ ಅಪ್ಪಣೆಯಾಗಿತ್ತು. ಅದರಿಂದ ಇದುವರೆಗೂ ಒಪ್ಪಿಸಲಿಲ್ಲ. ಈಗ ಹಣವು ನಿನ್ನದಾಗಿ ನಮ್ಮಲ್ಲಿದೆ. ಬೇಕೆಂದಾಗ ನೀನು ತರಿಸಿಕೊ' ಎಂದು ನೆಲಮುಟ್ಟ ಮೈನೀಡಿ ಅಡ್ಡಬಿದ್ದನು.

ಕರಿಯಪ್ಪನಾಯಕನ ಹಿಂದೆ ನಾಡಗೌಡರು ಒಬ್ಬೊಬ್ಬರಾಗಿ ಬಂದು ಅವನಂತೆಯೇ ನೆಲಮುಟ್ಟ ನಮಸ್ಕಾರಮಾಡಿ ಹೋದರು. ನಾಗರಿಕರು ಯಾರೂ ಮರುಮಾತಾಡಲಿಲ್ಲ. ಒಬ್ಬೊಬ್ಬರಾಗಿ ಮುಂದೆ ಬಂದು ಯಥೋಚಿತವಾದ ಕಾಣಿಕೆಯನ್ನೊಪ್ಪಿಸಿ ರಾಜಭಕ್ತಿಯಿಂದ ವಂದಿಸಿದರು.

ತೆರೆಯ ಹಿಂದೆ ಆಸನಾಸೀನನಾಗಿ ಕುಳಿತಿದ್ದ ನಂದಿವರ್ಮನು, 'ಬೇಡದ ಮಡದಿಯನ್ನು ಕೂಡಿದವನೇ ಮೂರ್ಖ!' ಎಂದು ನಿರಾಶೆಯ ನಗುವನ್ನು ನಗುತ್ತಿದ್ದನು.

ಮಯೂರನು ಷಡಾನನ ಶರ್ಮನ ಮುಖವನ್ನು ನೋಡಲು ಆತನು ಮುಂದೆ ಬಂದು ನಿಂತು ಭದ್ರಾಸನವನ್ನು ಭಕ್ತಿಯಿಂದ ವಂದಿಸಿ ಸಭಿಕರಿಗೆ ಅರಿಕೆಮಾಡಿದನು: 'ಬನವಾಸಿಯ ನಾಡು ರಾಜಭಕ್ತಿಗೆ ಹೆಸರಾದುದು. ಆ ತನ್ನ ಹೆಸರುವಾಸಿಯನ್ನು ಇಂದೂ ಕಾಪಾಡಿಕೊಂಡು ನಾಡಿಗೆ ನಾಡೇ ಭುವನ ಮಾನ್ಯವಾಯಿತು. ಇಂತಹ ಭಾಗ್ಯವಂತ ನಾಡಿನ ನಾಡಿಗರನ್ನು ಮಹಾರಾಜರು ಮನಃ ಪೂರ್ವಕವಾಗಿ ಅಭಿನಂದಿಸಿ, ಪ್ರಜೆಗಳ ಇಹಪರ ಧರ್ಮಸೌಖ್ಯಗಳ ರಕ್ಷಣೆಯಲ್ಲಿಯೇ ನಿರತರಾಗಿರುವೆವೆಂದು ಮತ್ತೆ ಪ್ರತಿಜ್ಞಾ ಪೂರ್ವಕವಾಗಿ ಅಭಿವಚನ ಕೊಡುತ್ತಾರೆ. ಹಾಗೆಯೇ ಇಂದಿನ ನಾಡಗೌಡರ ರಾಜಭಕ್ತಿ ಸಮುದ್ರದ ಉಕ್ಕೇರುವಿಕೆಯನ್ನು ಕಂಡು ಆನಂದ ತುಂದಿಲರಾದ ಅವರು ನಾಡಗೌಡರಿಗೆ ಹೀಗೆ ಆಜ್ಞೆಮಾಡುತ್ತಾರೆ; 'ತಾವೆಲ್ಲರೂ ನಮ್ಮ ರಾಜ್ಯದ ಪ್ರಜೆಗಳು ಮಾತ್ರವಲ್ಲ, ನಮ್ಮ ರಾಜ್ಯಭವನದ ಭದ್ರ ಮಣಿ ಸ್ತಂಭಗಳು. ತಾವು ಅರಿಕೆಮಾಡಿದ ಧನದ ವಿಚಾರವಾಗಿ ನಮ್ಮ ಕೋರಿಕೆಯಿಷ್ಟೇ! ತಮ್ಮಲ್ಲಿರುವ ಧನದಲ್ಲಿ ಅರ್ಧವನ್ನು ಅರಮನೆಗೆ ಸಲ್ಲಿಸಿ ಉಳಿದರ್ಧವನ್ನು ತಮಗೆ ಸೂಕ್ತ ತೋರಿದಂತೆ ರಾಜ್ಯದ ರಕ್ಷಣಕ್ಕಾಗಿ ಉಪಯೋಗಿಸತಕ್ಕದ್ದು. ನಾವೆಂದುಕೊಂಡಿರುವಂತೆ ಪಲ್ಲವ ರಾಜರೊಡನೆ ಸಖ್ಯ ಬೆಳೆದು ಎಲ್ಲವೂ ಅನುಕೂಲವಾದರಂತೂ ಸರಿಯಾಯಿತು. ಹಾಗಾಗದೆ ಪ್ರತಿಕೂಲವಾಗುವುದಾದರೆ ಅವರ ಸೇನಾಜಾಲದ ಪ್ರವಾಹದಲ್ಲಿ ಕೊಚ್ಚಿಹೋಗದಂತೆ ಕೇವಲ ಆತ್ಮರಕ್ಷಣೆಗಾದರೂ ನಮಗೆ ಅಪಾರವಾದ ಸೈನ್ಯವು ಬೇಕಾಗುವುದು. ಅದರಿಂದ ಬೇಕು ಬೇಡಗಳನ್ನು ವಿಚಾರಿಸಿ, ಯುಕ್ತತೋರಿದಂತೆ ಆ ಅರ್ಧ ಧನವನ್ನು ರಾಜ್ಯರಕ್ಷಣಕ್ಕಾಗಿ ಉಪಯೋಗಿಸುವುದು. ಅಂತೂ ಹೇಗೆಹೇಗೂ ರಾಜಪ್ರಜಾಸಂಬಂಧವು ಮಧುರವಾಗಿ ಪರಸ್ಪರ ಹಿತಕ್ಕಾಗಿ ದೀರ್ಘಕಾಲ ನಡೆದುಬರಬೇಕೆಂಬುದೇ ಅವರ ಕೋರಿಕೆ. ಅದಕ್ಕಾಗಿ ಸತತವೂ ಯತ್ನಿಸುವುದೇ ಅವರ ಜೀವನದ ಉದ್ದೇಶ!'

ಪ್ರಹರಿಯು ರಾಜಸಭೆಯು ಮುಗಿಯಿತೆಂದು ತನ್ನ ದೀರ್ಘ ಗಂಭೀರ ಸ್ವನದಿಂದ ಸೂಚಿಸಿದನು. ಮಹಾರಾಜನು ಸೇನಾನಿಯ ಹಸ್ತಲಾಘವದಿಂದ ಒಳಕ್ಕೆ ಹೋಗುತ್ತಿರುವ ಹಾಗೆಯೇ ಷಡಾನನಶರ್ಮನು ನಂದಿವರ್ಮನನ್ನು ಹುಡುಕಿಕೊಂಡು ಬಂದನು. ನಂದಿವರ್ಮನು ತಾನೇ ಎದುರೆದ್ದು ಬಂದು

ಆತನನ್ನು ಸಂಧಿಸಿ, 'ನಾನು ತಮ್ಮ ವಿಖ್ಯಾತಿಯನ್ನು ಕೇಳಿದ್ದೆ. ತಮ್ಮ ರಾಜನೀತಿಯ ವೈಖರಿ ವೈಶಾಲ್ಯಗಳನ್ನು ನೋಡಿ ತಿಳಿಯುವುದಕ್ಕೂ ಅವಕಾಶ ದೊರೆಯಿತು. ಇಂತಹ ತಾವು ಮಂತ್ರಿಗಳಾಗಿದ್ದೂ ರಾಜ್ಯವು ಪರಾಧೀನವಾದುದು ಹೇಗೆ?' ಎಂದು ನಾನು ಆಶ್ಚರ್ಯಪಡುತ್ತಿದ್ದೇನೆ' ಎಂದನು.

'ಸಚಿವೋತ್ತಮಾ! ಮಾನವನು ದೈವದ ಕೈಯ ಕೂಸು. ತನ್ನ ಹೆಮ್ಮೆಯಲ್ಲಿ ತಾನು ಅತಿದೈವವೆಂದುಕೊಂಡರೂ ದೈವವನ್ನು ಅತಿಕ್ರಮಿಸಿದವರಾರುಂಟು? ಈಗ ತಾವು ಸಂಧಿವಿಗ್ರಹಿಗಳಾಗಿದ್ದೂ ಹೀಗಾಯಿತು. ಇದಕ್ಕೆ ತಾವು ಹೊಣೆಯೆ? ಅಥವಾ ತಮ್ಮನ್ನು ಮೀರಿ ನಾವು ಗೆದ್ದುವೆಂದು ಹೇಳಿಕೊಳ್ಳುವುದುಂಟೆ? ಎಲ್ಲವೂ ದೈವದಾಟ! ನಾವು ಅದರ ಕೈಬೊಂಬೆಗಳು. ಅಷ್ಟೆ ಅಲ್ಲವೆ? ಅದಿರಲಿ. ತಮ್ಮ ಜೊತೆಯಲ್ಲಿ ನಮ್ಮ ಶ್ರೀಮಂತರ ಭಂಡಾರಿ ವಿನಯಗುಪ್ತನೂ ಬರಬಹುದೇ?'

'ನಾನು ಹೋದ ಎರಡು ದಿನದಮೇಲೆ ಬರಲಿ'

ಷಡಾನನ ಶರ್ಮನು ತಾನು ಹಿಡಿದಿದ್ದ ಸಚಿವನ ಕೈಯನ್ನು ಬಲವಾಗಿ ಒತ್ತಿ ಹೇಳಿದನು: 'ನಾವೂ ಸಮರಕ್ಕೆ ಸಿದ್ಧವಾಗಿದ್ದೇವೆ. ಆದರೂ ಬೊಗಸೆಯೊಡ್ಡಿ ಪ್ರಾರ್ಥಿಸುತ್ತೇನೆ. ಸಂಧಿಯನ್ನು ಮಾಡಿಸಿ'

ಮಹಾಪುರುಷರಲ್ಲಿ ದರ್ಶನಮಾತ್ರದಿಂದುಂಟಾಗುವ ಮೈತ್ರಿಯಿಂದ ನಂದಿವರ್ಮನು ಹೇಳಿದನು: 'ಯುವರಾಜರು ಮಯೂರವರ್ಮರಲ್ಲಿ ಅಕೃತ್ರಿಮ ಪ್ರೀತಿಯನ್ನಿಟ್ಟಿದ್ದಾರೆ. ಮಂತ್ರಿಮಂಡಳವು ಅವರ ಮಾತನ್ನು ಮೀರುವುದಿಲ್ಲ. ನಾನೂ ಯತ್ನಮಾಡಿ ಸಂಧಿಯನ್ನೇ ಮಾಡುತ್ತೇನೆ'

—o—

# ನಲವತ್ತನೆಯ ಪ್ರಕರಣ

ಶ್ರೀಶೈಲವು ಶತ್ರುವಶವಾಯಿತೆಂಬ ಸುದ್ದಿಯನ್ನು ಹೊರಕ್ಕೆ ಬಿಡಬಾರದೆಂದು ಪಲ್ಲವ ಮಂತ್ರಿಮಂಡಳವು ಮಾಡಿದ ಪ್ರಯತ್ನವೆಲ್ಲವೂ ನಿಷ್ಫಲವಾಯಿತು. ಶತ್ರುಪಕ್ಷದವರು ಬೇಕೆಂದು ಯತ್ನಪೂರ್ವಕವಾಗಿ ಸುದ್ದಿಯನ್ನು ಹರಡಿದ್ದರೂ ಇದಕ್ಕಿಂತ ಚೆನ್ನಾಗಿ ಹರಡಲಾಗುತ್ತಿರಲಿಲ್ಲ ಎನ್ನುವಷ್ಟುಮಟ್ಟಿಗೆ ಹಬ್ಬಿದೆ. ನಿಜವಾದ ಸಂಗತಿಯು ತಿಳಿಯದೆ, ಅರ್ಧಾರ್ಧದ ವೃತ್ತಾಂತವು ಅವರಿವರ ಕಿವಿಗೆ ಬಿದ್ದು ಬಾಯಿಂದ ಬಾಯಿಗೆ ಬೀಳುತ್ತ ಭಯಂಕರವಾಗಿ ಹೋಗಿದೆ. 'ಶ್ರೀಶೈಲದ ಹೆಸರೇ ಉಳಿದಿಲ್ಲವಂತೆ' ಎನ್ನುವವರು ಕೆಲವರು. 'ಅಲ್ಲಿದ್ದವರನ್ನೆಲ್ಲ ಹೆಂಗಸರು ಮಕ್ಕಳೆನ್ನದೆ ಕಡಿದುಬಿಟ್ಟಿರಂತೆ' ಎನ್ನುವವರು ಇನ್ನು ಕೆಲವರು. ಅಂತೂ ಶ್ರೀಶೈಲದ ಸುದ್ದಿಯಿಂದ ರಾಜಧಾನಿಯೆಲ್ಲ ಅಲ್ಲೋಲಕಲ್ಲೋಲವಾಗಿ ಹೋಗಿದೆ. ರಾಜಧಾನಿಯಿಂದ ಮಾಂಡಲಿಕೇಶ್ವರನಿಗೆ ತಕ್ಕ ಸ್ನೇಹಭಾವದಿಂದ ಹೋದ ರಾಜಪುತ್ರನು ಬಡಹೋರಿಯಂತೆ ಹಿಂದುಮುಂದಿಲ್ಲದೆ ಹಿಂತಿರುಗಿಬಂದುದೂ ಸೇರಿ ಉರಿಯುವ ಬೆಂಕಿಗೆ ಬೀಸುವ ಗಾಳಿಯು ಸೇರಿದಂತೆ ಆಗಿದೆ.

ಇದರ ಜೊತೆಗೆ ಬನವಾಸಿಯು ಕೈತಪ್ಪಿದ ಸಮಾಚಾರವೂ ಬಂದಿದೆ. ರಾಜಧಾನಿಯ ಪ್ರಜೆಗಳ ಕಳವಳವಂತೂ ಬಲಿತುಹೋಗಿದೆ. 'ಸಾಮ್ರಾಜ್ಯವೇ ಅಂತರಿಸುವಕಾಲ ಬಂದಿದೆಯೇನೋ?' ಎಂದು ಎಲ್ಲರೂ ಭೀತರಾಗಿದ್ದಾರೆ. 'ಅಶ್ವತ್ಥಾಮನ ವಂಶದ ಧರ್ಮಮಹಾರಾಜರು ಬೌದ್ಧ ಧರ್ಮವನ್ನು ಅವಲಂಬಿಸಿದರು. ಅವರ ರಾಜ್ಯವು ಹೀಗೆ ಹಾಳಾಗಿ ಹೋಯಿತು' ಎಂದರು ಕೆಲವರು. 'ಅದಕ್ಕೂ ಇದಕ್ಕೂ ಸಂಬಂಧವೇನು? ಭೋಗಕಾಲ ಮುಗಿಯಿತು' ಎಂದರು ಇನ್ನು ಕೆಲವರು. 'ಲಕ್ಷ್ಮಿಯು ಚಂಚಲೆಯಯ್ಯಾ! ಒಂದೇಕಡೆ ಇದ್ದರೆ ಹೇಗೆ?' ಎಂದರು ಮತ್ತೆ ಕೆಲವರು. ಅಂತೂ ನಾನಾ ವಿಧವಾಗಿ ಟೀಕಾಟಿಪ್ಪಣಿಗಳಾದುವು.

ಮಂತ್ರಿಮಂಡಲವು ಸಮರವೇ ಸಂಧಿಯೇ ಎಂಬ ಪ್ರಶ್ನೆಯನ್ನು ಮೂರು ದಿನದಿಂದ ವಿಚಾರಮಾಡುತ್ತಿದೆ. ಒಂದು ವಾರದಲ್ಲಿ ಎರಡು ರಾಜಧಾನಿಗಳು ಕೈಬಿಟ್ಟು ಹೋಗಿ ಮಂತ್ರಿಮಂಡಳಕ್ಕೆ ಸಹಿಸಲಾಗದಷ್ಟು ಅಪಮಾನ

ವಾಗಿದೆ. ಯುದ್ಧದಲ್ಲಿ ಹೊಡೆದಾಡಿದಾಗ ಸೋಲು ಗೆಲುವುಗಳಾಗುವುದನ್ನು ಅವರು ಬಲ್ಲರು; ಆದರೆ ಯುದ್ಧ ಪ್ರಸಕ್ತಿಯೇ ಇಲ್ಲದೆ ದುರ್ಗಗಳನ್ನು ನುಂಗುತ್ತಿರುವ ಈ ಅಸಾಮಾನ್ಯ ಶತ್ರುವಿನ ಸಾಹಸದಿಂದ ಮುಗ್ಧರಾಗಿ ಮಂತ್ರಿ ಮಂಡಲವು ಮೂಕವಾಗಿದೆ. ಸಮರದ ಹೆಸರೇ ಇಲ್ಲದೆ ಅಲ್ಲಲ್ಲಿನ ಸೈನ್ಯವು ಅಲ್ಲಲ್ಲಿಯೇ ಕರಗಿದೆ. ಯುದ್ಧಮಾಡುವುದಾದರೆ ರಾಜಧಾನಿಯಿಂದ ಹೊಸ ಸೈನ್ಯವನ್ನು ಹುಟ್ಟಿಸಿಕೊಂಡು ಹೋಗಬೇಕು. ಅಲ್ಲದೆ, ರಣರಂಗಕ್ಕೆ ಇಳಿದರೆ ಸಮಯವನ್ನು ಕಾದಿರುವ ಬಾಣರು, ಪಾಂಡ್ಯರು, ಚೋಳರ ಹಾವಳಿ. ಶ್ರೀಶೈಲದಿಂದ ತಲೆತಪ್ಪಿಸಿಕೊಂಡು ಬಂದಿರುವ ರಾಜಕುಮಾರನು ಪಾಂಡ್ಯ ಚೋಳರ ವಿಷಯವನ್ನು ಸ್ವಂತವಾಗಿ ಕೇಳಿದ್ದಾನೆ. ಏನುಮಾಡಬೇಕು?

ನಂದಿವರ್ಮನು ಬಂದಮೇಲೆ ಸಮಾಲೋಚನೆಗೊಂದು ನಿರ್ದಿಷ್ಟ ರೂಪವು ಬಂದಿತು. ಮೊದಲಿನಿಂದಲೂ ಇದ್ದ, 'ಸಮರವು ಸರಿಯಲ್ಲ ಸದ್ಯದಲ್ಲಿ ಸಂಧಿಯೇ ಸರಿ'ಯೆಂಬ ಅಭಿಪ್ರಾಯಕ್ಕೆ ಬಣ್ಣವೇರಿತು. ಆದರೂ ಇನ್ನೂ ಯಾವುದೂ ನಿರ್ಧರವಾಗಿಲ್ಲ.

ಯುವರಾಜನು ತನ್ನ ಕರುಮಾಡದಲ್ಲಿ ಏಕಾಂತವಾಗಿ ಕುಳಿತು ಯೋಚಿಸುತ್ತಿದ್ದಾನೆ: 'ಹೌದು. ಹೀಗೆಯೇ ಮಾಡಬೇಕು. ಆದರೆ ಮಂತ್ರಿ ಮಂಡಲದ ಸಂಶಯಕ್ಕೆ ಸಮಾಧಾನ ಹೇಳುವುದು ಹೇಗೆ? ಇಷ್ಟುದೂರ ಕೃತ್ರಿಮ ಸಂಧಾನದಿಂದ ಗೆದ್ದಿರುವವನು ಇನ್ನೂ ಒಂದು ಸಲ ಕಪಟಿ ಯಾಗುವುದಿಲ್ಲವೆಂದು ನಂಬುವುದು ಹೇಗೆ? ಹಾಗೆಂದು ಇವರ ಅಭಿಪ್ರಾಯ ದಂತೆ ಈ ಮಹಾಸೈನ್ಯಸಾಗರವನ್ನು ಕಟ್ಟಿಕೊಂಡು ಹೊರಟರೆ ಕಾರ್ಯವು ನೆರವೇರುವುದೆಂತು?'

ಪ್ರಹರಿಯು ಬಂದು ಅರಿಕೆಮಾಡಿದನು: 'ಪ್ರಭುವಿಗೆ ಜಯವಾಗಲಿ. ರಾಜಪುತ್ರಿಯವರು ದಯಮಾಡಿಸುತ್ತಿರುವರು'

ಯುವರಾಜನು ಆಶ್ಚರ್ಯಪಟ್ಟನು. 'ಇನ್ನೂ ಮಧ್ಯಾಹ್ನದ ಬಿಸಿಲು ತಂಪಿಲ್ಲ, ಇಷ್ಟುಬೇಗ ರಾಜಪುತ್ರಿಯು ಬರುವ ಕಾರಣ?'

ರಾಜಪುತ್ರಿಯು ಒಳಗೆ ಪ್ರವೇಶಿಸಿದಳು. ಮುಖವು ದುಗುಡದಿಂದ ಭಾರವಾಗಿ ಕಾಂತಿಹೀನವಾಗಿದ್ದಿತು. ಕಣ್ಣುಗಳು ಸಣ್ಣಗೆ ಊದಿ ಕೆಂಪು

ಗೊಂಡಿದ್ದುವು. ಧ್ವನಿಯು ಮಂದವಾಗಿದ್ದಿತು. ಕೇಶದಾಮಕ್ಕೆ ಸಂಸ್ಕಾರವಾದಂತೆ ಇದ್ದರೂ ಪೂರ್ಣವಾಗಿರದೆ ಕೆಲವು ಕೇಶಗುಚ್ಛಗಳು ಸ್ವತಂತ್ರಿಸಿ ಆಗ ತಾನೇ ಹುಟ್ಟುತ್ತಿರುವ ಗಾಳಿಯಲ್ಲಿ ಕುಣಿದು ಆಕೆಯ ಅಂತರಂಗದ ದುಸ್ಸ್ಥಿತಿಯನ್ನು ನಿಶ್ಶಬ್ದವಾಗಿ ಉದ್ಘೋಷಿಸುತ್ತಿದ್ದುವು. ನಡೆಯಲ್ಲಿ ಅಲಸಿಕೆ. ದೇಹದಲ್ಲಿ ಲಘುತೆಯಿಲ್ಲ. ಆಕೆಯ ಪ್ರಪಂಚವೆಲ್ಲವೂ ಚಿಂತಾಜಾಡ್ಯದಿಂದ ಶೂನ್ಯವಾಗಿ ಹೋಗಿದೆ.

ಬಂದವಳು ಎಂದಿನಂತೆ ಅಣ್ಣನ ಕಾಲು ಮುಟ್ಟಿ ನಮಸ್ಕಾರ ಮಾಡಿದಳು. ಯುವರಾಜನು ಸೋದರಿಯನ್ನು ಪ್ರೀತಿಯಿಂದ ಸತ್ಕರಿಸಿ ತನ್ನ ಆಸನದಲ್ಲಿಯೇ ಕುಳ್ಳಿರಿಸಿಕೊಂಡನು. ಆಕೆಯ ಚಿಂತೆಯೆಲ್ಲವನ್ನೂ ಕ್ಷಣಮಾತ್ರದಲ್ಲಿ ತಾನು ವಹಿಸಿಕೊಂಡು, 'ಕಂದಮ್ಮನು ಇಲ್ಲಿಯವರೆಗೂ ದಯಮಾಡಿಸಿದುದೇನು? ಅಪ್ಪಣೆಯಾಗಿದ್ದರೆ ನಾನೇ ಬರುತ್ತಿರಲಿಲ್ಲವೆ?' ಎಂದು ಕೇಳಿದನು.

ರಾಜಪುತ್ರಿಯು ಪ್ರಯತ್ನಬಲದಿಂದ ಧೀರತೆಯನ್ನು ವಹಿಸಿ ಸ್ಥಿರಳಾದಳು. ಅಣ್ಣನಿಗೆ ನಮಿಸಿದಾಗ ಕಣ್ಣು ತೇವವಾಗಿದ್ದಿತು. ಅದನ್ನು ತಟ್ಟನೆ ಒರೆಸಿಕೊಂಡು ಸೋದರನ ಮುಖವನ್ನು ನೋಡಿ ಸಣ್ಣ ನಗು ನಕ್ಕು, 'ಯುವರಾಜರಿಗೆ ಈಗ ಅವಕಾಶವಿಲ್ಲವೆಂಬುದನ್ನು ಬಲ್ಲೆ. ಆದರೂ ಅವರ ಓಡುವ ರಥದ ಹಾದಿಯಲ್ಲಿದ್ದ ವಿಘ್ನವು ದೂರವಾಯಿತು ಎಂಬುದನ್ನು ಅರಿಕೆಮಾಡಲು ನಾನೇ ಅವಸರಿಸಿ ಸನ್ನಿಧಿಗೆ ಬಂದೆ' ಎಂದಳು.

ಯುವರಾಜನು ಈ ಹೊಸ ವಿಷಯವನ್ನು ತಟ್ಟನೆ ಗ್ರಹಿಸಲಾರದೆ ಕೊಂಚ ಚಕಿತನಾಗಿ, 'ಹಾಗೆಂದರೆ?' ಎಂದನು.

'ಹಾಗೆಂದರೆ ಇಷ್ಟೆ? ಮಂತ್ರಿಮಂಡಲವು ಸಮರಪಕ್ಷಪಾತಿಯಾಗಿದೆಯೆಂದೂ ಯುವರಾಜರು ಮಾತ್ರ ಸಂಧಿಪಕ್ಷಪಾತಿಗಳೆಂದೂ ಕೇಳಿದೆ. ನನಗೂ ಬಹುಮಟ್ಟಿಗೆ ಸಮಾಧಾನವಾಯಿತು. ಆದರೂ ಒಂದು ಹೆಣ್ಣಿಗಾಗಿ ರಾಜನೀತಿಯು ವಕ್ರವಾಯಿತೆಂದು ನನಗೆ ಅಪಯಶಸ್ಸು ಬರಬಾರದು ಎಂದು ಗೊತ್ತುಮಾಡಿ ಸನ್ನಿಧಿಗೆ ಬಂದೆ'

'ಹಾಗೆಂದರೆ ಏನುಮಾಡಬೇಕೆಂದಿರುವೆ?'

ರಾಜಪುತ್ರಿಯು ನೆಟ್ಟದಿಟ್ಟಿಯಿಂದ ನೆಲವನ್ನು ನೋಡುತ್ತ ಧೀರಳಾಗಿಯೇ ಹೇಳಿದಳು: 'ಅಣ್ಣಯ್ಯಾ! ತಮಗೆ ತಂಗಿಯೆಂಬ ಅಭಿಮಾನವು ಹೆಚ್ಚು. ಆ ಅಭಿಮಾನದಿಂದ ಸೋಲನ್ನು ಒಪ್ಪಿಕೊಂಡು ಸಮರವು ಬೇಡವೆಂದು ಸಂಧಿಗಾಗಿ ಕೈನೀಡಿರುವಿರಿ. ಇದು ಪಲ್ಲವ ಕುಲದ ಪೂರ್ಣ ಅಪಮಾನವೆಂದು ಜನರಾಡಿಕೊಳ್ಳುತ್ತಿರುವರಂತೆ! ಅದು ಕೂಡದು. ನನ್ನ ಸುಖಕ್ಕಾಗಿ ನನ್ನ ತವರುಮನೆಯ ಮಾನವು ಎಳ್ಳಷ್ಟೂ ಕುಂದಕೂಡದು. ಅದರಿಂದ ತಮಗೆ ತಂಗಿಯೇ ಇಲ್ಲದಾಗ ತಾವು ಹೇಗೆ ಸ್ವೇಚ್ಛೆಯಾಗಿ ವ್ಯವಹರಿಸುತ್ತಿದ್ದಿರೋ ಈಗಲೂ ಹಾಗೇ ವರ್ತಿಸಬೇಕೆಂದು ನನ್ನ ಅರಿಕೆ'

'ಆಯಿತು. ನೀನು?'

'ನಾನೇ? ಭಿಕ್ಷುಣಿಯಾಗಿ ಲೋಕಯಾತ್ರೆ ಮಾಡುವೆನು'

ಯುವರಾಜನಿಗೆ ಕರುಳು ಹಿಸುಕಿದಂತಾಯಿತು: 'ಅಮ್ಮಯ್ಯ! ಆಶಾಭಂಗದಿಂದ ವಿರಾಗವು ಬರುವುದಿಲ್ಲ. ವಿರಾಗವಿಲ್ಲದೆ ಭಿಕ್ಷುಣಿಯಾಗುವುದೆಂತು? ನೀನು ತಿಳಿದುದು ಸರಿಯಲ್ಲ. ನೀನು ಜನ್ಮವೆತ್ತಿರುವುದು ಭಿಕ್ಷುಣಿಯಾಗುವುದಕ್ಕಲ್ಲ. ಸಮ್ರಾಜ್ಞಿಯಾಗಿ ಸಿಂಹಾಸನದಲ್ಲಿ ಸಮ್ರಾಜನ ಜೊತೆಯಲ್ಲಿ ಕುಳಿತು ಸಮಸಮವಾಗಿ ರಾಜ್ಯವಾಳುವುದಕ್ಕೆ! ಪಟ್ಟದಾನೆಯಾಗಿ ಮೆರೆಯುವುದಕ್ಕೆ ಹುಟ್ಟಿರುವ ಗಂಧಗಜವನ್ನು ತೊಲೆಯೆಳೆಯುವುದಕ್ಕೆ ಹಾಕುವರೇ? ಸೋದರಿ! ಕಾತರಿಸದಿರು. ಸುತ್ತಮುತ್ತಲಿನ ಸ್ಥಿತಿಗತಿಯನ್ನರಿದು ಸಂಧಿಯೇ ಸರಿಯೆಂದು ಅರಿತಿದ್ದರೂ ಮಂತ್ರಿಮಂಡಲವು ದುರಭಿಮಾನ ದರ್ಪಗಳ ದುರ್ವ್ಯಾಧಿಯಿಂದ ತಪ್ಪಿಸಿಕೊಳ್ಳಲಾರದೆ 'ಶಠಂ ಪ್ರತಿ ಶಾಠ್ಯಂ' ಎಂಬ ನ್ಯಾಯವೇ ಸರಿಯೆಂದು ಕುಳಿತಿರುವುದು. ಪಾಂಡ್ಯ ಚೋಳರಾಜರಿಗೆ ನಮ್ಮಿಂದ ಪತ್ರಗಳು ಹೋಗಿವೆ. ಅವರಿಂದ ಏನು ಉತ್ತರವು ಬರುವುದೋ ಅದನ್ನು ಅನುಸರಿಸಿ ನಮ್ಮ ನೀತಿಯು ರೂಪುಗೊಳ್ಳುವುದು. ಅಲ್ಲದೆ ಅಲ್ಲಿಂದ ಬಂದ ನಂದಿವರ್ಮನು, 'ಆ ನಾಡನ್ನು ಹಿಡಿದರೂ ದಕ್ಕಿಸಿಕೊಳ್ಳುವುದು ಕಷ್ಟ. ನಾಡಿಗರು ಒಬ್ಬೊಬ್ಬರೂ ನಮ್ಮ ಮೇಲೆ ಹಗೆಗೊಂಡಿದ್ದಾರೆ' ಎಂದು ಹೇಳುತ್ತಿದ್ದಾನೆ. ನಂದಿವರ್ಮನೆಂತಹ ರಾಜನೀತಿಜ್ಞನೆಂಬುದನ್ನು ನೀನು ಅರಿಯೆಯಾ? ಈಗ ಸಂಧಿಯಾಗ

ಬೇಕೆನ್ನುತ್ತಿರುವವನು ನಾನೊಬ್ಬನೇ ಅಲ್ಲ. ನಂದಿವರ್ಮನೂ ಹಾಗೆಯೇ ಹೇಳುತ್ತಿದ್ದಾನೆ. ಅಲ್ಲದೆ ಇನ್ನೂ ಅನೇಕ ಕಾರಣಗಳಿಂದ ಸಂಧಿಯೇ ಸರಿ! ಅದೂ ಇರಲಿ. ಇನ್ನೂ ಒಂದು ವಿಶೇಷವಿದೆ ನೋಡು. ನಾನು ಕತ್ತಿಯನ್ನೂ ಮುದ್ರೆಯುಂಗುರವನ್ನೂ ಕೊಟ್ಟೆ. ವಿಷ್ಣುಗೋಪನು ಶ್ರೀಶೈಲದ ದುರ್ಗವನ್ನು ಕೊಟ್ಟ, ಇನ್ನು ಬೇಕಾದುದು ಒಂದು ಕಿರೀಟ. ಅದನ್ನು ನೀನು ಕೊಡು. ಅಲ್ಲಿಗೆ ಅವನೂ ಮಾಂಡಲಿಕನಾಗಿ ತಾನು ಮುರಿಯ ಬೇಕೆಂದಿರುವ ಸಾಮ್ರಾಜ್ಯದ ಆಧಾರಸ್ತಂಭಗಳಲ್ಲಿ ತಾನೂ ಒಬ್ಬನಾಗುವನು. ಅವನು ಈಗ ತನ್ನ ಸಂಧಾನ ಬಲದಿಂದ ನಮ್ಮನ್ನು ಸೋಲಿಸಿದ್ದಾನೆ. ನಾವು ನಮ್ಮ ಔದಾರ್ಯದಿಂದ ಅವನನ್ನು ಸೋಲಿಸಿ ಮತ್ತೆ ನಮ್ಮವನನ್ನಾಗಿ ಮಾಡಿಕೊಳ್ಳೋಣ. ನಮ್ಮಾನೆಗಳನ್ನು ಒತ್ತುಕೊಟ್ಟು ಕಾಡಾನೆಯನ್ನು ಹಿಡಿಯುವುದಿಲ್ಲವೆ? ಹಾಗೆ ಎಂದುಕೋ! ಈ ರಾಜನೀತಿಯೆಂದರೆ ಯಾವಾಗಲೂ ಗೆಲ್ಲಬೇಕೆಂದೇ ಆಡುವ ಆಟ! ಸೋದರ! ಇಲ್ಲಿ ಆಟಗಾರನು ಸ್ವಾರ್ಥಿಯಲ್ಲದಿದ್ದರೆ ಕೆಲಸವು ಕೆಡುವುದು. ಇಂತಹ ಸ್ವಾರ್ಥಿಯಾಗಿ ನಾನು ಸಂಧಿಯನ್ನು ಕೋರುತ್ತಿರುವೆನು. ಅಲ್ಲದೆ ನಿಜವಾಗಿ ಹೇಳುವೆನು ಕೇಳು. ಸಾಧ್ಯವಾದರೆ ಸಮರವನ್ನು ತಪ್ಪಿಸಬೇಕೆಂಬುದೇ ನನ್ನ ಆಶೆ. ನಿನ್ನ ಯೋಚನೆಯನ್ನು ಬಿಡು. ಕುಮಾರವಿಷ್ಣುವು ಕೈಯಿಟ್ಟು ಮಾಡುವ ಕೆಲಸದಲ್ಲಿ ಅಪಮಾನವು ಎಳ್ಳಷ್ಟೂ ಬರದು. ನೀನು ನಂಬು'

ಪ್ರಹರಿಯು ಬಂದು ಅರಿಕೆಮಾಡಿದನು: 'ಸಚಿವ ನಂದಿವರ್ಮರು ಬರುತ್ತಿದ್ದಾರೆ'

ಯುವರಾಜನ ಅಪ್ಪಣೆಯಂತೆ ನಂದಿವರ್ಮನು ಒಳಕ್ಕೆ ಪ್ರವೇಶಿಸಿದನು. ಮುಖದಲ್ಲಿ ನಿರಾಶೆಯು ರೂಪುಗೊಂಡಿದ್ದಿತು. ಯುವರಾಜನು ಆತನ ವಂದನಕ್ಕೆ ಪ್ರತಿಯಾಗಿ ವಂದನೆಮಾಡುತ್ತಾ 'ಇಲ್ಲ ತಾನೇ?' ಎಂದನು.

ನಂದಿವರ್ಮನು ಏನೂ ಉತ್ತರಕೊಡದೆ ಎರಡು ಪತ್ರಗಳನ್ನು ಮುಂದಿಟ್ಟನು.

ಒಂದು ಪತ್ರದಲ್ಲಿ ಹೀಗೆ ಬರೆದಿದ್ದಿತು :—

'ಸಿಂಹಳದೊಡನೆ ಯುದ್ಧವೊದಗುವ ಪ್ರಸಂಗ ಬಂದಿದೆ. ಈಗ ಸೈನ್ಯಗಳನ್ನು ಕದಲಿಸುವುದು ನಮಗೇ ಅಪಾಯ. ಮನ್ನಿಸಬೇಕು. ಸಿಂಹಳದ ವಿಚಾರವು ಶಾಂತವಾದರೆ ನಮ್ಮ ಸೇನೆಯಲ್ಲವೂ ತಮ್ಮ ಸೇವೆಗೆ ಸಿದ್ಧವಾಗಿದೆಯೆಂದು ಅರಿಕೆ ಮಾಡಿ. ಪಾಂಡ್ಯ ಭೂಪತಿ'

ಇನ್ನೊಂದು ಪತ್ರದಲ್ಲಿ ಹೀಗೆ ಬರೆದಿದ್ದಿತು :—

'ನಮ್ಮ ಸೈನ್ಯವೇನೋ ಸಿದ್ಧವಾಗಿದೆ. ಆದರೆ ಹಾದಿಯ ಬೆಟ್ಟಗುಟ್ಟಗಳನ್ನು ಹತ್ತಿ ಇಳಿದು ಬರುವುದರೊಳಗಾಗಿ ಮಳೆಗಳು ಆರಂಭವಾಗಿ ಬಂದ ಉದ್ದೇಶವು ವಿಫಲವಾಗುವ ಸಂಭವವುಂಟು. ಆದರೂ ಸಮ್ರಾಜರ ಚಿತ್ತವನ್ನು ಅರಿತು ಬರೆಯಿರಿ. ಆಮೇಲೆ ಯೋಚಿಸೋಣ. ಚೋಳೇಂದ್ರ'

ಯುವರಾಜನು ನಗುತ್ತಾ ಹೇಳಿದನು: 'ಅಂತು ಎರಡರರ್ಥವೂ ಒಂದೇ! ಒಂದು ನೇರವಾಗಿ ಇಲ್ಲವೆಂದಿತು. ಇನ್ನೊಂದು ಇದ್ದರೂ ಇಲ್ಲದ ಹಾಗೆಯೇ ಎಂದಿತು. ಸರಿ ಮಂತ್ರಿಮಂಡಲಕ್ಕೆ ತಿಳುಹಿಸೋಣವಾಗಲಿ, ನಾವು ನಾಳೆಯ ದಿನ ಐದುಸಹಸ್ರ ಪದಾತಿ, ಮೂರು ಸಹಸ್ರ ಕುದುರೆ, ಐನೂರು ಆನೆ, ಇನ್ನೂರು ರಥಗಳೊಡನೆ ಬನವಾಸಿಗೆ ಸಂಧಿಗೆ ಹೊರಡುವೆವು. ಈ ಸಮಾಚಾರವನ್ನು ಅಲ್ಲಿಗೂ ತಿಳಿಸಿ. ನಮ್ಮೊಡನೆ ತಾವೂ ಶೇಖರವರ್ಮರೂ ಬರತಕ್ಕದು. ಹಿರಿಯ ಜಟ್ಟಿಗಳೂ ಬಂದರೆ ಸಂತೋಷ. ನಾಳೆಯೇ ಹೊರಡುವುದೆಂದು ಸೇನಾನಿಗೆ ತಿಳಿಸಿ. ಸೇನಾನಿಗಳೂ ಇಲ್ಲಿನ ಸಂಧಿವಿಗ್ರಹಿಗಳೂ ಸಚಿವ ಮಂಡಲವೂ ಇಲ್ಲಿಯೇ ಇದ್ದು ಸರ್ವಸಿದ್ಧರಾಗಿರತಕ್ಕದು. ಇದನ್ನು ಮಹಾಸನ್ನಿಧಾನದಲ್ಲಿ ನಾನು ಅರಿಕೆಮಾಡಿ ಬರುವೆನು'

ಯುವರಾಜನು ಎದ್ದನು. ಸಚಿವನು ಬೀಳ್ಕೊಂಡನು. ಅರಳಿದ ತಾವರೆಯಂತೆ ಮಂದಹಾಸದಿಂದ ರಂಜಿಸುತ್ತಿರುವ ತಂಗಿಯ ನಗೆಮೊಗವನ್ನು ಕಂಡು ಅಣ್ಣನೂ ನಗುತ್ತಾ, 'ಮಾಯೂರೀ ಮದಯತಿ ಮಾರ್ಜನಾ, ಮನಾಂಸಿ' ಎಂದು ಮಾಯಾಮಾಳವ ಗೌಳವದಲ್ಲಿ ಹಾಡುತ್ತ ಅಲ್ಲಿದ್ದ ವಿಗ್ರಹಕ್ಕೆ ಅಲಂಕರಿಸಿದ್ದ ಹಾರವೊಂದನ್ನು ತೆಗೆದುಕೊಂಡು ತಂಗಿಯ ಮೇಲೆಸೆದನು.

ತಂಗಿಯು ಆ ಪರಿಹಾಸ್ಯವನ್ನೊಪ್ಪಿಕೊಳ್ಳುವ ಸಮಾಧಾನದ ಸುಂದರ ಹಾಸ್ಯದಿಂದ ಆ ಮಾಲೆಯನ್ನು ಹಾಗೆಯೇ ಹಿಡಿದುಕೊಂಡು, ಅದನ್ನೇ ಅಣ್ಣನ ಕತ್ತಿಗೆ ಹಾಕಿ 'ವಿಜಯಮಾಲೆ' ಎಂದಳು.

ಇಬ್ಬರೂ ಆಮೋದಿಗಳಾದ ಮಕ್ಕಳಂತೆ ಕಿಲಕಿಲನೆ ನಕ್ಕು ಆ ಅಂತ ಗೃಹವನ್ನೆಲ್ಲ ಬೆಳಗುತ್ತಾ ಒಳಗೆ ಹೋದರು.

——o——

## ನಲವತ್ತೊಂದನೆಯ ಪ್ರಕರಣ

ಯುವರಾಜ ಕುಮಾರವಿಷ್ಣುವು ಕದಂಬ ರಾಜಪುತ್ರ ಮಯೂರ ವರ್ಮನನ್ನು ನೋಡುವುದಕ್ಕೆ ಬರುತ್ತಿದ್ದಾನೆಂದೂ ಸಂಧಿಯೇ ಉದ್ದೇಶ ವೆಂದೂ ಬನವಾಸಿಯಲ್ಲಿ ಸುದ್ದಿ ಹರಡಿತು. ಎಲ್ಲರಿಗೂ ಪರಮ ಸಂತೋಷ. ಕೆಲವರ ಮನಸ್ಸಿನಲ್ಲಿ ಮತ್ತೆ ಪಲ್ಲವರು ದಂಡೆತ್ತಿ ಬಂದರೇನು ಗತಿ ಎಂಬ ಸಂಶಯ ಬೀಜವು ಬದುಕಿಯೇ ಇದ್ದಿತು. ಸಂಧಿಯೇ ಉದ್ದೇಶ ಎಂಬ ಸುದ್ದಿಯು ತಿಳಿದ ಮೇಲಂತೂ ಅವರ ಸಂತೋಷವೇ ಸಂತೋಷ! ಊರು ಬಾಗಿಲ ವಿನಾಯಕನಿಗೂ ಹನುಮಂತರಾಯನಿಗೂ ಎಷ್ಟೋ ಇಡಿಗಾಯಿ ಗಳು ಒಡೆದುವು.

ಅತ್ತ ಅರಮನೆಯಲ್ಲಂತೂ ಪರಮಸಂಭ್ರಮ. ಅರಸನಿಂದ ಹಿಡಿದು ಆಳಿನವರೆಗೂ ಸರ್ವರೂ ಉತ್ಸಾಹಿಗಳಾಗಿದ್ದಾರೆ. ಆದರೆ ಎಲ್ಲರ ಉತ್ಸಾಹವೂ ಒಂದು ರೀತಿ, ಮಯೂರನ ಉತ್ಸಾಹವೇ ಒಂದು ರೀತಿ. ಯುವಜನೋ ಚಿತವಾದ ಆಶೆಯೊಂದು ಅವನ ಹೃದಯದಲ್ಲಿ ಮೂಡಿ ಜಗತ್ತೇ ಬೇರೊಂದು ರೂಪನಾಂತಂತೆ ಕಾಣುವಂತೆ ಮಾಡಿದೆ. 'ಸಂಧಿಯಲ್ಲಿ ಕೊಟ್ಟು ತೆಗೆದು ಕೊಳ್ಳುವುದಂತೂ ಉಂಟೇ ಉಂಟು, ಹಾಗೆಯೇ ಇನ್ನೂ ಒಂದು ಕೊಟ್ಟು ತೆಗೆದುಕೊಳ್ಳುವುದು ನಡೆದುಹೋದರೆ' ಎನ್ನಿಸಿ ಮೈಯೆಲ್ಲವೂ ರೋಮಾಂಚ ವಾಗುತ್ತದೆ. 'ಆದರೆ, ನನ್ನ ಆಶೆಯು ಮೋಡವನ್ನು ಮುಟ್ಟಲು ಕೈನೀಡಿ ದಂತೆ ಆದರೆ?' ಎಂದು ಸಂದೇಹವೂ ಬರುತ್ತದೆ. ಜೊತೆಯಲ್ಲಿಯೇ 'ಅಷ್ಟು ನಿರಾಶೆಯಾಗಬೇಕಿಲ್ಲ. ಆಕೆಯು ಭಟ್ಟನೊಡನೆ ಹೇಳಿರುವ ಮಾತಿನ ಬಲ

ದಿಂದ ಆ ಸ್ವರ್ಗಕ್ಕೂ ಏಣಿಯನ್ನು ಕಟ್ಟಬಹುದು' ಎಂದು ಧೈರ್ಯಗೊಳ್ಳುತ್ತಾನೆ. ಆ ತನ್ನ ಆಶೆಗೆ ಕೊಂಚ ಅನುಕೂಲವಾಗಲೆಂದೋ, ಅಥವಾ ತಾನು ಹಿಂದೆ ಶಿಷ್ಯನೆಂದು ಪರಿಗ್ರಹಿಸೋಣವಾಗಲಿ ಎಂದು ತನ್ನನ್ನೊಪ್ಪಿಸಿಕೊಂಡಿದ್ದ ನೆನೆಪಿನಿಂದಲೋ ಅಥವಾ ಸಂಧಿಯು ಅನುಕೂಲವಾಗಲೆಂದೋ, ಅಂತೂ ಯುವರಾಜನಿಗೂ ಸಮ್ರಾಜರ ಸೇನೆಗೂ ಅವರು ನಿಂತನಿಂತಲ್ಲಿ ರಾಜಧಾನಿಯಲ್ಲಿ ನಡೆಯುತ್ತಿದ್ದ ರಾಜೋಪಚಾರಗಳೆಲ್ಲವೂ ನಡೆಯುತ್ತಲಿವೆ. ಯುವರಾಜನ ದಾರಿಯಲ್ಲಿ ಊರು ಊರಲ್ಲೆಲ್ಲ ಸುವಾಸಿನಿಯರು ಕಲಶ ಕನ್ನಡಿಗಳಿಂದ ಎದುರು ಗೊಳ್ಳುತ್ತಾರೆ. ಬ್ರಾಹ್ಮಣರು ವೇದ ಘೋಷಗಳಿಂದಲೂ ಬೌದ್ಧರು ತ್ರಿಪಿಟಕ ಪಾರಾಯಣದಿಂದಲೂ ಎದುರುಗೊಂಡು ಫಲಮಂತ್ರಾಕ್ಷತೆಗಳನ್ನು ಒಪ್ಪಿಸುತ್ತಾರೆ. ಶ್ರೀಶೈಲ ಬನವಾಸಿಗಳನಡುವಿರುವ ನಾಗರ ಖಂಡವು ಪಲ್ಲವರದು. ಅಲ್ಲಿ ನಡೆದ ಉಪಚಾರಗಳಿಗಿಂತಲೂ ಬನವಾಸಿಯ ನಾಡಿನಲ್ಲಿಯೇ ಹೆಚ್ಚು ಉಪಚಾರವು ನಡೆದು ಯುವರಾಜನ ಮನಸ್ಸೂ ಸ್ನೇಹ ಮೃದುವಾಗಿದೆ. ಮಯೂರನ ಮೇಲೆ ಯುವರಾಜನ ಅಭಿಮಾನವು ಬಹಳವಾಗುವುದಕ್ಕೆ ಎಷ್ಟೋ ಕಾರಣಗಳುಂಟು. ಅವೆಲ್ಲವನ್ನೂ ಮೀರಿಸಿಕೊಂಡು ಈ ಉಪಚಾರವು ನಯವಾದ ರೀತಿಯಲ್ಲಿ ಆತನ ಹೃದಯವನ್ನು ಆತನರಿಯದಂತೆಯೇ ಸೆರೆ ಹಿಡಿದಿದೆ.

ಕುಮಾರವಿಷ್ಣುವೂ ಮಯೂರವರ್ಮನೂ ಬನವಾಸಿಯ ಮೂಡಲಾಗಿ ವರದಾನದಿಯ ತೀರದ ಬಯಲಿನಲ್ಲಿ ಪರಸ್ಪರ ದರ್ಶನಮಾಡುವುದೆಂದು ಗೊತ್ತಾಗಿ ಅದಕ್ಕಾಗಿ ಸರ್ವಸಿದ್ಧತೆಯೂ ನಡೆದಿದ್ದಿತು. ವಿಸ್ತಾರವಾದ ಹಸುರುವಾಣಿಯ ಚಪ್ಪರವನ್ನು ಹಾಕಿದೆ. ಎರಡು ಕಡೆಯವರೂ ಕುಳಿತುಕೊಳ್ಳಲು ಹಸೆಯ ಜಗುಲಿಯ ಹಾಗೆ ಮಾಡಿದ್ದಾರೆ. ಅಲ್ಲಿ ಸೊಗಸಾದ ಹಸುರು ರತ್ನಕಂಬಳಿಯೊಂದು. ಅದರ ಮೇಲೆ ಭವ್ಯವಾದ ಭದ್ರಾಸನಗಳು ಎರಡು. ಅವುಗಳ ಅತ್ತಿತ್ತ ಕಡೆಯಲ್ಲಿ ಉನ್ನತವಾದ ಆಸನಗಳು. ಎತ್ತೆತ್ತ ನೋಡಿದರೂ ಸೊಗಸಾದ ಬಳ್ಳಿಗಳು. ಹೂವಿನ ದಂಡೆಗಳು. ಸುವಾಸನೆಯನ್ನು ಬೀರುವ ಔಷಧಗಳು. ಮೂಲೆಮೂಲೆಯಲ್ಲಿ ಧೂಪವು ಹೊಗೆಯುತ್ತಿದ್ದರೂ ಆ ಧೂಪಧೂಮವು ಹೊರಗೆ ಕಾಣದಂತೆ ಅದಕ್ಕೂ ಎಳೆಲೆ ಬಾಳೆಯ ಎಲೆಗಳನ್ನು ಮರೆಮಾಡಿದ್ದಾರೆ. ಕಣ್ಣುತಿರುಗಿದತ್ತ ಯಾವು

ದಾದರೊಂದು ಮರದ, ಗಿಡದ, ಬಳ್ಳಿಗಳ, ಮೆಳೆಯ ನೆನೆಪಾಗುವಂತೆ ಮಾಡಿರುವ, ಕೃತ್ರಿಮಾರಣ್ಯದ ಸೊಂಪನ್ನು ಬೀರುವ ಹಸುರು ಮಂಟಪ.

ಯಥಾಕಾಲದಲ್ಲಿ ರಾಜಪುತ್ರರಿಬ್ಬರಿಗೂ ಪರಸ್ಪರ ದರ್ಶನವಾಯಿತು. ಕುಮಾರವಿಷ್ಣುವು ಆಡಂಬರವಿಲ್ಲದ ಅಣಿಯಾದ ವೇಷವನ್ನು ಧರಿಸಿ ಮಿತಾಭರಣಭೂಷಿತನಾಗಿ ರಾಜಸೈನ್ಯವನ್ನೆಲ್ಲ ದೂರದಲ್ಲಿಟ್ಟು ಇಕ್ಕಡೆಗಳಲ್ಲಿ ನಂದಿವರ್ಮ ಶೇಖರವರ್ಮರೂ ಹಿಂದುಗಡೆ ಮುನಿಯಾಜಟ್ಟಿಯೂ ಬರುತ್ತಿರಲು ಕುದುರೆಯನ್ನೇರಿ ಬಂದನು. ಮಯೂರವರ್ಮನೂ ಮಿತಾಲಂಕಾರ ಸುಂದರನಾಗಿ ವೀರಶರ್ಮನು ತನ್ನ ಬಲದಲ್ಲಿ ಕುಳ್ಳಿರಲು ಷಡಾನನಶರ್ಮ ನರಸಿಂಹದತ್ತರು ಹಿಂದೆ ಎರಡನೆಯ ಸಾಲಿನಲ್ಲಿ ಕುಳಿತಿರಲು ಆನೆಯನ್ನೇರಿ ಬಂದನು. ಮಯೂರನು ತಾನಾಗಿ ಮುಂದುವರಿದು ಆನೆಯನ್ನಿಳಿದು ಬಂದು ಕುದುರೆಯನ್ನಿಳಿದು ನಿಂತಿದ್ದ ಯುವರಾಜನಿಗೆ ದೀರ್ಘದಂಡಪ್ರಣಾಮಮಾಡಿದನು. ಯುವರಾಜನು ಆನಂದಬಾಷ್ಪಗಳು ಉದುರುತ್ತಿರಲು ಆತನನ್ನು ಹಿಡಿದು ಎತ್ತಿ ಗಾಢಾಲಿಂಗವನ್ನಿತ್ತು ಕುಶಲ ಪ್ರಶ್ನೆಗೈದು ಭುಜದಮೇಲೆ ಕೈಹಾಕಿಕೊಂಡು ಆತನೊಡನೆ ಮಂಟಪ ಪ್ರವೇಶವನ್ನು ಮಾಡಿದನು.

ಉಭಯ ಪಕ್ಷದವರಿಗೂ. ಪರಸ್ಪರ ಪರಿಚಯ ಕುಶಲ ಪ್ರಶ್ನೆಗಳಾದ ಮೇಲೆ ಕಾರ್ಯಕ್ರಾರಂಭವಾಯಿತು. ಉಭಯ ಸೈನ್ಯದ ಭಂಟರು ಮಂಟಪವನ್ನು ಸಾತಿದೂರದಲ್ಲಿ ಕಾಯುತ್ತಿರಲು ಮಿತ ಪರಿವಾರಿಗಳಾದ ರಾಜಪುತ್ರರು ಛತ್ರಚಾಮರಗಳನ್ನೂ ದೂರವಿಟ್ಟು ಮಾತುಕಥೆಗಳನ್ನಾಡಿದರು.

ಇಬ್ಬರೂ ಎದುರುಗಡೆಯವರನ್ನು ಮೆಚ್ಚಿಸಬೇಕೆಂದೇ ಮಾತನಾಡಿದರು. ಮಯೂರನು 'ಸನ್ನಿಧಾನದಲ್ಲಿ ಅಪ್ಪಣೆಯಾದಂತೆ ನಡೆಯಲು ಸಿದ್ಧನಾಗಿರುವೆನು. ದುರ್ದಮನೀಯವಾದ ದ್ವೇಷವು ಕಿಚ್ಚು ಕಾರುತ್ತಿದೆಯೆಂದು ಹಿಂದೆಯೇ ಅರಿಕೆ ಮಾಡಿಕೊಂಡಿದ್ದೆ. ಇವರೆಲ್ಲರ ಅನುಗ್ರಹದಿಂದ ಆ ದ್ವೇಷ ಶಿಖೆಯಾರಿತು. ಇನ್ನು ಮುಂದಿನದು ಏನಿದ್ದರೂ ಸ್ವಾಮಿಯನ್ನೇ ಸೇರಿದೆ. ಆದರೂ ಪ್ರಭುಗಳವರು ದಯಮಾಡಿ ನನ್ನ ಸ್ವಾತಂತ್ರ್ಯವನ್ನುಳಿಸಿಕೊಡಬೇಕು. ಮಹಾಪಾದದಲ್ಲಿ ಅಷ್ಟೇ ಪ್ರಾರ್ಥನೆ!' ಎಂದು ಷಡಾನನ ಶರ್ಮನ ಮುಖದಿಂದ ವಿಜ್ಞಾಪನೆ ಮಾಡಿದನು.

ಯುವರಾಜನು ಕಡೆಗಣ್ಣೋಟದಿಂದ ಸೂಚಿಸಲು ನಂದಿವರ್ಮನು ಎದ್ದು ಮಾತನಾಡಿದನು: 'ಸಂಧಿಯನ್ನು ನಾವು ಬೇಡವೆನ್ನುವವರಲ್ಲ. ಆದರೆ ನಮ್ಮ ರಾಷ್ಟ್ರದ ಸ್ಥಿತಿಗೆ ಲೋಪ ಬರುವಂತಹ ಸಂಧಿಯನ್ನು ಮಾಡಿಕೊಂಡು ರಾಜನೀತಿಜ್ಞರಮುಂದೆ ಅಪಹಾಸ್ಯಕ್ಕೆಡೆಯಾಗುವುದು ಸಾಧ್ಯವಿಲ್ಲ. ವಂಶಾನುಕ್ರಮದಿಂದ ಬಂದಿರುವ ಬನವಾಸಿಗೆ ತಾವೇ ಅಧಿಪತಿಗಳಾಗಿ ಮಾಂಡಲಿಕೇಶ್ವರರಾಗಿದ್ದು ಸಾಮ್ರಾಜ್ಯ ಸಿಂಹಾಸನದ ಉಪಷ್ಟಂಭಕರಾಗಿರಬೇಕೆಂಬುದೇ ನಮ್ಮ ಅಭಿಪ್ರಾಯವಾಗಿದ್ದಿತು. ಆದರೆ ಸ್ವಾತಂತ್ರ್ಯವು ಇರಬೇಕೆಂದು ತಾವು ಒತ್ತಾಯ ಮಾಡುತ್ತಿರುವಿರಿ. ಅದರಿಂದ, ಮುಖ್ಯವಾಗಿ ತಮ್ಮ ಸ್ನೇಹವು ಬೇಕೆಂಬ ಕಾರಣದಿಂದ, ಸಮ್ರಾಜರು ಅದಕ್ಕೂ ಒಪ್ಪುವರು. ಆದರೆ, ತಮ್ಮ ಸ್ವಾತಂತ್ರ್ಯಕ್ಕೆ ಶ್ರೀಶೈಲದುರ್ಗದ ಬೆಲೆಯನ್ನು ಕಟ್ಟಬೇಕೆಂದು ಮಹಾಸನ್ನಿಧಾನದ ಅಪ್ಪಣೆ. ದೈವಬಲದಿಂದ ವಿಜಯವು ಲಭಿಸಿದ್ದರೂ ತಾವಿನ್ನೂ ದೃಢಮೂಲರಾಗಿ ನೆಲಸಿಲ್ಲವೆಂಬುದನ್ನೂ ಪ್ರಜಾಪಕ್ಷಪಾತವು ಗಾಳಿಯ ಹಾದಿಯಲ್ಲಿರುವ ಎಳೆಮರದಂತೆ ಎತ್ತೆಂದರತ್ತ ಒಲಿಯುವುದೆಂಬುದನ್ನೂ ಗಮನಿಸಿ ಹೀಗೆ ಮಾಡುವುದು ತಮಗೂ ವಿಹಿತವೇ ಎಂದು ಚಕ್ರವರ್ತಿಗಳು ಅಭಿಪ್ರಾಯಪಡುವರು. ಹೀಗೆ ಸ್ವಾಭಿಪ್ರಾಯವನ್ನು ತಮ್ಮ ಮುಂದೆ ಮಂಡಿಸುವಾಗ ಯುವರಾಜರು ಇನ್ನೂ ಒಂದು ವಿಷಯದಲ್ಲಿ ತಮ್ಮ ವಿಚಾರದಲ್ಲಿ ಪ್ರಸನ್ನರಾಗಿರುವರೆಂಬುದನ್ನೂ ವಿಜ್ಞಾಪಿಸುತ್ತೇನೆ. ಹಿಂದೆ ತಾವು ಏಕಾಂಗಿಗಳಾಗಿ ಮಹಾಪ್ರಭುಗಳವರನ್ನು ಸಂದರ್ಶಿಸಿದಾಗ ಆದಷ್ಟು ಮಟ್ಟಿಗೆ ರಕ್ತಪಾತವು ತಪ್ಪುವಂತೆ ಯತ್ನಿಸುವುದಾಗಿ ತಾವು ಕೊಟ್ಟಿದ್ದ ವಚನವನ್ನು ಪರಿಪಾಲಿಸಿರುವ ವಿಷಯದಲ್ಲಿ ಸನ್ನಿಧಿಗೆ ಉಂಟಾಗಿರುವ ಸಂತೋಷವನ್ನು ಹೇಳತೀರದು. ಅದರಿಂದ ಈ ಸಂಧಿಪ್ರಸ್ತಾಪವು ಸಾಧ್ಯವಾಗಿದೆ. ತಾವೂ ದೊಡ್ಡ ಮನಸ್ಸುಮಾಡಿ ಈ ನಿಬಂಧನೆಗಳಂತೆ ಸಂಧಿಗೊಪ್ಪಿ ಸಮರವನ್ನು ತಪ್ಪಿಸುವಿರೆಂದೇ ಸನ್ನಿಧಾನದ ನಿರೀಕ್ಷೆ.'

ಷಡಾನನ ಶರ್ಮನು ಮತ್ತೆ ಎದ್ದು ಪ್ರತ್ಯುತ್ತರವಾಗಿ ಹೇಳಿದನು: 'ಸನ್ನಿಧಿಯಲ್ಲಿ ಅಪ್ಪಣೆಯಾದಂತೆ, ಹಿಂದೆ ವಚನಕೊಟ್ಟಿದ್ದುದಕ್ಕಾಗಿಯೇ ನಾವೂ ರಕ್ತಪಾತವಿಲ್ಲದಂತೆಯೇ ದುರ್ಗಗಳನ್ನು ಸಾಧಿಸಿದುದು. ಈ ವಿಚಾರ

ದಲ್ಲಿ, ಖಡ್ಗವಿದ್ಯೆಯನ್ನು ಕಲಿಸಿಕೊಟ್ಟ ಜಟ್ಟಿಯವರಲ್ಲಿರುವಂತೆ ಸನ್ನಿಧಿಯಲ್ಲೂ ನಮ್ಮರಸರಿಗೆ ಗುರುಭಕ್ತಿಯುಂಟು. ಆ ಗುರುಭಕ್ತಿಯ ಕಾಣಿಕೆಯಾಗಿ ಬೇಕಾದರೆ ಶ್ರೀಶೈಲವನ್ನು ಸನ್ನಿಧಿಗೆ ಸಮರ್ಪಿಸಲು ನಾವು ಸಿದ್ಧರಾಗಿದ್ದೇವೆಯೇ ಹೊರತು, ನಮ್ಮ ಸ್ವಾತಂತ್ರ್ಯದ ಬೆಲೆಯೆಂದಾಗಲಿ ಬನವಾಸಿ ನಾಡನ್ನು ನಮ್ಮದು ಮಾಡಿಕೊಳ್ಳುವುದಕ್ಕೆ ಕೊಡುವ ಶುಲ್ಕವೆಂದಾಗಲಿ ಶ್ರೀಶೈಲವನ್ನು ಕೊಡಲು ನಾವು ಗರಿಕೆಯ ತುದಿಯಷ್ಟೂ ಸಿದ್ಧರಾಗಿಲ್ಲ. ಬನವಾಸಿಯು ನಮಗೆ ಅನೂಚಾನವಾಗಿ ಬಂದಿರುವ ನಾಡು. ಅಲ್ಲಿನ ಆಧಿಪತ್ಯವು ವಂಶಪಾರಂಪರ್ಯವಾಗಿ ನಮ್ಮದು. ಈಗ ಸನ್ನಿಧಾನವು ಪ್ರದರ್ಶಿಸುತ್ತಿರುವ ಔದಾರ್ಯವನ್ನು ನಾಗಶ್ರೀಯು ಮೃತವಾದಾಗ ತೋರಿದ್ದರೆ ಈ ಪ್ರಸ್ತಾಪವಿಲ್ಲದೆಯೇ ಈ ಕೃತ್ರಿಮಸಂಧಾನಗಳ ಆವಶ್ಯಕತೆ ಇಲ್ಲದೆಯೇ ನಾವು ಉಭಯತ್ರರೂ ಸಮಾನಸ್ಕಂಧರಾಗಿ ವ್ಯವಹರಿಸುತ್ತಿದ್ದೆವು ಎಂಬುದನ್ನು ವಿನಯದಿಂದ ಸನ್ನಿಧಿಯಲ್ಲಿ ಬಿನ್ನವಿಸುತ್ತೇವೆ. ಕದಂಬ ನರಪತಿಗಳು ಪಲ್ಲವ ಭೂಪತಿಗಳೊಡನೆ ಹಿಂದೆ ಎಷ್ಟು ಸೌಹಾರ್ದದಿಂದ ನಡೆದಿದ್ದಾರೆ ಎಂಬುದನ್ನೂ ಹಿಂದೆ ಬಾಣರಸರು ಪ್ರತಿಭಟಿಸಿದಾಗ ಅವರು ಸಹಾಯಕ್ಕೋದಗಿ ಶ್ರೀಶೈಲವನ್ನು ಉಳಿಸಿಕೊಳ್ಳಲು ಬೆಂಬಲವಾಗಿದ್ದರು ಯೆಂಬುದನ್ನೂ ಗಮನಿಸಬೇಕಾಗಿ ಪ್ರಾರ್ಥನೆ. ಅಲ್ಲದೆ ಇನ್ನೂ ಒಂದು ರಾಜರಹಸ್ಯವುಂಟು. ಈ ಮೂರುವರೆ ಸುತ್ತು ಬಂದು ಮಾತನಾಡುವ ಪದ್ಧತಿಯನ್ನು ಬಿಟ್ಟು ನೇರವಾಗಿ ಮಾತನಾಡಿದರೆ ಸನ್ನಿಧಾನವು ನಮ್ಮನ್ನು ರೂಕ್ಷಜನವೆಂದುಕೊಂಡು ನಮ್ಮಲ್ಲಿ ಅಪ್ರಸನ್ನವಾಗಬಾರದು. ಈ ಎರಡು ರಾಜವಂಶಗಳ ರಕ್ತಸಂಬಂಧವನ್ನು ಕಲ್ಪಿಸಿ ಸ್ನೇಹಬಂಧವನ್ನು ಬಲಿಯಿಸಬೇಕೆಂದು ರಾಜಭಕ್ತರಾದ ನಮ್ಮೆಲ್ಲರ ಆಶೆ. ಮಹಾಸನ್ನಿಧಾನದಲ್ಲಿಯೂ ಈ ಆಶೆಗೆ ವಿರೋಧವಿಲ್ಲವೆಂದು ನಮಗೂ ಹೇಗೆಹೇಗೋ ತಿಳಿದು ಸಣ್ಣಾಶೆಯು ಪರ್ವತದಷ್ಟು ಸಂಬುಗೆಯಾಗಿದೆ. ಹಾಗೆ ಸನ್ನಿಧಾನವೂ ಈ ಸಲಹೆಗೆ ಅನುಕೂಲವಾಗಿದ್ದರೆ, ದುರ್ಗವನ್ನು ಕೊಟ್ಟು ತೆಗೆದುಕೊಳ್ಳುವ ವಿಚಾರವನ್ನು ಅತ್ತನೂಕಿ ಈ ಕೊಟ್ಟುತರುವ ವಿಚಾರದಲ್ಲಿ ಮಾತನಾಡೋಣವಾಗಬೇಕು ಎಂದು ನಮ್ಮ ಅರಿಕೆ'.

ನರಿಂದಿವರ್ಮನು ಉತ್ತರವೀಯಲು ಎದ್ದನು. ರಾಜಕುಮಾರನು ಅವನನ್ನು ತಡೆದು ತಾನೇ ಸುಪ್ರಸನ್ನವಾದ ಮುಖದಲ್ಲಿ ಮಂದಹಾಸದ ಮೃದು ಪ್ರಭೆಯನ್ನು ಬೀರುತ್ತಾ ಹೇಳಿದನು: 'ರಾಜಪುತ್ರ! ಈ ಉತ್ತರ ಪ್ರತ್ಯುತ್ತರಗಳೂ ಸುತ್ತುಮಾತುಗಳೂ ಏಕೆ? ಮನಸ್ಸಿನಲ್ಲಿರುವುದನ್ನು ನಾನೇ ಹೇಳಿ ಮುಗಿಸುವೆನು. ಸುಲಭೋಪಾಯದಿಂದ ಏನೂ ನಷ್ಟವಿಲ್ಲದಂತೆ ತಮಗೆ ಎರಡು ನಾಡುಗಳನ್ನು ಸಂಪಾದಿಸಿಕೊಟ್ಟಿರುವ ದೈವದ ಅನುಗ್ರಹವು, ತಮ್ಮ ಪೂರ್ವ ಪುಣ್ಯವು, ರಾಜಕುಮಾರಿಯ ಹೃದಯವನ್ನೂ ತಮಗೆ ಒಲಿಸಿ ಕೊಟ್ಟಿದೆ. ಇದನ್ನು ತಾವೂ ಬಲ್ಲಿರಿ ನಾವೂ ಬಲ್ಲೆವು. ಆ ವಿಚಾರವಾಗಿ ವಿಧಿಯು ವಿಧಿಸಿರುವುದನ್ನು ನಾವು ತಪ್ಪಿಸುವುದೆಂತು? ಅದರಿಂದ ಅದಂತೂ ಆಗಿಯೇ ತೀರುವುದು. ಎರಡನೆಯ ಸ್ವಾತಂತ್ರ್ಯದ ವಿಚಾರ. ಹಿಂದೆ ತಮ್ಮ ದರ್ಶನವಾದಾಗಲೇ ನಾನು ಸಾವಿರ ಕುದುರೆಗಳ ಒಡೆತನವನ್ನು ಕೊಡಿಸುವುದಾಗಿ ಹೇಳಿದ್ದೆ. ಸಿಂಹಾಸನವನ್ನೇರುವ ಅದೃಷ್ಟವುಳ್ಳ ತಾವು ಅಂದೇ ಆ ಅಧಿಕಾರವನ್ನು ಬೇಡವೆಂದಿರಿ. ಇನ್ನು ಈಗ ಮಾಂಡಲಿಕತನವನ್ನು ಒಪ್ಪಿ ಕೊಳ್ಳುವಿರಾ? ತಮ್ಮಿಚ್ಛೆಯಂತೆಯೇ ಆಗಲಿ, ಆದರೆ ಅದಕ್ಕೆ ಮುಂಚಿತವಾಗಿ ಇಷ್ಟು ಮಾತಾಗಬೇಕು. ನಮ್ಮವರಾಗಿ ತಮಗೆ ಸೆರೆಯಾಗಿರುವವರನ್ನೆಲ್ಲ ಬಿಡಬೇಕು ಹಿಂದೆನಡೆದ ಯಾವುದೋ ಏನೋ ಕಾರ್ಯಕ್ಕಾಗಿ ನಮ್ಮಿಬ್ಬರಲ್ಲಿ ಯಾರೂ ವೈಮನಸ್ಯವನ್ನು ಇಟ್ಟುಕೊಳ್ಳಬಾರದು. ಶ್ರೀಶೈಲವೂ ನಾಗರ ಖಂಡವೂ ನಮ್ಮದು. ಬನವಾಸಿಯೂ ಅದಕ್ಕೆ ಸೇರಿದ ಪಡುವಲ ತೆಂಕಲ ನಾಡುಗಳೂ ನಿಮ್ಮವು'

ಮಯೂರನು ಎದ್ದು ಬಂದು ಯುವರಾಜನ ಎರಡು ಕೈಗಳನ್ನೂ ಹಿಡಿದುಕೊಂಡು ನಮ್ರಭಾವದಿಂದ ಅರಿಕೆಮಾಡಿದನು: 'ಹಿಂದೆ ತಾವು ಅಪ್ಪಣೆಕೊಡಿಸಿದಂತೆ ಆಯುಧೋಪಜೀವಿಗಳಾದ ನಮ್ಮ ಪರಿಚಯವು ಆಯುಧದಿಂದಲೇ ಮೊದಲಾಯಿತು. ಮತ್ತೆ ತಮ್ಮ ಔದಾರ್ಯದಿಂದ ಬೆಳೆದು ಗಿಡವಾಯಿತು. ಅದಿಂದು ಮತ್ತೆ ತಮ್ಮ ವಿಶ್ವಾಸ ಸ್ನೇಹಗಳಿಂದಲೇ ಅಗ್ನಿಸಾಕ್ಷಿಕವಾಗಿ ಮೈತ್ರಿಯಾಗಿ ಪರಿಣಮಿಸಲಿ'

ಯುವರಾಜನೂ ಸಂಪೂರ್ಣ ಸಮ್ಮತಿಯನ್ನು ಸೂಚಿಸಿದನು. ಉಭಯತ್ರರೂ ತಮ್ಮ ವಿರೋಧಭಾವಗಳನ್ನೆಲ್ಲ ಸಂಪೂರ್ಣವಾಗಿ ತ್ಯಜಿಸಿ ಅಗ್ನಿ

ಪುರುಷನ ಸನ್ನಿಧಿಯಲ್ಲಿ ಪರಸ್ಪರ ಪಾಣಿಗ್ರಹಣ ಆಲಿಂಗನಗಳಿಂದ ಕದಂಬ ಪಲ್ಲವ ರಾಜವಂಶಗಳ ಮೈತ್ರಿಯನ್ನು ಸ್ಥಾಪಿಸಿದರು.

ವೀರಶರ್ಮ, ಷಡಾನನ ಶರ್ಮ, ನರಸಿಂಹದತ್ತರಿಗೆ ಆ ಕಾಲದಲ್ಲಿ ಒಂದು ರೆಪ್ಪೆಹೊಡಿಯುವಷ್ಟು ಹೊತ್ತು ಪರವಶತೆಯಾಗಿದ್ದಿತು. ಅವರ ಆನಂದದಲ್ಲಿ ಭಾಗಿಯಾದ ಇನ್ನೂ ಒಬ್ಬ ಮುದುಕನೂ ಒಬ್ಬ ಯುವಕನೂ ಅಲ್ಲಿಯೇ ಇದ್ದರು. ಹಾಗೆಯೇ ಅದೇ ವೇಳೆಯಲ್ಲಿ ಅಲ್ಲಿಯೇ ಇದ್ದ ಇನ್ನಿಬ್ಬರಿಗೆ ಅವರರಿವಿಲ್ಲದೆಯೇ ಒಂದೊಂದು ನಿಟ್ಟುಸಿರು ತಪ್ಪಿಸಿಕೊಂಡಿತು. ಆದರೂ ಅವರಿಗೆ ಅಸಮಾಧಾನವಿರಲಿಲ್ಲ.

ರಾಜಪುತ್ರರಂತೂ ನೀಡಿದ ಕೈಯೊಡನೆ ತಮ್ಮ ಹೃದಯವನ್ನೂ ನಿಜವಾಗಿಯೂ ಪರಸ್ಪರ ದಾನಮಾಡಿ ಹಿರಿಯ ಹೊಳೆಗಳೆರಡು ಬೆರೆವಂತೆ ಬೆರೆದು ಒಂದಾದರು. ಪರಸ್ಪರ ವಸ್ತ್ರಭೂಷಣ ದಾನಗಳಾಗಿ ಎಲ್ಲರಿಗೂ ಸ್ನೇಹವೇರ್ಪಟ್ಟಿತು.

---

## ನಲವತ್ತೆರಡನೆಯ ಪ್ರಕರಣ

ಚೈತ್ರ ಬಹುಳ ಪಂಚಮಿಯ ದಿನ ಪಲ್ಲವರಾಜ ಕುಮಾರಿ ಪ್ರೇಮಾವತಿಗೂ ಕದಂಬರಾಜ ಮಯೂರವರ್ಮನಿಗೂ ಸಂಭ್ರಮವಾಗಿ ಮದುವೆಯು ನಡೆಯಿತು. ಉತ್ಸವಾದಿಗಳಲ್ಲಿ ಏನೂ ಲೋಪವಿರಲಿಲ್ಲ. ಆದರೂ ಸಮ್ರಾಜ್ಞಿಗೆ ಬೀಗರ ಪಡೆಯು ಬೇಕಾದಷ್ಟು ಬಂದಿರಲಿಲ್ಲವೆಂದು ಒಂದು ಅಸಮಾಧಾನ. ಮೈದುನನೆಂಬ ಸರಸದಿಂದ ಪಲ್ಲವರಾಜಕುಮಾರ ಸಿಂಹವರ್ಮನು ಮಯೂರನನ್ನು, 'ಭಾವಾಜಿ! ನಿಮ್ಮ ಬಂಧುವರ್ಗವೆಲ್ಲಿ?' ಎಂದನು. ಆತನೂ ಅದಕ್ಕೆ ಉತ್ತರವಾಗಿ, 'ಬಂದಿರುವರಲ್ಲ? ನೀವು ನೋಡಲಿಲ್ಲವೆ?' ಎಂದು ತನ್ನ ನಾಡಗೌಡರನ್ನೂ ಜಟ್ಟಿಯನ್ನೂ ತೋರಿಸಿದನು. ಮುಂದೆ ಇನ್ನಾರೂ ವಿಚಾರಿಸಲಿಲ್ಲ.

ಮದುವೆಯು ಒಂದು ವಾರ ನಡೆಯಿತು. ಅಳಿಯನೂ ಮಗಳೂ ಇನ್ನೂ ಒಂದು ತಿಂಗಳು ತಮ್ಮ ರಾಜಧಾನಿಯಲ್ಲಿಯೇ ಇರಬೇಕೆಂದು

ಸಮ್ರಾಜ್ಞಿಯವರ ಇಷ್ಟವಾದರೂ ವೈಶಾಖ ಶುದ್ಧದಲ್ಲಿ ನಡೆಯಬೇಕಾಗಿರುವ ಪಟ್ಟಬಂಧ ಮಹೋತ್ಸವಕ್ಕೆಂದು ಮಯೂರನು ಸಪತ್ನೀಕನಾಗಿ ತನ್ನ ರಾಜಧಾನಿಗೆ ಹೊರಟನು. ಉತ್ಸವವು ಬರುತ್ತಿರುವಾಗ ದಾರಿಯಲ್ಲಿ ಕಾಮಾಕ್ಷೀದೇವಿಯ ದೇವಸ್ಥಾನವು ಸಿಕ್ಕಿತು. ರಾಜಪುತ್ರಿಯು ಕೋರಿದ್ದಂತೆ ಮೆರವಣಿಗೆಯು ಅಲ್ಲಿ ನಿಂತಿತು ಆಕೆಯು ಆನೆಯನ್ನಿಳಿದು ಪತಿಯೊಡನೆ ದೇವದರ್ಶನಕ್ಕೆ ಹೋಗಿ ತನ್ನ ಸರ್ವಾಭರಣಗಳನ್ನೂ ದೇವಿಗೆ ಒಪ್ಪಿಸಿ, 'ತಾಯೆ! ನಿನ್ನ ಅನುಗ್ರಹದಿಂದ ಲಭಿಸಿದ ಸೌಭಾಗ್ಯ, ಇದು ಸ್ಥಿರವಾಗಿರುವಂತೆ ಅನುಗ್ರಹಿಸು' ಎಂದು ಬೇಡಿಕೊಂಡಳು.

ಈ ರಾಜಧಾನಿಯಿಂದ ಆ ರಾಜಧಾನಿಯವರೆಗೂ ಪತ್ನೀದ್ವಿತೀಯನಾದ ಮಯೂರವರ್ಮನಿಗೆ ಒಂದೇ ಸಮನಾಗಿ ಪ್ರಜೆಗಳು ರಾಜಪೂಜೆ ರಾಜೋಪಚಾರಗಳನ್ನೂ ಸಲ್ಲಿಸಿದರು. ಪಲ್ಲವ ಸಮ್ರಾಜನು ಮಗಳಿಗೂ ಅಳಿಯನಿಗೂ ಕೊಟ್ಟ ಬಳುವಳಿಗಳೂ ದಾರಿಯಲ್ಲಿ ಪ್ರಜೆಗಳು ಒಪ್ಪಿಸಿದ ಕಾಣಿಕೆಗಳೂ ಸೇರಿ ಇನ್ನೂರು ರಥಗಳಷ್ಟು ಆಯಿತು.

ಯಥಾಕ್ರಮವಾಗಿ ವೈಶಾಖ ಶುದ್ಧ ದಶಮಿಯ ದಿನ ಪಟ್ಟಬಂಧ ಮಹೋತ್ಸವವೂ ನಡೆಯಿತು. ರಾಜಪುರೋಹಿತ ರಾಜಗುರು ವೀರಶರ್ಮರೇ ಸ್ವಂತನಾಗಿ ನಿಂತು ಎಲ್ಲವನ್ನೂ ಏನೂ ಲೋಪವಿಲ್ಲದಂತೆ ಸಾಂಗವಾಗಿ ನಡೆಯಿಸಿದರು. ಬನವಾಸಿಯು ಹೊಸ ಅರಸನ ಪಟ್ಟಾಭಿಷೇಕದ ಉತ್ಸವದಲ್ಲಿ ಸಿಂಗರವಾಗಿ ಹೊಸ ಮದುವಣಿಗಿತ್ತಿಯಾದ ಪ್ರೇಮಾವತಿಯಂತೆ ತಾನೂ ಮೆರೆಯಿತು. ರಾಜಪುತ್ರಿಯು ತನಗೊಬ್ಬಳು ಸವತಿಯು ಬಂದರೂ ಮತ್ಸರಿಸಲಿಲ್ಲ. ಅವಳ ಲಾಭದಿಂದ ತಾನಿನ್ನೂ ಸಂತುಷ್ಟಳಾದಳು.

ಅಭಿಷೇಕ ಕಾರ್ಯಗಳೆಲ್ಲವೂ ನೆರವೇರಿ ಅವಭೃತವೂ ಆಯಿತು. ಎಲ್ಲರಿಗೂ ಯಥೋಚಿತವಾಗಿ ಉಡುಗೊರೆಗಳನ್ನು ಕೊಟ್ಟು ಬೀಳ್ಕೊಟ್ಟುದೂ ಆಯಿತು.

ಅಂದಿನ ರಾತ್ರಿ ರಾಣಿಯವರು ಅಂತರ್ಗೃಹದಲ್ಲಿ ಮಹಾರಾಜರವರಿಗೆ ತಾಂಬೂಲ ಸೇವೆಯನ್ನು ಸ್ವಂತವಾಗಿ ಸಲ್ಲಿಸುತ್ತಿರುವಾಗ ದೌವ್ವಾರಿಕೆಯು

ಬಂದು ರಾಜಗುರುಗಳ ಆಗಮನವನ್ನು ಅರಿಕೆಮಾಡಿದಳು. ರಾಜದಂಪತಿಗಳು ಗುರುದರ್ಶನಕ್ಕೆ ಸಿದ್ಧರಾಗುವ ವೇಳೆಗೆ ಅವರೂ ದಯಮಾಡಿಸಿದರು. ಅರಸನೂ ಅರಸಿಯೂ ಅಭಿವಾದನಮಾಡಿ ಯಥೋಚಿತ ಮರ್ಯಾದೆಯಿಂದ ಸತ್ಕರಿಸಿ ಗುರುಗಳನ್ನು ಆಸನದಲ್ಲಿ ಕುಳ್ಳಿರಿಸಿದರು. ಅರಸಿಯು ಬೀಸಣಿಗೆ ಇಕ್ಕಿದಳು. ಅರಸನು ನಮ್ರನಾಗಿ ಮೈಯೆಲ್ಲ ಕಿವಿ ಕಣ್ಣಾಗಿ ನಿಂತನು.

ವೀರಶರ್ಮನು ಇಂದು ಸಾಮಾನ್ಯ ಬ್ರಾಹ್ಮಣನ ವೇಷವನ್ನು ಧರಿಸಿದ್ದನು. ವಿವಾಹದ ಕಾಲದಲ್ಲಿಯೂ ಪಟ್ಟಾಭಿಷೇಕದ ಕಾಲದಲ್ಲಿಯೂ ಧರಿಸಿದ್ದ ರತ್ನಭೂಷಣಗಳೂ ಜರಿಯಂಚಿನ ವಸ್ತ್ರಗಳೂ ಇರಲಿಲ್ಲ. ಮಯೂರನು ಆ ವೇಷದಿಂದಲೇ ಆತಂಕಗೊಂಡು ವಯಸ್ವಿಯಾದರೂ ಪಿತೃಭಕ್ತನಾದ ಪುತ್ರನು ಮಾತನಾಡುವಂತೆ ನಯಭಯಗಳಿಂದ ನುಡಿಯಿಸಿದನು: 'ಅಪ್ಪಣೆಯಾಗಿದ್ದರೆ ನಾನೇ ಬಂದು ದರ್ಶನ ತೆಗೆದುಕೊಳ್ಳುತ್ತಿದ್ದೆ'

'ನಾನು ಮಹಾರಾಜರವರಿಂದ ಅಪ್ಪಣೆಯನ್ನು ತೆಗೆದುಕೊಳ್ಳುವುದಕ್ಕೆ ಬಂದಿದ್ದೇನೆ. 'ನನ್ನ ಕಾರ್ಯವಾಯಿತು ದೈವಾನುಗ್ರಹದಿಂದ ಮಹಾರಾಣಿಗೆ ಕೊಟ್ಟ ಮಾತು ನೆರವೇರಿತು. ಸುಗುಣನಿಧಿಯಾಗಿ ದಿವ್ಯಕನ್ನಿಕೆಯಂತಿರುವ ರಾಣಿಯವರು ದೊರೆತು ಲಭಿಸಿದ ರಾಜ್ಯವು ಸ್ಥಿರವಾಯಿತು. ಇನ್ನು ನಾನು ಚತುರ್ಥಾಶ್ರಮಿಯಾಗಿ ಜೀವನ ಸಾಫಲ್ಯಮಾಡಿಕೊಳ್ಳಲು ಅನುಜ್ಞೆಯಾಗಬೇಕು' ಎಂದು ಪ್ರಾರ್ಥಿಸಲು ಬಂದಿದ್ದೇನೆ'

ಮಹಾರಾಣಿಯು ಆ ಮಾತನ್ನು ಕೇಳಿ ಬೆಚ್ಚಿದಳು. ಕೈಯಲ್ಲಿದ್ದ ಬೀಸಣಿಗೆಯು ಬಿದ್ದುಹೋಯಿತು. ಆ ವೇಳೆಗಾಗಲೇ ಮಯೂರನು ವೀರಶರ್ಮನ ಪಾದಗಳನ್ನು ಹಿಡಿದುಕೊಂಡು ಕಣ್ಣೀರಿನಿಂದ ತೊಳೆಯುತ್ತಿದ್ದನು: 'ದೇವಾ! ಆ ದಿನ ತಮ್ಮ ನಾಮಧೇಯವೇನೆಂದು ಮಂತ್ರೀಶ್ವರರನ್ನು ಕೇಳಿದಾಗ ನಾಮಧೇಯ ಶ್ರವಣಮಾಡಿಸಿ, 'ನಿಮ್ಮ ವಂಶದ ಭಾಗ್ಯದ ಅಡಿಗಲ್ಲು' ಎಂದರು. ಅದು ನಿಜವೆಂಬುದು ತಮ್ಮ ಕೃತಿಗಳಿಂದಲೇ ಪ್ರತ್ಯಕ್ಷವಾಗಿದೆ. ಮನೆಗೆ ಕಲಶವನ್ನಿಕ್ಕಿ ಅಡಿಗಲ್ಲನ್ನು ಸಡಲಿಸುವುದೇ? ದೇವಾ! ಅದಾಗದು. ತಾವು ಕೊನೆಯವರೆಗೂ ಇಲ್ಲಿಯೇ ಇದ್ದು ಅಂದಿನವರೆಗೂ

ತಮ್ಮ ಪಾದಗಳ ಸೇವೆಯು ನನಗೆ ಲಭಿಸುವಂತೆ ಅನುಗ್ರಹಿಸಿ ನನ್ನನ್ನು ಕೃತಾರ್ಥನನ್ನು ಮಾಡಬೇಕು' ಎಂದು ಗದ್ಗದಕಂಠದಿಂದ ಹೇಳಿಕೊಂಡನು.

ಆ ಮಾತು ಕೇಳಿ ಆತನ ಕಣ್ಣಿನಲ್ಲಿಯೂ ನೀರು ಬಂದಿತು. ಆ ನೀರನ್ನೂ ಮನಸ್ಸಿನ ಕ್ಷೋಭವನ್ನು ಒರೆಸಿ ಧೀರತೆಯಿಂದ ಎಳೆನಗು ನಗುತ್ತಾ ಹೇಳಿದನು: 'ಮಹಾರಾಜರು ಅಭಿಮಾನದಿಂದ ಬಹುದೂರ ಹೋಗಿ ನನ್ನನ್ನು ನಶ್ವರವಾದ ಭೂಮಿಗೇ ಬಿಗಿಯಬೇಕೆಂದು ಯತ್ನಿಸಿರುವಂತಿದೆ. ಅದರ ವಿಚಾರವಾಗಿ ಆಗಲೇ ಅರಿಕೆ ಮಾಡಿರುವೆನು. ಅದಿರಲಿ. ಈಗ ಸದ್ಯದಲ್ಲಿ ನಾನು ಹೇಳಬೇಕಾಗಿರುವುದು ಇಷ್ಟು! ದೈವಾನುಗ್ರಹದಿಂದ ರಾಜ್ಯವೇನೋ ಕೈಸೇರಿತು. ಇದುವರೆಗೂ ತಾವು ಪಟ್ಟ ಶ್ರಮವೆಲ್ಲವೂ ಏಣಿಯನ್ನು ಹತ್ತಿದಷ್ಟು ಮಾತ್ರವೇ ಎಂಬುದನ್ನು ತಾವು ಮರೆಯಬಾರದು. ಒಳ್ಳೆಯದಾಗಲಿ ಕೆಟ್ಟುದಾಗಲೀ ಮಾಡುವುದಕ್ಕೆ ಅವಕಾಶವಿರತಕ್ಕುದು ಇನ್ನು ಮುಂದಕ್ಕೆ! ಅದರಿಂದ, ಮಾಡಬೇಕಾದ ಕೆಲಸವಾಯಿತೆಂದು ಕೈ ಕಟ್ಟಿಕೊಂಡು ಕುಳಿತುಕೊಳ್ಳದೆ, ಮಾಡಬೇಕಾದ ಕೆಲಸಕ್ಕೆ ಯಾವಾಗಲೂ ಸಿದ್ಧರಾಗಿರಬೇಕು. ಮೈಯೆಲ್ಲ ಕಣ್ಣಾಗಿ, ಪ್ರಾಪಂಚಿಕ ವ್ಯವಹಾರಗಳಲ್ಲಿ ನಷ್ಟವಾಗದೆ ಲಾಭವೇ ಆಗುವಂತೆ ನೋಡಿಕೊಳ್ಳುವ ಹಾಗೆಯೇ ಆಧ್ಯಾತ್ಮಿಕ ವಿಚಾರದಲ್ಲೂ ಗಮನವಿಟ್ಟೇ ನಡೆಯಬೇಕು. ಕಣ್ಣಿಗೆ ಕಾಣಿಸದೆ ಇದ್ದು ಕೊಂಡು ಜಗತ್ತನ್ನೆಲ್ಲ ಆಳುವ ದೈವವು ಪುರುಷಪ್ರಯತ್ನದಿಂದ ಪ್ರಕಟವಾಗಿ ಫಲಕಾರಿಯಾಗುವುದು ಎಂಬುದನ್ನು ಮರೆಯದೆ, ದೈವ ಪ್ರಯತ್ನಗಳೆಂಬ ಎರಡನ್ನೂ ಲಕ್ಷ್ಯದಲ್ಲಿಟ್ಟುಕೊಂಡು ನಡೆಯಬೇಕು. ಇದಿಷ್ಟನ್ನು ಸನ್ನಿಧಾನದಲ್ಲಿ ಅರಿಕೆ ಮಾಡಬೇಕೆಂದು ಬಂದೆ. ಅರಿಕೆ ಮಾಡಿಯಾಯಿತು. ನಾನಿನ್ನು ಹೊರಡುವೆನು.

ಕೊನೆಯ ಮಾತಾಗಿ ನನ್ನ ಕೋರಿಕೆಯಿಷ್ಟೆ! ಮಹಾರಾಜರವರು ಆರ್ಯ ಸಂತಾನವು. ಆರ್ಯಸಂಸ್ಕೃತಿಯಲ್ಲಿ ಯಜ್ಞವೆಂಬುದು ಬಹು ಪ್ರಧಾನವಾದುದು. ಪ್ರಪಂಚದಲ್ಲಿ ಮೂರ್ತವಾಗಿ ಕಂಡು ಬರುತ್ತಿರುವ ಈ ಚೇತನಾಚೇತನ ವಸ್ತುಗಳನ್ನೆಲ್ಲ ಒಳಹೊರಗೆ ತುಂಬಿ ಆಡಿಸುತ್ತಿರುವ ನಾನಾಶಕ್ತಿಗಳುಂಟು. ಈ ಶಕ್ತಿಗಳ ಸಮಾಕರ್ಷಣ ಅಭಿಮುಖೀಕರಣಗಳೇ

ಈ ಬೇರೆ ಬೇರೆ ಯಜ್ಞಗಳು. ಯೋಗಕ್ಷೇಮಾರ್ಥವಾಗಿ ಈ ಶಕ್ತಿ ಸಂಚಯ ರೂಪವಾದ ಈ ಯಜ್ಞಕರ್ಮವನ್ನು ಪ್ರತಿಯೊಬ್ಬನೂ ತನ್ನ ಅಧಿಕಾರ ಸಾಮರ್ಥ್ಯಗಳಿಗೆ ಅನುಗುಣವಾಗಿ ಮಾಡಬೇಲೇಕು. ಭೂನಾಥರಾದವರು ವಿಶೇಷವಾಗಿ ಅಶ್ವಮೇಧವೆಂಬ ಯಜ್ಞವನ್ನು ಮಾಡಿ ತಮ್ಮ ಆಳ್ವಿಕೆಯು ಸರ್ವತೋ ಭದ್ರವಾಗುವ ಹಾಗೆ ಮಾಡಿಕೊಳ್ಳುವರು. ಅದರಿಂದ ದೇಶದ ಅಭ್ಯುದಯಕ್ಕಾಗಿ ತಾವೂ ಈ ಯಾಗವನ್ನು ಆಚರಿಸಬೇಕು' ಆ ಯಾಗಕ್ಕೆ ಆರ್ತ್ವಿಜ್ಯವನ್ನು ವಹಿಸಲು ಇಲ್ಲಿ ದಕ್ಷರಾದವರು ಯಾರೂ ಇಲ್ಲ. ಅಲ್ಲದೆ ವಿಧರ್ಮಿ ಸಂಸರ್ಗದಿಂದ ಶಿಥಿಲವಾದ ಸಮಯಾಚಾರಗಳನ್ನುಳ್ಳ ಇಲ್ಲಿನವರು ಯಾಗಕ್ಕೆ ಅಷ್ಟು ಪ್ರಶಸ್ತರೂ ಅಲ್ಲ. ಗಂಗಾಯಮುನಾ ಮಧ್ಯವರ್ತಿಯಾದ ಪಾಂಚಾಲ ದೇಶದಲ್ಲಿ ಅಹಿಚ್ಛತ್ರವೆಂಬ ಪಟ್ಟಣವುಂಟು. ಅಲ್ಲಿ ಅಗರ್ವಿಗಳೂ ವಿದ್ವಾಂಸರೂ ಕರ್ಮನಿಷ್ಠರೂ ಶ್ರೋತ್ರಿಯರೂ ಆದವರುಂಟು. ಅವರನ್ನು ಕರೆಯಿಸಿ ಅವರಿಗೆ ಆರ್ತ್ವಿಜ್ಯವನ್ನು ವಹಿಸಿ ಯಜ್ಞಮಾಡುವುದು ಸೂಕ್ತವು'

'ಅಪ್ಪಣೆ'

'ಎರಡನೆಯದಾಗಿ ನಾನು ಇಲ್ಲಿರುವ ವಿಚಾರ. ಬೆಳೆದ ಮಗುವು ಗರ್ಭವನ್ನು ಬಿಟ್ಟುಬರುವಂತೆ ಪ್ರಬುದ್ಧವಾದ ಚೇತನವು ಇಲ್ಲಿಂದ ಆಚೆಗೆ ಹೋಗಲೇಬೇಕಾಗಿರುವುದು. ಅದರಿಂದ ತಿಳಿದವರು ಪುರೋಭಿವೃದ್ಧಿಯ ಮಾರ್ಗದಲ್ಲಿ ಅಡ್ಡವಾಗಬಾರದು. ಅಲ್ಲದೆ ಆ ಮಾರ್ಗಕ್ಕೆ ಅಡ್ಡಿಮಾಡುವುದೂ ಸಾಧ್ಯವಿಲ್ಲ. ಬೆಂಕಿಯನ್ನು ಬೆರಣಿಯಲ್ಲಿ ಮುಚ್ಚಿಡಲಾದೀತೆ? ಅದರಿಂದ, ಇಲ್ಲಿನ ಆಗು ಹೋಗುಗಳಿಗಾಗಿ ಯತ್ನಪಟ್ಟು ಅವನ್ನು ಮುಗಿಸಿದ ಮೇಲೆ ನಾನು ಇನ್ನು ಇಲ್ಲಿದ್ದು ಮಾಡಬೇಕಾದುದೇನು? ಆದರೂ ತಾವು ನಾನಿರಬೇಕೆಂದು ಕೋರಿದಿರಿ. ಅದಕ್ಕಾಗಿ ತಮ್ಮ ಅಶ್ವಮೇಧವೊಂದು ಮುಗಿಯುವವರೆಗೂ ಇದ್ದು ಹೋಗುವೆನು.

ಮಹಾರಾಜನು ಮರುಮಾತಾಡದೆ ಒಪ್ಪಿಕೊಂಡನು. ಯತಿಯ ಮಾತುಗಳಲ್ಲಿ ವೈರಾಗ್ಯಸಂಪತ್ತಿಯ ಫಲವಾದ ಶಾಂತಿಯೂ ಕಾಂತಿಯೂ ಸಿದ್ಧಾಂತತೆಯೂ ಇದ್ದು ಪ್ರತಿಪಕ್ಷದ ಮನಸ್ಸನ್ನು ಒಪ್ಪಿಸಿ ಬಾಯನ್ನು ಮುಚ್ಚುತ್ತಿದ್ದುವು. ಮಹಾರಾಜನ ಮನಸ್ಸಿನಲ್ಲಿ, 'ಆಗಲಿ, ಅಶ್ವಮೇಧದವರೆಗೆ ಅವ

ಕಾಶ ಸಿಕ್ಕಿದೆ. ಅಲ್ಲಿಂದ ಮುಂದೆ ನೋಡಿಕೊಳ್ಳೋಣ' ಎಂದು ಒಂದು ಸಣ್ಣ ಆಶೆಯು ನಂಬುಗೆಯನ್ನು ಹುಟ್ಟಿಸಿತು.

ರಾಜ ದಂಪತಿಗಳ ನಮಸ್ಕಾರಗಳನ್ನು ಕೈಗೊಂಡು ಆಶೀರ್ವಾದದ ಕಾಣಿಕೆಯನ್ನೊಪ್ಪಿಸಿ ವೀರಶರ್ಮರು ಬೀಳ್ಕೊಂಡರು. ದಂಪತಿಗಳು ಅರಮನೆಯ ಬಾಗಿಲವರೆಗೂ ಬಂದು ಅವರು ರಥದಲ್ಲಿ ಕುಳಿತುಕೊಳ್ಳುವವರೆಗೂ ಕಾದಿದ್ದು ಮತ್ತೆ ಅವರ ಅಪ್ಪಣೆಯನ್ನು ಪಡೆದು ಒಳಕ್ಕೆ ಹೋದರು.

——o——

## ನಲವತ್ತಮೂರನೆಯ ಪ್ರಕರಣ

ರಾತ್ರಿಯ ಮೊದಲ ಝಾಮವು ಕೊನೆಯಾಗುತ್ತಿದೆ. ಮಹಾರಾಣೀ ಪ್ರೇಮಾವತಿಯು ಬಿಸಿಲು ಮಹಡಿಯಲ್ಲಿ ವೀಣೆಯನ್ನು ಬಾಜಿಸುತ್ತಾ ಕುಳಿತಿದ್ದಾಳೆ. ಪರಿಚಾರಿಣಿಯೊಬ್ಬಳು ಕಿಂಚಿದ್ದೂರದಲ್ಲಿ ನಿಂತು ನವಿಲುಗರಿಯ ಬೀಸಣಿಗೆಯನ್ನು ಬೀಸುತ್ತಿದ್ದಾಳೆ. ವಾದ್ಯವೂ ನಾಗರಿಕರ ಸಂತೋಷದಲ್ಲಿ ತಾನೂ ಭಾಗಿಯಾಗಿರುವಂತೆ, ಬಾಜಿಸುತ್ತಿರುವವಳ ಮನಃಪ್ರಸಾದವನ್ನು ತಾನೂ ಹಂಚಿಕೊಂಡಿರುವಂತೆ ಕುಣಿಯುತ್ತಿದೆ. ಒಲಿದು ನುಡಿಯುತ್ತಿರುವ ಶಾರದೆಯ ವೈಖರಿಗೆ ಮನಸೋತು ರಾಣಿಯು ಸಂಪೂರ್ಣವಾಗಿ ಗಾನಮಗ್ನಳಾಗಿದ್ದಾಳೆ. ಆಕೆಯ ರತ್ನದ ಬಳೆಗಳೂ ಕೂಡ ಹೆಚ್ಚು ಸದ್ದು ಮಾಡದೆ ಕೇಳುತ್ತಿದ್ದು ತಣಕ ಪಣಕೆನ್ನುವ ತಮ್ಮ ಕಾಂತಿಗಳಿಂದ ತಮ್ಮ ಆನಂದವನ್ನು ಬೀರುತ್ತಿವೆ. ಪರಿಚಾರಿಣಿಯೂ ಒಮ್ಮೊಮ್ಮೆ ಮುಗ್ಧಳಾಗಿ ಬೀಸುವುದಕ್ಕೆಂದು ಹಿಡಿದಿರುವ ಬೀಸಣಿಗೆಯನ್ನು ಹಾಗೆಯೇ ಹಿಡಿದುಕೊಂಡು ಕೇಳುತ್ತ ನಿಲ್ಲುತ್ತಾಳೆ.

ರಾಣಿಯು ಬೇರೆ ಬೇರೆ ರಾಗಗಳನ್ನು ಬಾಜಿಸುತ್ತಿದ್ದಾಳೆ. ರಾಗರಾಗಿಣಿಯರೇ ಪ್ರತ್ಯಕ್ಷವಾಗಿ ಬಂದರೂ ಹೌದೆನ್ನುವಷ್ಟು ಸೊಗಸಾಗಿದೆ. ಯಾವಯಾವುದೋ ರಾಗಗಳಲ್ಲಿ ಸಂಚಾರ ಮಾಡಿಕೊಂಡು ಮೋಹನಕ್ಕೆ ಬಂದಿದ್ದಾಳೆ. ಪ್ರತಿಯೊಂದು ಸ್ವರವೂ ಜೀವಸ್ವರವೇ ಆಗಿದ್ದರೆ ಆ ರಾಗವೆಷ್ಟು ಸೊಗಸಾಗಿರಬಹುದೋ ಅಷ್ಟು ಸೊಗಸಾಗಿದೆ. ಜಗತ್ತನ್ನೆಲ್ಲ

ಆವರಿಸಿ ಸೌಂದರ್ಯದ ಮುದ್ರೆಯೊತ್ತಿ ಈ ಜಡಜಗತ್ತೂ ಚೇತನದ ಚಿತ್ಕಳೆಯಿಂದಲೇ ಬಂದುದೆಂಬುದನ್ನು ತೋರಿಸುತ್ತಿರುವ ಚಂದ್ರಿಕೆಗಿಂತ ಸುಂದರವಾಗಿ ಆ ರಾಗಾಮೃತದ ಝರಿಯು ಹೊರಡುತ್ತಿದೆ. ಅದರ ಜೊತೆಗೆ ರಾಣಿಯು ತನ್ನ ಕಂಠವನ್ನೂ ಸೇರಿಸಿ ಪದ್ಯವನ್ನು ಹಾಡುತ್ತಿದ್ದಾಳೆ:
'ಇಷ್ಟೇ ವಸ್ತೂನ್ಯುಪಚಿತರಸಾಃ ಪ್ರೇಮರಾಶೀಭವನ್ತಿ.'

ಆ ವೇಳೆಗೆ ಸರಿಯಾಗಿ ಮಹಾರಾಜನು ಅಲ್ಲಿಗೆ ಬಂದಿದ್ದಾನೆ. ಮನೋಮೋಹಕವಾದ ಚಂದ್ರಿಕೆ. ಆನಂದಸುಧೆಯನ್ನು ಬುದ್ಧಿಗೆರೆದು ತಟ್ಟಿ ನಿದ್ದೆಗೈಸುವಂತಹ ವೀಣಾವಾದನ. ಪ್ರಕಟವಾಗಿ ರಾಗಶಯ್ಯೆಯಲ್ಲಿ ಪದ ಪದವಾಗಿ ಹೊರಡುತ್ತಿದ್ದರೂ ಅಂತರಾಳದಲ್ಲಿ ಮಾಯೆಯ ತೆರೆಯ ಹಿಂದೆ ಅಲೆಯಿಲ್ಲದೆ ನಲಿಯುತ್ತಿರುವ ಶಬ್ದಬ್ರಹ್ಮದ ಸ್ವರೂಪವನ್ನು ಮನಗಾಣಿಸುವ, ವೀಣೆಗಿಂತಲೂ ಮಂಜುಳವಾದ ಕಂಠದಿಂದ ಹೊರಡುತ್ತಿರುವ ರಾಗ ರಚನೆಯ ಸಂಗೀತ. ಒಂದಕ್ಕೊಂದು ಮೇಳವಾಗಿ ಅಲ್ಲೊಂದು ಮಾಯಾ ಪ್ರಪಂಚವನ್ನು ಸೃಷ್ಟಿಮಾಡಿ ಆ ಜಗತ್ತಿಗೆ ಆ ವೀಣಾಪಾಣಿ ದೇವಿಯನ್ನು ಅಧಿದೇವತೆಯನ್ನಾಗಿ ಅಭಿಷೇಕಮಾಡಿದೆ. ಆ ಆವರಣಕ್ಕೆ ಬಂದವರೆಲ್ಲರಿಗೂ ಆಕೆಗೆ ಕೈಯೆತ್ತಿ ಮುಗಿಯಬೇಕು ಎನ್ನಿಸುವಂತೆ ಗಾನವಾದನಗಳೆರಡೂ ಮೆರೆಯುತ್ತಿವೆ. ಮಹಾರಾಜನಿಗೂ ಹಾಗೆಯೇ ಎನ್ನಿಸಿತು. 'ನನ್ನ ಭಾಗ್ಯವೆಷ್ಟು ದೊಡ್ಡದು. ಈ ಸ್ವರ್ಗದ ದೇವಿಯು ನನ್ನವಳು!' ಎಂದು ಬೀಗುತ್ತ ಮುಂದುವರಿದನು.

ಮೈಮರೆತಿದ್ದ ಪರಿಚಾರಿಣಿಯು ಮಹಾರಾಜನ ಆಗಮನದಿಂದ ಚಕಿತಳಾಗಿ ಪ್ರಣಾಮಮಾಡಲು ಅವಸರಿಸಿದಳು. ಮಯೂರನು ಅವಳನ್ನು ಸದ್ದುಮಾಡದಂತೆ ಸನ್ನೆಯಿಂದಲೇ ಎಚ್ಚರಿಸಿ, ಬರಿಗಾಲಿನಲ್ಲಿ ಸದ್ದಿಲ್ಲದಂತೆ ನಡೆದುಹೋಗಿ, ಮಹಾರಾಣಿಯು ಒರಗಿದ್ದ ದಿಂಬನ್ನು ಸಣ್ಣಗೆ ಒರಗಿಕೊಂಡು ಆಕೆಯ ಹಿಂದುಗಡೆ ಕುಳಿತನು. ಇನ್ನಷ್ಟು ಹೊತ್ತಿನೊಳಗೆ ರಾಗ ರಸವು ರಾಜನ ತಲೆಗೇರಿ ಪರಿಚಾರಿಣಿಗೆ ಹೊರಡಲು ಅಪ್ಪಣೆಯಾಯಿತು. ತಾನು ರಾಜನೆಂಬುದನ್ನೂ ಮರೆತು ಮಯೂರನು ದಿವ್ಯಧಾಮದ ಆ ಗಾನ ದೇವಿಗೆ ವ್ಯಜನೋಪಚಾರವನ್ನು ಸಲ್ಲಿಸುವೆನೆಂದು ಪ್ರಾರಂಭಿಸಿದನು.

ಅದೂ ಅಷ್ಟುಕಾಲ ನಡೆದು ನಿಂತು ಹೋಯಿತು. ಪಾಪ! ಗಾನಾನಂದಮಗ್ನನಾಗಿ ವೈಮರೆತರೆ ಆತನ ತಪ್ಪೇನು? ಹಿಡಿದಿದ್ದ ಬೀಸಣಿಗೆಯು ಹಾಗೆಯೇ ಇದ್ದು ಆತನು ಮತ್ತುಹಿಡಿದವನಂತೆ ಕಣ್ಣುಗಳನ್ನು ತೇಲಿಸುತ್ತಾ ತಲೆಯನ್ನು ಒಲೆಯುತ್ತಾ ಕುಳಿತಿದ್ದನು.

ಹಾಗೆ ಇಬ್ಬರೂ ಎಷ್ಟು ಹೊತ್ತು ಕುಳಿತಿದ್ದರೋ? ಕೊನೆಗೆ ಗಾಳಿಯ ತಸುವು ಹೆಚ್ಚಿ ಶ್ರುತಿಯು ಇಳಿಯುತ್ತಾ ಬಂದಿತು. ಅದೂ ಎರಡು ಮೂರುಸಲ ಹಾಗಾದ ಮೇಲೆ ತಲೆಯೆತ್ತಿನೋಡಿ, ಚಂದ್ರನು ನೆತ್ತಿಯ ಮೇಲಕ್ಕೆ ಬರುತ್ತಿರುವದನ್ನು ಕಂಡು ಪ್ರೇಮಾವತಿಯು ವೀಣೆಯನ್ನು ಕೆಳಕ್ಕಿಳುಹಿದಳು.

ಮಯೂರನು, 'ಇದೇಕೆ? ಇಷ್ಟುಬೇಗ ನಿಲ್ಲಿಸಿಬಿಟ್ಟಿರಿ' ಎಂದನು.

ಆಕೆಯು ಇದು ಯಾರೆಂದು ಗಾಬರಿಯಾಗಿ ಹಿಂತಿರುಗಿ ನೋಡಿ ನಾಚಿಕೆಯಿಂದ ನೀರಾಗಿ ತಟ್ಟನೆದ್ದು ಪ್ರಣಾಮ ಮಾಡಿದಳು. ಮಯೂರನು ಅಶ್ರುವರ್ಷ ಮಾಡುತ್ತಿರುವ ಕಣ್ಣುಗಳೇ ತನ್ನ ಆನಂದವನ್ನು ಉದ್ಘೋಷಿಸುತ್ತಿರಲು ಆಕೆಯನ್ನು ಯಥಾಯೋಗ್ಯವಾಗಿ ಉಪಚರಿಸಿದನು.

ಕೆಲವು ಹೊತ್ತು ಉಪಚಾರದ ಮಾತುಕಥೆಗಳಾಗಿ ಪತಿಯು ಪತ್ನಿಯನ್ನು ಕೇಳಿದನು: 'ದೇವಿ! ಆ ದಿನ ತಾವು ಕಾಮಾಕ್ಷೀ ದೇವಿಗೆ ಆಭರಣಗಳನ್ನು ಒಪ್ಪಿಸಿದರಲ್ಲ ಅದೇಕೆ?'

ಕೇಳುವ ಪ್ರಶ್ನೆಗೆ ಉತ್ತರ ಕೊಡುವೆನೆಂದು ಆಕೆಯು ಮೊದಲೇ ಮಾತು ಕೊಡದೆ ಇದ್ದಿದ್ದರೆ ಆ ಪ್ರಶ್ನೆಗೆ ಉತ್ತರವು ಬರುತ್ತಲೇ ಇರಲಿಲ್ಲ. ಕೊನೆಗೆ ಯತ್ನವಿಲ್ಲದೆ ಉತ್ತರ ಕೊಟ್ಟಳು: 'ಹರಕೆಯನ್ನು ಸಲ್ಲಿಸಿದೆ ಅಷ್ಟೆ!'

'ಹಾಗೆಂದರೆ?'

'ತಮ್ಮ ದರ್ಶನವಾದ ದಿನ ನನ್ನ ಬಗೆಯು ಒಂದು ಭಾಗ್ಯವನ್ನು ಬಯಸಿತು. ಅದು ಕೈಗೂಡಿತು ಅದಕ್ಕಾಗಿ'

ಮಯೂರನ ಆನಂದವು ಪಾರಾವಾರವಾಯಿತು: 'ನಾನೆಂತಹ ಭಾಗ್ಯವಂತ!' ಎಂದು ಬೀಗಿದನು.

ಪತ್ನಿಯೂ ಪತಿಯ ಅಪ್ಪಣೆಪಡೆದು ಒಂದು ಪ್ರಶ್ನೆಯನ್ನು ಬಲು ನಾಚಿಕೆಯಿಂದ ಕೇಳಿದಳು: 'ನನ್ನನ್ನು ನೋಡಿ ನೋಡಿ ಸನ್ನಿಧಾನವು ನಸುನಗುವುದೇಕೆ?'

ಮಯೂರನು ನಕ್ಕು ಹೇಳಿದನು: 'ಅದೇ? ಭಾವನವರು ಅಂದು ಕೊಟ್ಟ ಒಂದು ಏಟು ಎಂತಹ ಅದೃಷ್ಟದ ಏಟು! ರಾಜ್ಯವನ್ನು ತಂದಿತು. ಸಾಮ್ರಾಜ್ಯ ಲಕ್ಷ್ಮಿಯನ್ನು ತಂದಿತು ಎನ್ನಿಸುತ್ತದೆ. ಅದಕ್ಕೆ!'

ಪ್ರೇಮಾವತಿಯು ಸ್ಮಿತಪ್ರಸನ್ನಳಾಗಿ ನಕ್ಕಳು. ಆ ಸುಂದರಿಯ ಮಂದಹಾಸವು ಚಂದ್ರಿಕೆಗೂ ಅಷ್ಟು ಒಪ್ಪವನ್ನಿಕ್ಕಿತು.

—o—

## ಉಪಸಂಹಾರ.

ಮಯೂರಶರ್ಮನನ್ನು ಮಯೂರವರ್ಮ ಮಹಾರಾಜನನ್ನಾಗಿ ಮಾಡಿದವರು ಪ್ರತಿಯೊಬ್ಬರಿಗೂ ಯಥಾಯೋಗ್ಯವಾಗಿ ಉದಾರಚಿತ್ತದಿಂದ ಮುಕ್ತಹಸ್ತದಿಂದ ಉಪಕಾರಸ್ಮರಣ ಪೂರ್ವವಾಗಿ ಮಹಾರಾಜನೇ ಸ್ವಂತವಾಗಿ ದಾನಮಾಡಿದನು. ಭಂಡಾರವು ಬರಿದಾಯಿತೆಂದು ಮಂತ್ರಿಗಳಿಗೆ ಕೊಂಚ ಅಸಮಾಧಾನವಾದರೂ ಪ್ರಜೆಗಳ ಪ್ರೀತಿಯೆಂಬ ಖನಿಯಿರುವುದೆಂಬ ನಂಬುಗೆಯು ಅವರಿಗೆ ಸಮಾಧಾನವನ್ನು ತಂದಿತು.

* * * *

ಮುಂದೆ ಏನಾಯಿತೆಂಬುವುದು ಚರಿತ್ರೆಯ ವಿಷಯ. ಚರಿತ್ರೆಯು ಗ್ರಂಥಸ್ಥವಾಗದೆ ಶಿಲಾಲಿಪಿಗಳಲ್ಲಿಯೂ ತಾಮ್ರ ಪಟ್ಟಿಗಳಲ್ಲಿಯೂ ಅಡಗಿರುವ ತನಕ ಅದು ಈಚೆಗೆ ಬರುವಂತೆಯೂ ಇಲ್ಲ.

—o—

ಬಿ. ಶ್ರೀನಿವಾಸಯ್ಯಂಗಾರ್, ಪ್ರಿಂಟರ್, ಮನವಾರ್ತೆಪೇಟೆ, ಬೆಂಗಳೂರು ಸಿಟಿ.